


# ಸಂಯುಕ್ತ ರಾಷ್ಟ್ರಸಂಘ

## U. N. O.

ಲೇಖಕರು :
ಎಚ್. ಎಸ್. ಪಾಟೀಲ
ಎಂ. ಎ. ಬಿ. ಕಾಮ್.



೧೭ನೆಯ ವರ್ಷದ ಎರಡನೆಯ ಕುಡಿ

# ಸಂಯುಕ್ತ ರಾಷ್ಟ್ರಸಂಘ

## U. N. O.




ಲೇಖಕರು :
ಎಚ್. ಎಸ್. ಪಾಟೀಲ
ಎಂ. ಎ. ಬಿ. ಕಾಮ್

೧೫ ಮೇ ೧೯೫೫

ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ.

ಉತ್ತಮ ಪ್ರತಿ
೨—೦—೦ ]

ಸಾದಾ ಪ್ರತಿ
[ ೧—೮—೦

## ಮುಂಬರುವ ಪುಸ್ತಕಗಳು

ಜಗತ್ತಿನ ರಾಜಕಾರಣದಲ್ಲಿ ಭಾರತದ ಸ್ಥಾನ
ಭಾಗವತ ಸಾರೋದ್ಧಾರ
ವೇದದಲ್ಲಿಯ ಸಮಾಜ
ಶ್ರೀ ಶಂಕರಾಚಾರ್ಯರ ಚರಿತ್ರ
ಗುರು ಪುರಂದರದಾಸರು

ಇತ್ಯಾದಿ

ಇದಲ್ಲದೆ ಪ್ರಿನ್ಸಿಪಾಲ್ ಗೋಕಾಕ, ಪ್ರೊ. ಮುಗುಳಿ, ಪ್ರೊ. ಮಾಸ್ತಿ ನರಸಿಂಗರಾವ, ಪ್ರೊ. ನಾ. ಕಸ್ತೂರಿ ಮೊದಲಾದವರ ಗ್ರಂಥಗಳು ಪ್ರಕಟವಾಗಲಿವೆ.

C2696 CR

ಮೊದಲನೆಯ ಆವೃತ್ತಿ

೧೯೫೫

ಮುದ್ರಕರು :
ಬಿ. ಎನ್. ಹುದ್ದಾರ.
ಭಾರತ ಮುದ್ರಣಾಲಯ, ಧಾರವಾಡ.

ಪ್ರಕಾಶಕರು
ಬುರ್ಲಿ ಬಿಂದುಮಾಧವ.
ಮಿಂಚಿನಬಳ್ಳಿ ಕಾರ್ಯಾಲಯ,
ಜವಳೀಪೇಟೆ, ಧಾರವಾಡ.

# ವಾಚಕರಲ್ಲಿ ಬಿನ್ನಹ

ಎಂತಹ ರಾಷ್ಟ್ರೀಯ ಆಪತ್ತಿನಲ್ಲಿಯೂ ಸಕಾಲಕ್ಕೆ ಹೊರಟ ಬಳ್ಳಿಯು ೪ ತಿಂಗಳು ತಡವಾದುದೇಕೆ ? ಎಂದು ವಾಚಕರಿಗೆ ಅನಿಸಿರುವದು ಸ್ವಾಭಾವಿಕ . ಈ ವಿಲಂಬವು ಅಪರಾಧವೇ ಸೈ, ವಾಚಕರು ಅದಕ್ಕಾಗಿ ಕ್ಷಮಿಸಬೇಕು. ಸಂಕಲ್ಪ ಮಾಡಿದ ಪುಸ್ತಕವನ್ನು ಕೊಟ್ಟೆಯೇ ತೀರಬೇಕೆಂಬ ಹಟವೇ ಇದಕ್ಕೆ ಕಾರಣವು. ಬಳ್ಳಿಯು ಆರ್ಥಿಕ ಆಪತ್ತಿನಲ್ಲಿ ಸಿಲುಕಿದೆ ಎಂದು ಪುನರುಚ್ಚರಿಸುವ ಅವಶ್ಯಕತೆಯೇ ಇಲ್ಲ.

'ಸಂಯುಕ್ತ ರಾಷ್ಟ್ರಸಂಘವು' ಮಾನವರ ಜೀವನದಲ್ಲಿ ಇಂದು ಮಹತ್ವದ ಸ್ಥಾನವನ್ನು ಪಡೆದಿದೆ. ರಾಜಕೀಯ ರಂಗದಲ್ಲಿ ಜಗತ್ತಿನ ಭವಿತವ್ಯದೊಡನೆ ಆಟವಾಡುತ್ತಿರುವ ಈ ಸಂಘದ ಧ್ಯೇಯ-ಧೋರಣೆಗಳೇನು ? ಇದರ ಬಲವೆಲ್ಲಿದೆ ? ಕಾರ್ಯದ ಬಗೆ ಯಾವುದು? ಎಂಬುದನ್ನು ತಿಳಿಯಲು ಅಪೇಕ್ಷಿಸಿದರೆ, ಕನ್ನಡದಲ್ಲಿ ಗ್ರಂಥಗಳೇ ಇಲ್ಲ. ಈ ಅಪೇಕ್ಷೆಯೇ ಈ ಗ್ರಂಥಕ್ಕೆ ಪ್ರೇರಣೆಯು. ಮಾನವ ಕುಲವೇ ಒಂದು, ಎಂಬ ಉದಾತ್ತ ಆದರ್ಶವನ್ನು ಇಟ್ಟುಕೊಂಡು, ಜಗತ್ತಿನಲ್ಲಿ ಶಾಂತಿ, ಸುಖ, ಸಮೃದ್ಧಿಗಳು ನೆಲೆಗೊಳ್ಳಲು ಯತ್ನಿಸುತ್ತಿರುವ ಸಂಯುಕ್ತ ರಾಷ್ಟ್ರಸಂಘದ ಜೀವನವನ್ನು ಇದರಲ್ಲಿ ಚಿತ್ರಿಸಲಾಗಿದೆ. ಅದರ ಗುಣಾವಗುಣಗಳನ್ನು ವಿಮರ್ಶಿಸಲಾಗಿದೆ. ಮಾನವನ ಮೂಲ ಸ್ವಭಾವವಾದ ತ್ರಿಗುಣಗಳು ಸಂಯುಕ್ತ ರಾಷ್ಟ್ರಸಂಘದಲ್ಲಿ ಹೇಗೆ ಆಟವಾಡುತ್ತಿವೆ, ಎಂಬುದನ್ನು ಇಲ್ಲಿ ನೋಡಲು ದೊರೆಯುವದು. 'ಸರ್ವೇಜನಾಃ ಸುಖಿನೋಭವಂತು, ಎಂಬ ಮಂತ್ರ ದೃಷ್ಟಾರರು ಜಗತ್ತನ್ನು ಉದಾತ್ತತೆಯ ಕಡೆಗೆ ಒಯ್ಯಲು ಯಾವಾಗಲು ಯತ್ನಿಸುತ್ತಾರೆ, ಆದರೆ ತ್ರಿವಿಧ ಜೀವರುಗಳು ನಿತ್ಯರಾಗಿರುವದರಿಂದ ಅದು ಸಾಧ್ಯವಾಗಿಲ್ಲ. ಸತ್ವಗುಣವು ಪ್ರಧಾನವಾಗಿರುವ ಕಾಲದಲ್ಲಿ ಇಂತಹ ಉದಾತ್ತತೆಗೆ ಜಯದೊರೆತಂತೆಯೂ ರಾಜಸ, ತಾಮಸ ಗುಣಗಳು ಉತ್ಸಾಹವಾದಾಗ ಎಲ್ಲವೂ ಪಲ್ಲಟವಾದಂತೆಯೂ ಕಾಣುವದು. ಇದು ಜಗತ್ತಿನ ಸ್ವಭಾವ, ಈ ಮಾನವ ಸ್ವಭಾವವನ್ನೇ ಬದಲು ಮಾಡುತ್ತೇವೆನ್ನುವದು

ಈಶ್ವರೀ ಸಂಕಲ್ಪದ ವಿರುದ್ಧವಾಗಿದೆ. ಆದುದರಿಂದ ರಾಜಸ, ತಾಮಸ ಶಕ್ತಿಗಳು ಮಾನವನ ಪ್ರಗತಿಗೆ ವಿರೋಧವಾಗದಂತೆ ಆ ಶಕ್ತಿಗಳ ಉಪ ಯೋಗವು ಯೋಗ್ಯ ಕಾರ್ಯಗಳಿಗೆ ಆಗುವಂತೆ ಅವುಗಳನ್ನು ನಿಯೋಜಿಸುವದರಲ್ಲಿಯೇ ಮಾನವನ ಬುದ್ಧಿವಂತಿಕೆಯಿದೆ, ಹಿತವಿದೆ. ನಾಯಿಯ ಬಾಲದಂತೆ, ಈ ಜಗತ್ತು ಯಾವಾಗಲೂ ಇರತಕ್ಕದ್ದೆ. ಅದಕ್ಕೆ ನಿರಾಶೆಯಾಗುವ ಕಾರಣವಿಲ್ಲ. ಉದಾತ್ತವಾದ ಗುರಿಯತ್ತ ಧೈರ್ಯದಿಂದ ಮುನ್ನಡೆಯುವದೊಂದೇ ರಾಜಮಾರ್ಗ. ಮಾನವ ಕುಲದ ಹಿತವನ್ನು ಬಯಸುವ ಸಂಯುಕ್ತ ರಾಷ್ಟ್ರಸಂಘದ ಈ ದಿಶೆಯಲ್ಲಿ ಕಾರ್ಯೋ ನ್ಮುಖವಾಗುವಂತೆ ಮಾಡುವದೇ ಇಂದಿನ ಕಾರ್ಯವಾಗಿದೆ. ಈ ದೃಷ್ಟಿ ಯಿಂದ ಕನ್ನಡಿಗರಿಗೆ ಈ ಗ್ರಂಥವು ಉಪಯುಕ್ತವಾದೀತೆಂದು ಬಗೆದಿದ್ದೇನೆ.

ಇದರ ಲೇಖಕರಾದ ಶ್ರೀ ಪಾಟೀಲ ಹನುಮಂತರಾಯರು ಬಳ್ಳಿಯ ವಾಚಕರಿಗೆ ಹೊಸಬರಲ್ಲ. ಈ ಮೊದಲು ತಕ್ಕಡಿಯನ್ನು ಹಿಡಿದುಕೊಂಡು ನಿಮ್ಮ ದರ್ಶನ ತೆಗೆದುಕೊಂಡಿದ್ದಾರೆ. ಈಗ ಭಾರತದ ರಾಜಕೀಯರಂಗದ ರಾಜಧಾನಿಯಲ್ಲಿ ನಿಂತು, ಸಂಯುಕ್ತ ರಾಷ್ಟ್ರಸಂಘದ ಚಿತ್ರವನ್ನು ಕನ್ನಡಿಗರಿಗೆ ನೀಡಿದ್ದಾರೆ. ಬಳ್ಳಿಯ ಆಪತ್ಕಾಲದಲ್ಲಿ ತಾವು ಆಪತ್ತಿನಲ್ಲಿದ್ದರೂ ಕೇವಲ ಮಿತ್ರತ್ವಕ್ಕಾಗಿ ಬಳ್ಳಿಯ ನೆರವಿಗೆ ಬಂದುದಕ್ಕಾಗಿ ಅವರಿಗೆ ಆಭಾರಿಯಾಗಿ ದ್ದೇನೆ. ಕನ್ನಡಿಗರು ಎಂದಿನಂತೆ ಬಳ್ಳಿಯನ್ನು ಪ್ರೋತ್ಸಾಹಿಸುವರೆಂದು ಆಶಿಸುವ.

ವೈಶಾಖ ಬಹುಳ ಅಷ್ಟಮಿ
೧೫-೫-೫೫

ತಮ್ಮ ಬಂಧು
**ಬುರ್ಲಿ ಬಿಂದುಮಾಧವ.**

# ಅರಿಕೆ

ಈಗ ಕೆಲವು ದಿನಗಳ ಹಿಂದೆ ಸಂಯುಕ್ತ ರಾಷ್ಟ್ರಸಂಘದ ಸಾಮಾನ್ಯ ಸಭೆಯ ಅಧ್ಯಕ್ಷಪದವು ಭಾರತದ ಪ್ರತಿನಿಧಿಗೆ ದೊರೆತ ಸಂತೋಷದ ಸಂಭ್ರಮದಲ್ಲಿ ಸಂಯುಕ್ತ ರಾಷ್ಟ್ರಸಂಘದ ವಿಷಯವಾಗಿ, ಕನ್ನಡದಲ್ಲಿ ಒಂದು ಪುಸ್ತಕವನ್ನು ಬರೆಯಬೇಕು ಎಂಬ ವಿಚಾರವು ನನಗೆ ಹೊಳೆಯಿತು. ಆ ಮೇರೆಗೆ ಅಂದು ಆರಂಭವಾದ ಕಾರ್ಯವು ಇಂದು ಮಿಂಚಿನ ಬಳ್ಳಿಯ ಸಂಪಾದಕರ ಪ್ರಭಾವ ಮತ್ತು ಪ್ರೋತ್ಸಾಹಗಳ ಫಲವಾಗಿ ಪುಸ್ತಕ ರೂಪ ದಲ್ಲಿ ಪ್ರಕಟವಾಗುತ್ತಿದೆ.

ಅಂತರ್ರಾಷ್ಟ್ರೀಯ ರಾಜಕೀಯದಲ್ಲಿ ಭಾರತವು ಎಂದಿನಿಂದಲೂ ಆಸಕ್ತಿ ಯನ್ನು ವಹಿಸುತ್ತ ಬಂದಿದ್ದರೂ ಸ್ವಾತಂತ್ರ್ಯದ ನಂತರವಲ್ಲಿಯೆ ಅದಕ್ಕೆ ಪೂರ್ಣ ಅವಕಾಶ ಮತ್ತು ಅಲ್ಪವಿಕಾಸಗಳನ್ನು ಪಡೆಯಲು ಸುಸಾಧ್ಯವಾಗಿ ರುತ್ತದೆ. ಹಿಂದಿನ ಕಾಲದಲ್ಲಿ ಭಾರತದ ಪರವಾಗಿ ಅನ್ಯರಾಷ್ಟ್ರೀಯರು ಇಲ್ಲವೆ ಅವರ ಅನುಚರರು ಪ್ರಪಂಚ ಪರಿಷತ್ತುಗಳಲ್ಲಿ ಭಾಗವಹಿಸುತ್ತಿದ್ದರು. ಆ ಸಮಯದಲ್ಲಿ, ನಿಯಮಿತವಾದ ಕ್ಷೇತ್ರದಲ್ಲಿಯಾದರೂ, ಭಾರತೀಯರು ತಮ್ಮ ವರ್ಚಸ್ಸಿನಿಂದ ಅಂತಹ ಸಭೆಗಳ ನಿರ್ಣಯಗಳನ್ನು ರೂಪಿಸುತ್ತಿದ್ದರು. ಇಂದು ಆ ಬಗೆಯ ಸೇವೆಯನ್ನು ಸಲ್ಲಿಸಲಿಕ್ಕೆ ಹೊಸ ಸುಸಂಧಿಗಳು ಅಂತರ್ರಾಷ್ಟ್ರೀಯ ಸಂಘ ಸಂಸ್ಥೆಗಳಲ್ಲಿ ದೊರೆಯುತ್ತಿರುವವು. ಅಷ್ಟೇ ಅಲ್ಲದೆ ಪ್ರಪಂಚದ ರಾಜನೀತಿಯನ್ನು ಭಾರತೀಯ ಪರಂಪರೆಯ ಮೇರೆಗೆ ಪರಿವರ್ತಿಸಲು ಅಪೂರ್ವವಾದ ಅವಕಾಶವು ಪ್ರಾಪ್ತವಾಗಿದೆ. ಈ ಪರಿಸ್ಥಿ ತಿಯ ನಿದರ್ಶನವು ಕಳೆದ ಏಳೆಂಟು ವರ್ಷಗಳಲ್ಲಿ ಭಾರತೀಯ ಪ್ರತಿನಿಧಿಗಳು ಕೈಕೊಂಡಕಾರ್ಯ ಮತ್ತು ಪಡೆದ ಯಶಸ್ಸಿನ ಮೇಲಿಂದ ಸ್ಪಷ್ಟವಾಗುತ್ತಿದೆ.

ಅಂತರ್ರಾಷ್ಟ್ರೀಯ ಸಂಪರ್ಕವು ಈಗ ಅಭಿವೃದ್ಧಿ ಹೊಂದಿದ ಸೌಕರ್ಯ ಗಳ ಮೂಲಕ ಹೆಚ್ಚು ಸುಗಮವಾಗಿದೆ; ಅದರಂತೆಯೇ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಪ್ರಚಲಿತವಿರುವ ಸಮಸ್ಯೆಗಳ ವ್ಯಾಪ್ತಿಯ ಅರಿವೂ ನಮಗೆ

ಸರಿಯಾಗಿ ಆಗಹತ್ತಿದೆ. ಅಂತೆಯೆ ಈಗ ಪ್ರಾಪ್ತವಾಗಿರುವ ಪರಿಸ್ಥಿತಿಯಲ್ಲಿ ಭಾರತವು ತನ್ನ ಕಾಣಿಕೆಯನ್ನು ಸಲ್ಲಿಸಬೇಕಾಗಿದೆ. ಅಂತರ್ರಾಷ್ಟ್ರೀಯ ಸೌಹಾರ್ದ ಮತ್ತು ವಿಶ್ವಶಾಂತಿಗಳು ಭದ್ರವಾಗಿ ನೆಲೆಗೊಳ್ಳಬೇಕಾದರೆ ಭಾರತೀಯನು ಕೇವಲ ಜಗತ್ತಿನ ಸಮಸ್ಯೆಗಳ ಮೂಲ, ಮತ್ತು ವ್ಯಾಪ್ತಿಗಳನ್ನು ಅಷ್ಟೆ ಅಲ್ಲದೆ ಅವುಗಳ ಪರಿಹಾರದಲ್ಲಿ ತನ್ನ ಹೊಣೆಯನ್ನೂ ತಿಳಿಯಬೇಕಾಗಿರುವದು ಅಗತ್ಯವಾಗಿದೆ. ಅಂತೆಯೆ ಅಂತರ್ರಾಷ್ಟ್ರೀಯ ಸಂಘಟನೆಯಲ್ಲಿ ಪರಮೋಚ್ಚ ಸಾಧನವೆಂದು ಸ್ಥಾಪಿತವಾದ ಸಂಯುಕ್ತ ರಾಷ್ಟ್ರಸಂಘದ ರಚನೆ ಮತ್ತು ಅದರ ನೀತಿಯನ್ನು ರೂಪಿಸಲಿಕ್ಕೆ ಭಾರತವು ಮಾಡಿದ ಯತ್ನ, ಇವುಗಳ ಪರಿಚಯವನ್ನು ಮಾಡಿಕೊಡುವ ಉದ್ದೇಶದಿಂದ ಈ ಪುಸ್ತಕವು ಬರೆಯಲಾಗಿದೆ.

ಕನ್ನಡದಲ್ಲಿ ಶಾಸ್ತ್ರೀಯ ವಿಷಯಗಳ ಮೇಲೆ ಬರೆಯಲ್ಪಟ್ಟ ಗ್ರಂಥಗಳೇ ಕಡಿಮೆ; ಅದರಲ್ಲಿ ರಾಜನೀತಿಯ ವಿಷಯವಾಗಿ ಪ್ರಕಟವಾದುವು ಇನ್ನೂ ಅಲ್ಪ. ಯಾಕಂದರೆ ಗಂಭೀರ ವಿಷಯಗಳ ಬಗ್ಗೆ ಬರೆದ ಪುಸ್ತಕಗಳನ್ನು ಪ್ರಕಟಿಸುವ ಯಾವ ಯೋಜನೆಯೂ ಒಂದು ಸಾಹಸವೆ! ಇಂತಹ ಸಾಹಸಕ್ಕೆ ಕೈಹಾಕಿದ ಆಚಾರ್ಯ ಬುರ್ಲಿಯವರು ಕನ್ನಡಕ್ಕೆ ವಿಜ್ಞಾನ ಗ್ರಂಥಗಳ ಕಾಣಿಕೆಯನ್ನು ಸಲ್ಲಿಸಿ, ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇತ್ತ ಮಿಂಚಿನ ಬಳ್ಳಿಯಲ್ಲಿ ಈ ಮೊದಲೇ ವಾಣಿಜ್ಯದ ಒಂದು ಸೆಳಕನ್ನು ಬೀರಿದ ನಾನು, ಈಗ ರಾಜನೀತಿಯ ಇನ್ನೊಂದು ಸೆಳಕನ್ನು ಸೇರಿಸುವಂತೆ ಮಾಡಿ ಆಚಾರ್ಯರು ನನ್ನ ಪ್ರಯತ್ನವನ್ನು ಸಾರ್ಥಕಗೊಳಿಸಿದ್ದಾರೆ. ಅವರಿಗೆ ನನ್ನ ಅನಂತ ವಂದನೆಗಳು.

ಈ ಪುಸ್ತಕದಲ್ಲಿ ಸಮರ್ಪಕವಾದ ಚಿತ್ರಗಳನ್ನು ಪ್ರಕಟಿಸಲಿಕ್ಕೆ ನವದೆಹಲಿಯಲ್ಲಿರುವ ಸಂಯುಕ್ತ ರಾಷ್ಟ್ರಸಂಘದ ಸಮಾಚಾರ ಕೇಂದ್ರವು ನನಗೆ ತುಂಬಾ ಸಹಾಯವನ್ನು ಮಾಡಿದೆ; ಆ ಕಾರಣಕ್ಕಾಗಿ ಆ ಕಾರ್ಯಾಲಯದ ಅಧಿಕಾರಿಗಳಿಗೆ ನಾನು ಉಪಕೃತನಾಗಿದ್ದೇನೆ.

ವೈ. ಬ. ಅಷ್ಟಮಿ, }
ಗಜನೆಯ ಮೆ. ಗಣಾಚಾ } ಪಾಟೀಲ ಹನಮಂತರಾಯರು

# ಮುನ್ನುಡಿ



ಸಂಯುಕ್ತ ರಾಷ್ಟ್ರಸಂಘದಂತಹ ಶ್ರೇಷ್ಠವಾದ ಸಂಘಟನೆಯ ಸ್ಥಾಪನೆ ಮತ್ತು ಕಾರ್ಯ ಇವುಗಳ ವಿಷಯವಾಗಿ ಶ್ರೀ. ಪಾಟೀಲ ಅವರು ಕನ್ನಡ ದಲ್ಲಿ ಈ ಪುಸ್ತಕವನ್ನು ಬರೆದುದಕ್ಕಾಗಿ ನನಗೆ ಸಂತಸವಾಗಿದೆ. ವಿಶ್ವದ ಶಾಂತಿಯನ್ನು ಲೋಕತಂತ್ರದ ಮಾರ್ಗವಾಗಿ ಪಡೆದು ಅದು ಜಗತ್ತಿನಲ್ಲಿ ಸ್ಥಿರ ವಾಗಿ ಬಾಳಬೇಕೆಂಬ ದೃಷ್ಟಿಯಿಂದ ಶಾಂತಿಪ್ರಿಯರೆಲ್ಲರೂ ಈ ಸಂಯುಕ್ತ ರಾಷ್ಟ್ರಸಂಘದಲ್ಲಿ ಉತ್ಕಟವಾದ ಶ್ರದ್ಧೆಯುಳ್ಳವರಾಗಿದ್ದಾರೆ. ಇಂತಹ ಅಮೋಘ ವಾದ ಸಂಘಟನೆಯ ಸಂಸ್ಥಾಪಕ ಸದಸ್ಯರಾಷ್ಟ್ರಗಳಲ್ಲಿ ಭಾರತವೂ ಒಂದಾ ಗಿದೆ. ಸಂಯುಕ್ತ ರಾಷ್ಟ್ರಸಂಘವೆಂಬ ಈ ನೂತನ ಶಿಶುವಿಗೆ ಸಕಲ ರೀತಿಯ ಪೋಷಣೆಯನ್ನು ನೀಡುವುದು ನಮ್ಮ ಕರ್ತವ್ಯವಾಗಿದೆ.

ಸಂಯುಕ್ತ ರಾಷ್ಟ್ರಸಂಘದ ಅಧಿಲೇಖನದಲ್ಲಿ ಸೇರ್ಪಡೆಯಾದ ಕೆಲವು ಮಹತ್ವಪೂರ್ಣ ನಿಬಂಧನೆಗಳು ನಮ್ಮ ನಾಡಿನ ಸಂವಿಧಾನದಲ್ಲಿಯೂ ಕಂಡುಬರುವದು ಆನಂದಾಶ್ಚರ್ಯದ ಸಂಗತಿಯಾಗಿದೆ. ಅದೊಂದು ಅಕಲ್ಪಿತ ಯೋಗಾಯೋಗ. ಅಂತೆಯೆ ನಮ್ಮ ವಿದೇಶ ನೀತಿಯು ಸಂಯುಕ್ತರಾಷ್ಟ್ರಸಂಘದ ಉದ್ದೇಶ ಮತ್ತು ಆದರ್ಶಗಳಿಗೆ ಅನುರೂಪವಾಗಿದೆ.

ವಿಶ್ವಸಂಸ್ಥೆಯ ಸದಸ್ಯರಾಗಿದ್ದ ಅರವತ್ತು ರಾಷ್ಟ್ರಗಳೂ ಆ ಸಂಸ್ಥೆಯ ತತ್ವಗಳು ಮತ್ತು ವಿಧೇಯಕಗಳನ್ನು ನಿಷ್ಠೆಯಿಂದಲೂ, ಸಂಪೂರ್ಣವಾಗಿಯೂ ನಿರಂತರವಾಗಿಯೂ ಆಚರಿಸುವದು ಉಚಿತವಾಗಿದೆ. ಅಧಿಲೇಖನದ ಧ್ಯೇಯ ವನ್ನು ಏಕೈಕಭಾವದಿಂದ ಸಾಧಿಸುವ ವರ್ಣ-ವರ್ಗ, ಜಾತಿ-ಮತ ಮೊದಲಾದ ಯಾವ ಭೇದಭಾವವೂ ಇಲ್ಲದೆ, ಇಡಿಯ ಮಾನವಕುಲವು ಒಂದಾಗಿ ಬಾಳುವಂತೆ ಮತ್ತು ಆ ಕುಟುಂಬವು ವಿಶ್ವಾಧಿಪತ್ಯದ ಒಂದೇ ಆಡಳಿತದಲ್ಲಿ ತನ್ನ ಸುಖ ಮತ್ತು ಕ್ಷೇಮವನ್ನು ಕಾಪಾಡಿಕೊಳ್ಳುವಂತೆ ಲೋಕಶಾಂತಿಯನ್ನು ಪಡೆಯುವದೇ ಈ ಎಲ್ಲ ರಾಷ್ಟ್ರಗಳ ಪ್ರಯತ್ನವು.

ಈ ಪ್ರಪಂಚದಲ್ಲಿ ಈಗ ಉಪನಿವೇಶವಾದ, ಮತ್ತು ಸಾಮ್ರಾಜ್ಯವಾದ ಗಳಿಗೆ ಸ್ಥಾನವಿಲ್ಲ. ಪ್ರತಿಯೊಂದು ರಾಷ್ಟ್ರದ ಪ್ರಜಾಕೋಟಿಗೆ ತನಗೆ ಉಚಿತ ಕಂಡರೀತಿಯಲ್ಲಿ ತನ್ನ ಜೀವನವನ್ನು ರೂಪಿಸಿಕೊಳ್ಳುವ ಅಧಿಕಾರವು ಜನ್ಮ

ಸಿದ್ಧವಾಗಿದೆ. ಕೇವಲ ತನ್ನ ಉಚ್ಚಸೇನಾಬಲದಿಂದ ಯಾವುದೊಂದು ದೇಶಕ್ಕೆ, ಬೇರೆ ದೇಶಗಳ ಪ್ರಭುತ್ವವನ್ನಾಗಲಿ, ನೇತೃತ್ವವನ್ನಾಗಲಿ ಪಡೆಯುವ ಅರ್ಹತೆಯು ದೊರೆಯಲಾರದು. ಅಷ್ಟು ಸುದೈವವಿಲ್ಲದ ಅನ್ಯರಾಷ್ಟ್ರಗಳ ವಿಷಯವಾಗಿ ಯಾವುದೊಂದು ರಾಷ್ಟ್ರವು ಶ್ರೇಷ್ಠತಾಭಾವವನ್ನು ತಳೆಯುವ ವರೆಗೆ ಯುದ್ಧದ ನಿಜವಾದ ಭೀತಿಯು ಅಚ್ಚಳಿಯದೆ ಉಳಿಯುತ್ತದೆ. ಪ್ರಪಂಚದ ರಾಷ್ಟ್ರಗಳು ತಮ್ಮತಮ್ಮೊಳಗಿನ ಭಿನ್ನಾಭಿಪ್ರಾಯದ ಪರಿಹಾರವನ್ನು ಸ್ನೇಹಪೂರ್ಣವಾದ ಸಂವಾದದಿಂದಲೂ ಮತ್ತು ಸೌಹಾರ್ದಮಯವಾದ ಸಮ್ಮೇಳನಗಳಿಂದಲೂ ಬಗೆಹರಿಸಿಕೊಳ್ಳುವ ಮನೋಭಾವವುಳ್ಳವರಾಗ ಬೇಕು. ತಮಗೆ ಅಲ್ಪಲಾಭವಾದರೂ ಚಿಂತೆಯಿಲ್ಲ, ಎರಡನೆಯವರಿಗೆ ಹೆಚ್ಚು ಸಹಾಯ ಮಾಡಬೇಕೆಂಬ ಸಂತೋಷದ ಭಾವನೆಯೇ ಶ್ರೇಷ್ಠವಾದುದು. ಭಿನ್ನಾಭಿಪ್ರಾಯಗಳ ಪರಿಹಾರಕ್ಕೆ ದಂಡೋಪಾಯವಂದೇ ಉಪಾಯವೆಂದು ತಿಳಿಯುವ ವರೆಗೆ ವಿಶ್ವಶಾಂತಿಯ ಸಿದ್ಧಿಯು ಸಂದಿಗ್ಧವಾಗಿಯೆ ಉಳಿಯುವದು.

ಇಂದಿನ ಮಕ್ಕಳಿಗಾಗಿ ಪ್ರಪಂಚವು ಸುಖಮಯ ಮತ್ತು ಸ್ನೇಹ ಪೂರ್ಣವಾಗಬೇಕು. ಯಾವುದೊಂದು ರಾಕ್ಷಸೀ ಮನೋವೃತ್ತಿಯ ರಾಷ್ಟ್ರದ ಸ್ವಾರ್ಥಕ್ಕಾಗಿ ಮತ್ತು ಪ್ರತಿಷ್ಠೆಗಾಗಿ ಈಗಿನ ನಿಷ್ಪಾಪ ಬಾಲಕರನ್ನು ಯುದ್ಧೋಪಕರಣವೆಂದು ಬಲಿಕೊಡುವದು ಒಳಿತಲ್ಲ. ಸಂಯುಕ್ತ ರಾಷ್ಟ್ರಸಂಘದ ಸದಸ್ಯರಾದ ನಾವು ಧ್ಯೇಯನಿಷ್ಠ ಮತ್ತು ಲೋಕಹಿತರತ ದೃಷ್ಟಿಯಿಂದ ಒಂದಾಗಿ ದುಡಿದರೆ, ಅದ್ಭುತವಾದ ಶಕ್ತಿಯುಳ್ಳ ಈ ಸಂಘಟ ನೆಯ ಮೂಲಕ ಇಂತಹ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಬಹುದು. ಹೃತ್ಪೂರ್ವಕ, ಪ್ರಾಮಾಣಿಕ ಮತ್ತು ವಾಸ್ತವವಾದ ದಾರಿಯಲ್ಲಿ ನಾವು ಸಂತತವಾಗಿ ಸಾಗಿದರೆ ಇದೇನು ಅಸಾಧ್ಯವಲ್ಲ. ಈ ಆಶಯದಲ್ಲಿ ನಾವು ಮಾನವ ಕುಲದ ಸೇವೆಯನ್ನು ಸಲ್ಲಿಸುವಂತೆ ಪರಮಾತ್ಮನು ನಮಗೆ ಅಭಯ ವನ್ನು ನೀಡಲಿ, ಮಾರ್ಗವನ್ನು ತೋರಲಿ ಎಂದು ನಾನು ಪ್ರಾರ್ಥಿಸುತ್ತೇನೆ.

ಕ್ಯಾನ್‌ಬೆರಾ
೯ನೆಯ ಮೇ ೧೯೫೫

ಕೆ. ಎಂ. ಕಾರ್ಯಪ್ಪ
ಜನರಲ್
ಆಸ್ಟ್ರೇಲಿಯಾ ಮತ್ತು ನ್ಯೂಝೀಲಂಡ್‌ಗಳಲ್ಲಿ
ಭಾರತದ ರಾಯಭಾರಿ

# ವಿಷಯ ಸೂಚಿ

ಮಾನವನ ಉನ್ನತಿಗಾಗಿ ಅಣುಶಕ್ತಿಯ ಉಪಯೋಗ-ನಿಯಂತ್ರಣದ ನಿರರ್ಥಕ ವಾದವಿವಾದ – ಶಸ್ತ್ರಾಸ್ತ್ರಗಳಪೌರುಷ, ಸಂಯುಕ್ತ ರಾಷ್ಟ್ರಸಂಘದ ಆದರ್ಶಕ್ಕೆ ಅಪಮಾನ.

೪. ಪ್ರತಿಭಟನೆ ಪುಟ ೯೮

ಮನಸ್ಸಿದ್ದರೂ ಮಾತನಾಡದ ಸ್ಥಿತಿ-ಸಾತ್ವಿಕ ಪ್ರತಿಭಟನೆ, ಅಂಗರಚನೆಯ ಚರ್ಚೆಯಿಂದ ಮೊದಲಾದ ಸಂಯುಕ್ತ ರಾಷ್ಟ್ರ ಸಂಘದ ಎರಡು ಬಣಗಳು–ಬಲಕ್ಕೆ ಹಿರಿಯ ರಾಷ್ಟ್ರಗಳಾದರೆ ಬೆಂಬಲಕ್ಕೆ ಕಿರಿಯ ರಾಷ್ಟ್ರಗಳು—ಭಾರತದ ಅಲಿಪ್ತನೀತಿ—ಇಂಡೋನೇಶಿಯಾದಲ್ಲಿ ದಾಸ್ಯವನ್ನು ಶಾಶ್ವತಗೊಳಿಸುವ ಪ್ರಯತ್ನ–ಭಾರತದ ಪ್ರತಿಭಟನೆ - ಪಕ್ಷವಾದವನ್ನು ಖಂಡಿಸಿ ನ್ಯಾಯವಾದವನ್ನು ಭಾರತವು ಮಂಡಿಸಿತು. ವಿಶ್ವಸಂಸ್ಥೆಯ ಆಧಾರ ಸಾಧನೆಗೆ ಪೋಷಕವಾದ ಪ್ರಯತ್ನ, ಕೋರಿಯದ ಸಮಸ್ಯೆ, ಭಾರತವು ಶಾಂತಿದಲವೆಂದು ಸೇವೆಯನ್ನು ಸಲ್ಲಿಸಿದ ಸಂದರ್ಭ, ರಾಷ್ಟ್ರಮಂಡಲದ ಮುಖಾಂತರ ಸಂಧಾನ ಪ್ರಯೋಗ, ಜಿನೀವಾ ಸಮ್ಮೇಳನದ ವೈಶಿಷ್ಟ್ಯ, ವಿಶ್ವಶಾಂತಿಗೆ ಮುಕ್ತಮಾರ್ಗ, ದೂಷಿತ ಮನಸ್ಸು ಮತ್ತು ಸಂಪ್ರದಾಯ ಶರಣತೆಗಳು ವಿಶ್ವ ಸಂಸ್ಥೆಯ ತೊಡಕುಗಳು, ಪರಿಸ್ಥಿತಿಯ ಪರಿವರ್ತನೆಯನ್ನು ಅರಿಯಬೇಕಾದ ಆವಶ್ಯಕತೆ, ನವೀನ ಚೀನದ ಪುನರಾಗಮನ.

೫. ಮನೋರಥಕ್ಕೆ ಯತ್ನಾಶ್ವಗಳು ಪುಟ. ೧೬೦

ವಿಶ್ವಸಂಸ್ಥೆಯಲ್ಲಿ ವಿರುದ್ಧ ತತ್ವಪ್ರಣಾಲಿಯ, ಡಂಭಾಚಾರ ರಾಷ್ಟ್ರಮಂಡಲದ ರೂಪಾಂತರ, ಭಾರತವು ಅದರ ಸದಸ್ಯತ್ವಕ್ಕೆ ಒಪ್ಪಿಕೊಂಡ ವೈಶಿಷ್ಟ್ಯ, ಅಜಾತ ಶತ್ರುಭಾರತ, ವಿಶ್ವಪ್ರೇಮವೇ ಭಾರತದ ಮೂಲಮಂತ್ರ, ದ್ವೇಷದಂಡಗಳ ನೀತಿಗೆ ಭಾರತವು ಒಪ್ಪದ ಸ್ಥಿತಿ, ಬಹಿರಂಗದಿಂದ ಕಾರ್ಯರೂಪದಲ್ಲಿ ತಂದ ನೀತಿಯಿಂದ ವಿಶ್ವಸಂಸ್ಥೆಯ ಆದರ್ಶ ಸಾಧನೆಗೆ ಭಾರತವು ಬಲವನ್ನು

ನೀಡುತ್ತಲಿದೆ, ಕೋಲಂಬೋಯೋಜನೆ, ಸ್ವಾವಲಂಬನ ಮತ್ತು ಪರೋಪಕಾರಗಳು ಮೂಲಸೂತ್ರಗಳು, ತೃತೀಯ ಪಂಥವೆಂಬ ದೂರು ಮತ್ತು ಸ್ವಾರ್ಥ ಸಾಧನೆಯ ದೋಷಾರೋಪಣೆ, ಅದನ್ನು ಸಫಲಗೊಳಿಸಲಿಕ್ಕೆ ಯತ್ನಗಳನ್ನು ಕೈಕೊಳ್ಳಬೇಕು. ಧ್ಯೇಯದಂತೆ ಧರ್ಮವನ್ನು ಆಚರಿಸುವ ಧೈರ್ಯ ಬೇಕು. ಸಂಕಲ್ಪದ ಸಿದ್ಧಿಗಾಗಿ ಸಾಧನ ಅಗತ್ಯ, ಭಾರತವು ಕೇವಲ ಒಂದು ನಿಮಿತ್ತ, ವಿಶ್ವದ ರಾಜನೀತಿಯಲ್ಲಿ ಮತ್ತು ಅಂತರ್ರಾಷ್ಟ್ರೀಯ ಸಂಘಟನೆಯಲ್ಲಿ ನವೀನ ನೀತಿಯ ಅವತಾರ.

## ಚಿತ್ರಗಳು







ರಾಜನೀತಿನಿಪುಣ

ನ್ಯಾಯಮೂರ್ತಿ ಸಂವಿಧಾನಪ್ರವೀಣ

ಸಂಯುಕ್ತರಾಷ್ಟ್ರಸಂಘದಲ್ಲಿ

ಭಾರತದ

ಸ್ಥಿರ ಪ್ರತಿನಿಧಿ

ಅಂತರ್ರಾಷ್ಟ್ರೀಯ ನ್ಯಾಯಮಂದಿರದ ನ್ಯಾಯಾಧೀಶ

ಎಂದು

ಭಾರತದ ಕೀರ್ತಿ, ಗೌರವಗಳನ್ನು ಹೆಚ್ಚಿಸಿದ

## ಶ್ರೀ ಬೆನಗಲ್ಲ ನರಸಿಂಗರಾಯರು

ಅವರಿಗೆ

**ಅರ್ಪಣೆ**

೧೫—೫—೧೯೫೫ —ಲೇಖಕ

# ಸಂಯುಕ್ತ ರಾಷ್ಟ್ರಸಂಘದ ಘೋಷಣೆ

ಸಂಯುಕ್ತರಾಷ್ಟ್ರಸಂಘದ ತಾಮ್ರಪಟದಂತೆ, ಸಂಯುಕ್ತರಾಷ್ಟ್ರವೆಂಬ ಅಂತರರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಲು, ಸಾನ್‌ಫ್ರಾನ್ಸಿಸ್‌ಕೋದಲ್ಲಿ ನೆರೆದ ನಮ್ಮ ಸರಕಾರಗಳ ಎಲ್ಲ ಪ್ರತಿನಿಧಿಗಳು ಒಪ್ಪಿದ್ದಾರೆ. ಕೆಳಗಿನ ಉದ್ದೇಶಗಳನ್ನಿಡೇರಿಸಲು ಸಂಯುಕ್ತರಾಷ್ಟ್ರಸಂಘವು ನಿರ್ಧರಿಸಿದೆ.

(೧) ನಮ್ಮ ಜೀವನದಲ್ಲಿಯೇ, ಮಾನವಜನಾಂಗಕ್ಕೆ ಎರಡು ಸಲ ವರ್ಣನಾತೀತ ದುಃಖವನ್ನುತಂದ ಯುದ್ಧದಿಂದ, ಮುಂಬರುವ ಜನಾಂಗ ವನ್ನು ರಕ್ಷಿಸುವದು.

(೨) ಸ್ತ್ರೀ-ಪುರುಷರಲ್ಲಿಯ ಹಾಗು ಹಿರಿ-ಕಿರಿ ರಾಷ್ಟ್ರಗಳಲ್ಲಿಯ ಸಮಾನ ಹಕ್ಕುಗಳಲ್ಲಿ ಮತ್ತು ಮಾನವನ ಮೂಲಭೂತ ಹಕ್ಕುಗಳಲ್ಲಿ-ನಂಬಿಕೆ ಹುಟ್ಟುವಂತೆ ಮಾಡುವದು.

(೩) ಒಡಂಬಡಿಕೆಗಳಲ್ಲಿ ಮತ್ತು ಅಂತರರಾಷ್ಟ್ರೀಯ ಕಾಯ್ದೆಗಳನ್ನು ಕಾಯ್ದುಕೊಂಡು ಹೋಗುವಲ್ಲಿ, ನ್ಯಾಯವು ದೊರೆಯುವಂತಹ ವಾತಾವರಣ ವನ್ನು ನಿರ್ಮಾಣಮಾಡುವದು.

(೪) ಸಹಿಷ್ಣುತೆ ಬೆಳೆಯುವಂತೆ ಮತ್ತು ಉತ್ತಮ ನೆರೆಯವರಂತೆ ಪರಸ್ಪರರು ಶಾಂತಿಮಯ ವಾತಾವರಣದಲ್ಲಿ ಬಾಳುವಂತೆ ಪ್ರಯತ್ನಿಸುವದು.

(೫) ಸಾಮಾಜಿಕ ಪ್ರಗತಿಯನ್ನು ಪ್ರವರ್ಧಿಸಲಿಕ್ಕೆ ಹಾಗು ಜೀವ ನದ ಮಟ್ಟವು ಹೆಚ್ಚಿನ ಸ್ವಾತಂತ್ರ್ಯದಲ್ಲಿರುವಂತೆ ಮಾಡಲು ಹೆಣಗುವದು.

(೬) ಸಾರ್ವಜನಿಕ ಹಿತದೃಷ್ಟಿಯಿಂದ, ಸಶಸ್ತ್ರ ಸೇನೆಯನ್ನು ಎಲ್ಲಿಯೂ ಉಪಯೋಗಿಸಬಾರದೆಂಬ ತತ್ವವನ್ನು ಮನ್ನಿಸಿ, ಉಳಿಸಿಕೊಂಡು ಹೋಗುವಂತೆ ನೋಡುವದು.

(೭) ಎಲ್ಲರ ಆರ್ಥಿಕ ಹಾಗು ಸಾಮಾಜಿಕ ಅಭಿವೃದ್ಧಿಗೆ ಅಂತರರಾಷ್ಟ್ರೀಯ ಯಂತ್ರಗಳನ್ನು ಉಪಯೋಗಿಸುವಂತೆ ಮಾಡಲು ಪ್ರಯತ್ನಿಸುವದು.

(೮) ಅಂತರರಾಷ್ಟ್ರೀಯ ಶಾಂತಿ ಮತ್ತು ಭದ್ರತೆಗಳು ಉಳಿಯುವಂತೆ ಮಾಡಲು ನಮ್ಮ ಶಕ್ತಿಯನ್ನು ಸಂಘಟಿಸುವದು.



ಸಂಯುಕ್ತ ರಾಷ್ಟ್ರಸಂಘದ ಮುಖ್ಯಕಾರ್ಯಾಲಯ
(ನ್ಯೂಯಾರ್ಕ್)

(ಯು. ರಾ. ಸ. ಕೃಪೆಯಿಂದ)

# ಸಂಯುಕ್ತ ರಾಷ್ಟ್ರಸಂಘ

## (U. N. O.)

## ೧. ನಿಸರ್ಗನಿಯಮ, ಸಮಾಜನಿಯಮ

ಈಗ ನಾವಿರುವದು ಕ್ರಿಸ್ತ ಶಕದ ಇಪ್ಪತ್ತನೆಯ ಶತಮಾನ. ಮಾನವನು ಕಾಲದ ಎಣಿಕೆಯನ್ನು ಸರಿಯಾಗಿ ಆರಂಭ ಮಾಡಿ ಎಷ್ಟೋ ಯುಗಗಳಾದವು. ಅಗಣಿತವಾದ ಇನ್ನೂ ಎಷ್ಟೋ ಶತಮಾನಗಳ ಆಯುಷ್ಯ ಮಾನವನದಾಗಿದೆ. ಆತನು ತನ್ನ ಮೇಲೆ ಪ್ರಭುತ್ವವನ್ನು ಪಡೆಯುವ ಪ್ರಯತ್ನವನ್ನು ಬಹುದಿನದಿಂದ ನಡಿಸಿದ್ದಾನೆ. ನಿಸರ್ಗವನ್ನು ಗೆದ್ದು ತನ್ನ ತೊತ್ತನ್ನಾಗಿಸಬೇಕೆಂಬ ಅವನ ಆಸೆ, ಆಕಾಂಕ್ಷೆಗಳು ಬೆಳೆಯುತ್ತಿರುವಂತೆ ನಿಸರ್ಗವೂ ತನ್ನ ನಿತ್ಯ ನೂತನ ರೂಪದರ್ಶನದಿಂದ ತನ್ನ ವರ್ಚಸ್ಸನ್ನು ಬೀರಿ, ತನ್ನ ಶ್ರೇಷ್ಠತೆಯನ್ನು ಸ್ಥಾಪಿಸುತ್ತಲಿದೆ. ಇದರಿಂದ ಮಾನವನ ವಿಶ್ವಪ್ರಯತ್ನಗಳೆಲ್ಲ ಮಣ್ಣುಗೂಡಿ ಮತ್ತೆ ಮೊದಲಿನ ಸ್ಥಿತಿಯನ್ನೇ ಹೊಂದುತ್ತಲಿದ್ದಾನೆ. ಇದೊಂದು ಮನುಷ್ಯನ ರಹಸ್ಯ. ಆತನ ಚರಿತ್ರೆಯಲ್ಲಿಯೇ ಇದು – ಹಿರಿದಾದ ಸಮಸ್ಯೆ.

ನಿಸರ್ಗವನ್ನು ಕೈಯಲ್ಲಿಟ್ಟುಕೊಂಡು ತನ್ನ ಅನುಕೂಲತೆಗಾಗಿ ಅದನ್ನು ಅಣಿಮಾಡಿಕೊಳ್ಳುವದೇ ಮಾನವನ ಅರ್ಥಶಾಸ್ತ್ರ. ಸಮಾಜವನ್ನು ತನ್ನ ಹಿತದ ದೃಷ್ಟಿಯಿಂದ ರಚಿಸಿಕೊಂಡು ಅದಕ್ಕೆ ಅಧೀನವಾಗಿರುವುದೇ ಸಮಾಜಶಾಸ್ತ್ರ; ಹಾಗೂ ರಾಜನೀತಿ ಶಾಸ್ತ್ರ. ಅದರಂತೆಯೇ ಮನುಷ್ಯನು ತನ್ನಲ್ಲಿರುವ ನೈಸರ್ಗಿಕ ಗುಣಗಳನ್ನು ಸಂಯಮದಲ್ಲಿಟ್ಟುಕೊಳ್ಳುವ ಆತನ ಯೋಜನೆಯು ತತ್ವಜ್ಞಾನವೆನಿಸಿದರೆ, ಸಮಾಜವು ನಿಸರ್ಗದ ನಿಯಮಕ್ಕನುಸರಿಸಿ ನಡೆಯುವಂತೆ, ಆತನು ಮಾಡಿದ ವ್ಯವಸ್ಥೆಯು ನೀತಿಶಾಸ್ತ್ರವೆನಿಸುವದು. ನಿಸರ್ಗ ಮತ್ತು

ಮಾನವರು ಪೋಷಕವಾಗಿರುವಂತೆಯೇ ಮಾರಕರೂ ಆಗಿರುವರೆಂಬ ಸನ್ನಿವೇಶವು ವಿಚಿತ್ರವಾಗಿದೆ.

ಈ ಕತೆಯೇ ಮಾನವನ ಚರಿತ್ರೆ. ಇದೂ ಒಂದು ಅದ್ಭುತ ರಮ್ಯವಾದ ಕತೆಯಾಗಿದೆ. ಮಾನವನು ಮೊದಲು ಕಾಡುಗಳಲ್ಲಿ ಅಲೆದಾಡಿ ಕೈಗೆ ಸಿಕ್ಕ ಮೃಗ, ಪಕ್ಷಿ-ಗಿಡ-ಬಳ್ಳಿಗಳನ್ನೇ ಸೇವಿಸಿ, ಜೀವಿಸುತ್ತಿದ್ದವನು ಕ್ರಮವಾಗಿ ಒಂದು ಕುಟುಂಬ-ಒಂದು ಸಮಾಜ-ಒಂದು ನಗರ-ಒಂದು ಸಂಸ್ಕೃತಿ-ಒಂದು ರಾಷ್ಟ್ರ ಮೊದಲಾದವುಗಳನ್ನು ರಚಿಸಿಕೊಂಡು ಹೇಗೆ ಸಾಮಾಜಿಕನಾದ ಎಂಬುದು ಮಾನವನ ಪ್ರಗತಿಯ ಒಂದು ಚಿತ್ರವಾಗಿದೆ. ಆದರೆ ಇಂತಹ ಸಮಾಜಹಿತವನ್ನು ಬಯಸುವ ಸಾಮಾಜಿಕನಾದ ಮಾನವನೇ ಆ ಸಮಾಜಕ್ಕೆ ತಾನೇ ಹಿರಿಯ ಹಗೆಯಾದುದು ಮಾನವನ ಚರಿತ್ರೆಯಲ್ಲಿ ಚಮತ್ಕಾರವಾದ ಅಂಶವಾಗಿದೆ. ಪರಸ್ಪರ ರಕ್ಷಣೆಯ ದೃಷ್ಟಿಯಿಂದ ಯುದ್ಧವನ್ನು ನಿಲ್ಲಿಸಬೇಕು ಎಂದು, ಮಾನವನು ನಾಲ್ಕು ಜನರ ಸಂಗಡ ಕೂಡಿ ನಡೆಯುವ ವಿವೇಕವನ್ನು ಪಡೆದುದೇನೋ ನಿಜ. ಆದರೆ ಪರರ ಮೇಲೆ ತನ್ನ ಹಿರಿಮೆಯನ್ನು ಬೀರುವದಕ್ಕಾಗಿ ಇಡಿಯ ಮಾನವ ಕುಲವನ್ನೇ ವಿನಾಶಕ್ಕೆ ಈಡು ಮಾಡುವಂತಹ ಯುದ್ಧಗಳಿಗೆ ಇಂಬಗೂ ಮಾನವನೇ ಕಾರಣನಾಗಿರುವದು ಒಡೆಯದ ಒಗಟವೇ ಸರಿ.

ಮನುಷ್ಯನು ತನ್ನ ಪ್ರವೃತ್ತಿಗಳನ್ನು ಅಂಕಿತದಲ್ಲಿಟ್ಟುಕೊಳ್ಳಲು ನಿರ್ಮಿಸಿಕೊಂಡ ಮಹತ್ತರವಾದ ಸಂಸ್ಥೆಯೆಂದರೆ 'ಮದುವೆ, ಆಗಿದೆ. ಹೆಣ್ಣು-ಗಂಡು, ಕಾಡುಮಿಕಗಳಂತೆ ತಿಂದು, ತೇಗಿ, ತಿರುಗುತ್ತಿದ್ದ ಸ್ಥಿತಿಯಿಂದ ಪಾರಾಗಿ ಮನೆಯೆಂಬ ಗೂಡೊಂದನ್ನು ಕಟ್ಟಿಕೊಂಡು ಅಲ್ಲಿ ಮೊದಲು ಕುಟುಂಬ ಜೀವನವನ್ನು ಆರಂಭಿಸಲಿಕ್ಕೆ ಕಾರಣವಾದುದು ಈ ವಿವಾಹ ಸಂಸ್ಕಾರವೆ. ಸಮಾನಾಧಿಕಾರದಲ್ಲಿ ಸಂಸಾರವನ್ನು ಸಾಗಿಸಿಕೊಂಡು ಹೋಗುವ ಈ ವ್ಯವಸ್ಥೆಯು ಕ್ರಮವಾಗಿ ಸ್ತ್ರೀಯೆಂದರೆ ಗೃಹಿಣಿ, ಪುರುಷನೆಂದರೆ ರಕ್ಷಕ ಎಂಬುದರಲ್ಲಿ ಪರಿಣಮಿಸಿತು. ಅಲ್ಲದೆ ಸಂಸಾರ ರಥಕ್ಕೆ ಹೂಡಿದ ಎರಡು ಕುದುರೆಗಳು ದಂಪತಿಗಳು, ಎಂಬ ಭಾವನೆಯು ಬೇರೂರಿತು. ಮದುವೆಯು ಮಾತ್ರ ಮಾನವನಿಗೆ ತನ್ನ ಚಂಚಲವಾದ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು

ಒಂದು ವಿಧಾಯಕವಾದ ಮಾರ್ಗವನ್ನು ತೋರಿಸಿಕೊಟ್ಟ ಉದಾತ್ತವಾದ ವ್ಯವಸ್ಥೆಯಾಗಿದೆ. ಸಂಸಾರದ ಹೊಣೆಯನ್ನು ವಹಿಸಿಕೊಂಡು ಪತ್ನಿಯೆಂಬ ಇನ್ನೊಬ್ಬ ವ್ಯಕ್ತಿಯೊಡನೆ ಸಹಕರಿಸಿ, ಸಮಾಜದ ಇತರ ಸದಸ್ಯರೊಡನೆ ಸಭ್ಯತೆಯಿಂದಿದ್ದು, ತನ್ನ ಮೂಲ ವಿಕೃತಿಗಳನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಸಾಧನವಾಗಿರುವದು ಈ ಸಂಸ್ಥೆ. ವಿವಾಹ ಬಂಧನಕ್ಕೊಳಗಾದ, ಸಾಮಾಜಿಕ ಜೀವಿಯಾದ ಈ ಮಾನವನು ತನ್ನ ವ್ಯಕ್ತಿಗತವಾದ ನೈಸರ್ಗಿಕ ಗುಣಗಳ ವಿಕಾಸವನ್ನು ಮಾಡಿಕೊಳ್ಳುವಾಗ ಸಮಾಜಕ್ಕೆ, ವಿವಾಹಸಂಸ್ಥೆಗೆ ಧಕ್ಕೆಯಾಗದಂತೆ ನಡೆದುಕೊಳ್ಳಬೇಕಾಗುತ್ತದೆ. ಅಂದರೆ ಅಷ್ಟು ಅವನು ಪರತಂತ್ರನಾಗುವನು. ಇದು ಈ ಸಂಸ್ಥೆಗಳಲ್ಲಿಯ ನ್ಯೂನತೆ. ಇಂತಹ ಕಟ್ಟುಗಳಿಗೆ ಸಿಕ್ಕು ಬಿದ್ದು ತನ್ನ ಪೂರ್ಣವಿಕಾಸ ಮಾಡಿಕೊಳ್ಳುವದನ್ನು ಬಿಡಬೇಕೆ? ವಿಕಾಸಕ್ಕೆ ತಡೆಯನ್ನುಂಟುಮಾಡುವ ಇಂತಹ ಸಂಸ್ಥೆಗಳಾದರೂ ಏಕೆ? ಎಂಬ ವಿಚಾರಗಳು ಕ್ರಾಂತಿಕಾರಕರ ಮನಸ್ಸಿನಲ್ಲಿ ಒಡಮೂಡುತ್ತವೆ.

ಆದರೆ ಮಾನವನು ಸಮಾಜಜೀವಿ. ಅವನಿಗೆ ಅದರಲ್ಲಿಯೇ ಆನಂದ. ಆದುದರಿಂದಲೇ ಅವನು ತನ್ನ ಶಕ್ತಿಯ ಅಂಶವನ್ನುತ್ಯಾಗಮಾಡಲು ಸಿದ್ಧನಾಗಿ, ಸಮಾಜದ ವಿಕಾಸಕ್ಕಾಗಿ ಅದನ್ನು ವಿನಿಯೋಗಿಸಿ ಆ ಸಮಾಜವು ಆನಂದಿತವೂ ಶ್ರೇಷ್ಠವೂ ಆಗುವಂತೆ ಸತತವಾಗಿ ಪ್ರಯತ್ನಮಾಡುತ್ತಲಿದ್ದಾನೆ. ಭಾರತ ಮೊದಲಾದ ಪೌರ್ವಾತ್ಯ ರಾಷ್ಟ್ರಗಳಲ್ಲಿ ಪ್ರಚಲಿತವಿದ್ದ ಗ್ರಾಮಪಂಚಾಯತಿಯ ವ್ಯವಸ್ಥೆಯಲ್ಲಿಯೇ ಆಗಲಿ, ಪಾಶ್ಚಾತ್ಯ ರಾಷ್ಟ್ರಗಳಲ್ಲಿದ್ದ ಗ್ರೀಕ ಮತ್ತು ರೋಮನ್ ಆಧಿಪತ್ಯದೊಳಗಣ ನಗರರಾಜ್ಯವೇ ಆಗಲಿ, ಈ ಬಗೆಯ ತಳಹದಿಯಮೇಲೆ ರಚಿತವಾದ ಶಾಸನಸೌಧಗಳೆಂದು ಅನ್ನಬಹುದು. ಮುಂದೆ ಇದೇ ವ್ಯವಸ್ಥೆಯು ಗ್ರಾಮಣಿಗಳು ಹುಟ್ಟು ವಿಕಾಸಕ್ಕೆ ಕಾರಣವಾದಂತೆ, ಅರಸೊತ್ತಿಗೆಯನ್ನು ನಿರ್ಮಿಸಲಿಕ್ಕೂ ಅವಕಾಶವನ್ನು ಕಲ್ಪಿಸಿ ಕೊಟ್ಟಿತು. **ಸಮಾಜವು ತನಗಿಂತ ಹೆಚ್ಚಿನದು** ಎಂಬ ವಿಷಯವನ್ನು ಒಪ್ಪಿಕೊಳ್ಳಲಿಕ್ಕೆ ಅಥವಾ ರಾಜನು ಮಿಕ್ಕಮಾನವರಿಗಿಂತ ಶ್ರೇಷ್ಠನೆಂಬ ಮಾತಿಗೆ ಮನ್ನಣೆಯನ್ನೀಯಲಿಕ್ಕೆ ಈ ಮೂಲ ವಿಚಾರವೇ ಕಾರಣವು. ಮಾನವನು ತಾನು ಮಾಡಿದ ಪ್ರಯತ್ನದ ಫಲವೇ ಇದು, ಎಂದು ತಿಳುವಳಿಕೆಯುಳ್ಳವನಾಗಲಿಕ್ಕೆ ಈ ವಿಚಾರವೇ ಮೂಲ ಕಾರಣವು.

ಮನುಷ್ಯನು ತನ್ನ ಸತ್ವದ ಒಂದಂಶವನ್ನು ಸಂತೋಷದಿಂದ ಸಮಾಜಕ್ಕೆ ಅಥವಾ ರಾಜ್ಯಕ್ಕೆ ಕಾಣಿಕೆಯಾಗಿ ಅರ್ಪಿಸಲು ಮುಂದೆ ಬರುವನು ಎಂದರೆ ಆ ಸಂಸ್ಥೆಯು ಅವನಿಗಿಂತ ಹಿರಿದಾದುದು ಎಂಬ ಮಾತನ್ನು ಒಪ್ಪಿಕೊಂಡಂತೆಯೆ. ಆದರೆ ಆ ಸಂಸ್ಥೆಯು ಇಡಿ ಮಾನವಕುಲದ ಪ್ರಗತಿಗೆ ಆತಂಕವಾದಲ್ಲಿ ಅದನ್ನು ಯೋಗ್ಯ ರೀತಿಯಿಂದ ತಿದ್ದುವ ಸ್ವಾತಂತ್ರ್ಯವೂ ಮಾನವನಿಗೆ ಇದೆ ಅಲ್ಲವೆ ? ಸಕಲರೂ ಸ್ನೇಹ-ಸೌಹಾರ್ದ್ರಗಳಿಂದ ಜೀವಿಸಬೇಕು, ಸಮಾನಾಧಿಕಾರದಿಂದ ಬಾಳಬೇಕು, ಪರಸ್ಪರ ಪ್ರಗತಿಗೆ ಪೋಷಕರಾಗಬೇಕು ಎಂಬ ವಿಚಾರದಿಂದ ನಿರ್ಮಿಸಿದ ಸಂಸ್ಥೆಗಳು ಮಾನವನ ಪ್ರಗತಿಗೆ ವಿರೋಧವಾಗಿ ಪರಿಣಮಿಸಿದರೆ, ಅವುಗಳನ್ನು ಶೀಘ್ರವಾಗಿಯೇ ಮಾರ್ಪಡಿಸುವದು ಅವಶ್ಯವೆನಿಸುವದು. ಮತ್ತು ಆ ರೀತಿಯಾಗಿ ಮಾರ್ಪಡಿಸಿಕೊಳ್ಳುವನು. ಮಧ್ಯಯುಗದ ಧಾರ್ಮಿಕ ಸಂಸ್ಥೆಗಳನ್ನು ಮತ್ತು ಈ ಯುಗದ ಅರಸುತನವನ್ನು ಮಾನವನು ತನ್ನ ವಿಕಾಸಕ್ಕೆ ಅನುಕೂಲವಾಗುವಂತೆ ಮಾರ್ಪಡಿಸಿಕೊಂಡುದು ಮೇಲಿನ ಮಾತಿಗೆ ನಿದರ್ಶನವಾಗಿದೆ.

ತನ್ನ ಪ್ರಯತ್ನದ ಫಲದ ಒಂದಂಶವನ್ನು ಸಮಾಜದ ಉತ್ಕರ್ಷಕ್ಕಾಗಿ ತ್ಯಾಗ ಮಾಡಲು ಸಿದ್ಧನಾದ ಮನುಷ್ಯನು, ಆ ವ್ಯವಸ್ಥೆಯು ತನ್ನ ಪ್ರಗತಿಗೆ ಆತಂಕವಾಗುವದೆಂದು ಎನಿಸಿದರೆ, ಆ ಸಂಸ್ಥೆಯ ಹೆಸರಿನಲ್ಲಿ ಒಬ್ಬ ವ್ಯಕ್ತಿಯಾಗಲಿ, ಸಮಾಜದ ಒಂದು ಘಟಕವಾಗಲಿ ಅದರ ದುರ್ಲಾಭವನ್ನು ಪಡೆಯುತ್ತಿರುವದೆಂದು ಅನಿಸಿದರೆ, ಆಗ ಮಾನವನು ವ್ಯಕ್ತಿಗಿಂತ ಸಂಸ್ಥೆ ದೊಡ್ಡದೆಂಬ ಮಾತನ್ನು ಒಪ್ಪಿದರೂ ಪ್ರಗತಿಗೆ ವಿರುದ್ಧವಾದ ಇಂತಹ ಸಂಸ್ಥೆಗಳನ್ನು ರೂಪಾಂತರಗೊಳಿಸಲಿಕ್ಕಾಗಲಿ, ನಿರ್ಮೂಲ ಮಾಡಲಿಕ್ಕಾಗಲಿ ಹೇಸುವದಿಲ್ಲ.

ತನ್ನ ಏಳಿಗೆಗಾಗಿ ಒಕ್ಕಟ್ಟೇ ಬಲ, ಎಂಬ ಮಂತ್ರದ ಮಹತಿಯನ್ನು ತಿಳಿದ ಮನುಷ್ಯನು ಮೊದಲು ಕುಟುಂಬ, ಸಮಾಜ, ನಗರಗಳಂಥ ಸಂಸ್ಥೆಗಳನ್ನು ನಿರ್ಮಿಸಿಕೊಂಡು ಮುಂದುವರಿದರೂ ಆತನಿಗೆ ಮಾನವ ಸ್ವಭಾವದ ಮೇಲೆ ನಿಯಂತ್ರಣವನ್ನು ಸ್ಥಾಪಿಸಿಕೊಳ್ಳಲಿಕ್ಕೆ ಇನ್ನೂ ಸಾಧ್ಯವಾಗಿಲ್ಲವೆಂಬುದು ಇಂದಿನ ವಸ್ತುಸ್ಥಿತಿಯಾಗಿದೆ; ಮತ್ತು ಆಶ್ಚರ್ಯಕರವೂ ಆಗಿದೆ. ಇದೇ ಮಾರ್ಗದಲ್ಲಿ ಮುನ್ನಡೆಯುತ್ತ ಮಾನವನು ರಾಷ್ಟ್ರವೆಂಬ

ಹೊಸದೊಂದು ಘಟನೆಯನ್ನು ಇತ್ತೀಚೆಗೆ ಮಾಡಿಕೊಂಡಿದ್ದಾನೆ. ಆರ್ಥಿಕ ಮತ್ತು ಸಾಮಾಜಿಕ ತತ್ವಗಳಿಂದ ಕುಟುಂಬ, ಕುಲ, ಗೋತ್ರ, ಜ್ಞಾತಿಗಳಿಂದ ಸಮಾಜ, ವಸತಿಯ ಮೇಲಿಂದ ನಗರಗಳ ನಿರ್ಮಾಣವಾಗಿ ಅವುಗಳನ್ನು ಗುರುತಿಸುವಂತೆಯೇ ಭಾಷೆ, ಭೌಗೋಲಿಕ ಸೀಮೆ, ಆರ್ಥಿಕ ವ್ಯವಸ್ಥೆ, ಆಡಳಿತದ ಅನುಕೂಲತೆ ಇವೇ ಮೊದಲಾದ ಅಂಶಗಳಿಂದ ರಾಷ್ಟ್ರವನ್ನು ನಾವು ತಿಳಿಯಬಹುದಾಗಿದೆ.

ಸ್ಥೂಲ ದೃಷ್ಟಿಯಿಂದ ಈ ವಿವರಗಳು ಒಂದು ರಾಷ್ಟ್ರದ ಅಸ್ತಿತ್ವವನ್ನು ತೋರಿಸುತ್ತಿದ್ದರೂ ರಾಷ್ಟ್ರದ ವೈಶಿಷ್ಟ್ಯವು ಅದರ ಸಂಸ್ಕೃತಿಯಲ್ಲಿಯೇ ಅಡಕವಾಗಿರುವದು. ಸಂಸ್ಕೃತಿಯೆಂಬ ವ್ಯಾಪಕವಾದ ವಿಷಯುವನ್ನು ನಾವು ಸಾಮಾನ್ಯವಾಗಿ ಭಾಷೆ, ವೇಷ, ಸಾಹಿತ್ಯ, ಸಮಾಜ ರಚನೆ, ಲಲಿತಕಲೆಗಳು, ಉದ್ಯೋಗ ಪ್ರಗತಿ ಇವೇ ಮೊದಲಾದ ವಿವರಗಳಿಂದ ತಿಳಿಯುಬಹುದು. ನಾವು ಜೀವನದ ಆದರ್ಶವೆಂಬ ಒಂದೇ ವಿಚಾರದಲ್ಲಿ ಅದನ್ನು ತೋರಿಸಬಹುದು. ನಾವು ನಮ್ಮ ರಾಷ್ಟ್ರ ಜೀವನವನ್ನು ಯಾವ ಉದ್ದೇಶಗಳಿಗಾಗಿ ಮಾರ್ಪಡಿಸಿಕೊಳ್ಳುತ್ತಿರುವೆವು ಎಂಬುದು ನಮ್ಮ ಸಂಸ್ಕೃತಿಯಲ್ಲಿ ಪ್ರತಿಬಿಂಬಿತವಾಗುತ್ತದೆ. ಅದರಂತೆಯೇ ನಮ್ಮ ಜೀವನದ ಗುರಿಯ ಸಂಕೇತ, ಸಂಕಲ್ಪಗಳೂ ನಮ್ಮ ಪ್ರಯತ್ನದ ಪರಿಣಾಮುಗಳೂ ಸಂಸ್ಕೃತಿಯಲ್ಲಿ ಅವಿರ್ಭಾವವನ್ನು ಹೊಂದುತ್ತವೆ.

ರಾಷ್ಟ್ರವನ್ನು ಕಟ್ಟಿಕೊಂಡ ಮಾನವನು ಪರಸ್ಪರ ಕಾದಾಟ ಕೋಪಾಟೋಪಗಳನ್ನು ತಪ್ಪಿಸಿಕೊಂಡು ಸುಖ-ಸಂಪತ್-ಸಮೃದ್ಧವಾಗಿ ಜೀವಿಸಬೇಕೆಂಬ ಯೋಜನೆಯನ್ನೇನೋ ಮಾಡಿದನು. ಆದರೆ ರಾಷ್ಟ್ರದ ಈ ವಿಶಾಲವಾದ ಕಲ್ಪನೆಯು ಕೂಡ ರಾಷ್ಟ್ರದ ಆಂತರಿಕ ಭೇದಭಾವಗಳನ್ನು ಕಳೆಯಲು ಸಮರ್ಥವಾಗಲಿಲ್ಲ. ಅಷ್ಟೇ ಅಲ್ಲದೆ ಭೇದಭಾವದ ಬೀಜವಾದ ಆ ಸ್ವಾರ್ಥವು ರಾಷ್ಟ್ರದ ವಿರಾಟ ರೂಪವನ್ನು ತಾಳಿ, ರಾಷ್ಟ್ರ ರಾಷ್ಟ್ರಗಳ ನಡುವೆ ದೊಡ್ಡ ಪ್ರಮಾಣದಲ್ಲಿ ಕದನಗಳನ್ನು ಹೂಡಲು ಕಾರಣವಾಯಿತು. ಮಾನವನು ತನ್ನ ಜೀವನದಲ್ಲಿ ಪರಿವರ್ತನೆಗಳನ್ನು ಮಾಡಿಕೊಳ್ಳುವ ವಿಚಾರದಿಂದ ತನ್ನ ಸಮಾಜವನ್ನು ಹೆಚ್ಚು ಬಲಿಷ್ಠವಾದ ಮತ್ತು ಉದಾತ್ತವಾದ

ರೂಪರಂಗಗಳಲ್ಲಿ ಕಟ್ಟಿಕೊಳ್ಳುತ್ತ ನಡೆದಂತೆ ಅವನಿಗೆ ಅಷ್ಟೇ ಜಟಿಲವಾದ ಮತ್ತು ತಜ್ಜನ್ಯವಾದ ಅಷ್ಟೇ ವ್ಯಾಪಕವಾದ ಸಮಸ್ಯೆಗಳನ್ನು ಅವನು ಎದುರಿಸ ಬೇಕಾಗಿದೆ, ಎಂದು ಮಾನವನ ಚರಿತ್ರೆಯು ಹೇಳುತ್ತಿದೆ.

ಸಮಾಜವನ್ನು ಸಾಮ್ರಾಜ್ಯದಲ್ಲಿ ರೂಪಿಸಿಕೊಂಡ ಮನುಷ್ಯನು ಅಷ್ಟೇ ವಿಶಾಲವಾದ ಪ್ರಮೇಯಗಳನ್ನು ಕಲ್ಪಿಸಿಕೊಂಡನು. ಈ ಕಾಲದಲ್ಲಿ ಸಾಮಂತರನ್ನೂ ಧರ್ಮಗುರುಗಳನ್ನೂ ಅಧೀನದಲ್ಲಿರಿಸಿ ತನ್ನ ಪ್ರಭುತ್ವವನ್ನು ಸ್ಥಿರಪಡಿಸಲು ಪ್ರಜೆಗಳ ಪ್ರಾತಿನಿಧ್ಯವನ್ನೂ, ಸಾಮರ್ಥ್ಯವನ್ನೂ ಪಡೆಯ ಬೇಕಾಯಿತು. ಆದರೆ ಅರಸುತನವು ಭದ್ರವಾದ ಮೇಲೆ, ಅದನ್ನುಳಿಸಿ ಕೊಳ್ಳುವ ಉಪಾಯಗಳನ್ನು ಯೋಜಿಸತೊಡಗಿದನು. ಪ್ರಜರ ಬೆಂಬಲ ವನ್ನು ಪಡೆದು ಬಲಿಷ್ಠನಾದ ಅರಸನು ಅವರ ಹಿತವನ್ನು ದುರ್ಲಕ್ಷಿಸಿ, ರಾಷ್ಟ್ರದ ಹೆಸರಿನಲ್ಲಿ ತನ್ನ ವರ್ಚಸ್ಸನ್ನು ಬೆಳಿಸಿಕೊಂಡು, ನಾಗರಿಕರ ಶೋಷಣೆಯಲ್ಲಿ ಆಸಕ್ತನಾದನು. ಪ್ರಜೆಗಳ ಬಗೆಗಿದ್ದ ಧರ್ಮ-ಕರ್ಮಗಳನ್ನು ತ್ಯಜಿಸಿದನು. ಇದರಿಂದ ರೊಚ್ಚಿಗೆದ್ದ ಜನತೆಯು ಅರಸುತನವನ್ನೇ ನಿರ್ನಾಮಗೊಳಿಸಿದ, ನಾಮಮಾತ್ರ ಉಳಿಸಿದ, ಇಲ್ಲವೆ ಸಂಪೂರ್ಣ ರೂಪಾಂತರಗೊಳಿಸಿದ ಉದಾಹರಣೆಗಳು ಚರಿತ್ರೆಯಲ್ಲಿ ಹೇರಳವಾಗಿ ದೊರೆಯುತ್ತವೆ. ಒಂದು ಸ್ಥಾನದಿಂದ ಶಕ್ತಿಸಂಪನ್ನನಾದ, ಮಾನವನೇ ಆಗಲಿ, ಅವನಿಂದ ನಿರ್ಮಿತವಾದ ಸಂಸ್ಥೆಯೇ ಆಗಲಿ, ಆ ಸ್ಥಾನದ ಪೋಷಣೆ ಹಾಗೂ ರಕ್ಷಣೆಯ ಹೊಣೆಯನ್ನು ಕಡೆಗಣಿಸಬಾರದು ಎಂಬುದನ್ನು ಇತಿಹಾಸವು ನಮಗೆ ಕಲಿಸುತ್ತಿದೆ. ಹಾಗೆಯೇ ಮನುಷ್ಯನ ಬುದ್ಧಿ ಮತ್ತು ಪರಿಶ್ರಮದ ಫಲವಾಗಿ ಒಂದು ಘಟಕವಾಗಲಿ, ವ್ಯಕ್ತಿಯಾಗಲಿ ಸಮಾಜದಲ್ಲಿ ಪ್ರತಿಷ್ಠೆಯನ್ನು ಪಡೆದರೆ ಆತನನ್ನು ಸದಾಕಾಲ ಪೋಷಿಸುವದು ಅಸಾಧ್ಯ ವೆನಿಸುವದು ಅಸಾಧುವೂ ಆಗುವದು. ಆದುದರಿಂದ ವ್ಯಕ್ತಿ ಹಾಗೂ ಅವನು ರಚಿಸಿಕೊಂಡ ಸಮಾಜ, ಪರಸ್ಪರರಿಂದ ಪೋಷಣೆಯನ್ನು ಪಡೆಯಬೇಕು; ಪರಸ್ಪರರನ್ನು ಪೋಷಿಸಬೇಕು. ಮಗುವನ್ನು ರಕ್ಷಿಸಿ ಬೆಳೆಯಿಸಿದ ತಂದೆ ತಾಯಿಗಳನ್ನು ಮುಂದೆ ಆ ಮಗುವು ಕಾಪಾಡಿ ಆರೈಕೆಮಾಡುವದು ಹೇಗೆ ಉಚಿತವಾಗಿರುವಷ್ಟೇ-ಅಗತ್ಯವೂ ಆಗಿರುವದು. ಅದರಂತೆಯೇ ಮನುಷ್ಯ ಮತ್ತು ಅವನು ಕಟ್ಟಿಕೊಂಡ ಸಂಸ್ಥೆಗಳ ಸಂಬಂಧವಿದೆ.

ಸಮಾಜ ರಚನೆಯಲ್ಲಿ ಅತ್ಯುಚ್ಚ ಹಂತವಾದ ರಾಷ್ಟ್ರವನ್ನು ನಿರ್ಮಿಸಿ ಕೊಂಡ ಮೇಲೆಯೂ ಮನುಷ್ಯನಿಗೆ ಸಮಾಧಾನವಾಗಲಿಲ್ಲ. ಒಂದು ಕಡೆ ಯಲ್ಲಿ ಅವನ ಮೂಲ ಪ್ರವೃತ್ತಿಗಳನ್ನು ಸಂಯಮದಲ್ಲಿಡುವ ಪ್ರಯತ್ನವು ವಿಫಲವಾದ ನಿರಾಶೆಯು ಗೋಚರವಾದರೆ, ಇನ್ನೊಂದು ಕಡೆ ಹೊಸ ಹೊಸ ಸಂಘಟನೆಯತ್ತ ಅವನ ಮನಸ್ಸು ವೇಗವಾಗಿ ಸಾಗಿರುವದು ಕಾಣುತ್ತಿದೆ. ಅಂತಹ ಸಂಶೋಧನದ ಪ್ರಯತ್ನದಲ್ಲಿಯೇ ಆತನು ಅಂತರ ರಾಷ್ಟ್ರೀಯ ಸಂಘಟನೆಯ ಕಲ್ಪನೆಯನ್ನು ಕಂಡಿರುವನು. ನಾಲ್ಕೈದು ನೂರು ವರ್ಷಗಳ ಕಾಲದಿಂದ ರಾಷ್ಟ್ರದ ಪ್ರಯೋಗವು ನಡೆಯುತ್ತಿದ್ದಂತೆಯೇ ಈಗ ಕೆಲವು ವರ್ಷಗಳಿಂದ ಅಂತರ್ರಾಷ್ಟ್ರೀಯ ಸಂಸ್ಥೆಗಳ ಯೋಚನೆಯು ಮಾನವನ ಮನಸ್ಸನ್ನು ಆವರಿಸಿಕೊಂಡಿದೆ. ಅಂತರ ರಾಷ್ಟ್ರೀಯ ಸಂಬಂಧವು ಮಾನವ ನಿಗೆ ಅಪರಿಚಿತವಲ್ಲ; ಪ್ರಯತ್ನಪೂರ್ವಕವಾಗಿ ಪರಸ್ಪರ ಸ್ನೇಹ, ಸೌಹಾರ್ದ್ರ ಗಳನ್ನು ಕಲ್ಪಿಸಿಕೊಳ್ಳುವ ಕಾರ್ಯವು ರಾಜನೀತಿಯಲ್ಲಿ ಹೊಸದೇನೂ ಅಲ್ಲ. ಆದರೆ ವಿಶ್ವದಲ್ಲೆಲ್ಲ ಬಂಧು-ಭಾವ ಮತ್ತು ಪ್ರೇಮ-ಶಾಂತಿಗಳು ನೆಲೆಸುವಂತೆ ನಡೆಸಿದ ಇತ್ತೀಚಿನ ಪ್ರಯತ್ನಗಳು ಮಾತ್ರ ಮಾನವನ ಇತಿಹಾಸದಲ್ಲಿ ಹೊಸ ಹೆಜ್ಜೆಗಳಾಗಿವೆ.

ಭಾರತೀಯ ಅರ್ಥಶಾಸ್ತ್ರ ಹಾಗೂ ರಾಜನೀತಿಗಳಲ್ಲಿ ದೊರೆಯುವ ಸಂಧಿ ವಿಗ್ರಹಗಳನ್ನು ನೋಡಿದರೆ, ಭಾರತೀಯನಿಗೆ ಅಂತರ ರಾಷ್ಟ್ರೀಯ ಸಂಪರ್ಕ ಹಾಗೂ ಸಂಘಟನೆಗಳು ಪರಿಚಿತವಾಗಿದ್ದವೆಂದು ಕಂಡುಬರುವದು. ಕೌಟಿಲ್ಯನ ಪ್ರಖ್ಯಾತ ಸೂತ್ರವಾದ ಅಂತರ ರಾಷ್ಟ್ರಿಯ ರಾಜನೀತಿಯ ತತ್ವವು ಭಾರತೀಯನ ಘಾರ್ರಿಥ ವಿಚಾರಪ್ರಣಾಲಿಯನ್ನು ವ್ಯಕ್ತಗೊಳಿಸುತ್ತದೆ. "ನಮ್ಮ ನೆರೆಯ ರಾಷ್ಟ್ರವು ನಮಗೆ ಶತ್ರುವಾಗಿರುವದು ಸಹಜವೆನಿಸಬಹುದು. ಆದರೆ ನೆರೆಯ ರಾಷ್ಟ್ರದ ನೆರೆಯ ರಾಷ್ಟ್ರವು ಯಾವಾಗಲೂ ನಮ್ಮ ಮಿತ್ರ ರಾಷ್ಟ್ರವಾಗಿರುವದು." ಎಂಬ ರಹಸ್ಯವು ಇಂದಿಗೂ ಅಂತರ ರಾಷ್ಟ್ರೀಯ ರಾಜಕಾರಣದಲ್ಲಿ ಮಾರ್ಗದರ್ಶಕವಾದ ಮಾತಾಗಿದೆ.

ರಾಜಕೀಯವಾಗಿ ಈ ರೀತಿಯಲ್ಲಿ ವಿಶ್ವದ ರಾಷ್ಟ್ರಗಳಲ್ಲಿ ಸಹಕಾರವು ಕಂಡುಬರುವಂತೆಯೇ ಆರ್ಥಿಕ ಕ್ಷೇತ್ರದಲ್ಲಿಯೂ ಅಂತರ ರಾಷ್ಟ್ರೀಯ

ಸೌಕರ್ಯಗಳನ್ನು ನಿರ್ಮಿಸಿಕೊಂಡ ದೃಷ್ಟಾಂತಗಳು ಇತಿಹಾಸದಲ್ಲಿ ಹೇರಳವಾಗಿ ದೊರೆಯುತ್ತವೆ. ಹಿಂದಿನ ಕಾಲದಲ್ಲಿ ಚೀನೀಯರ ವಿದೇಶಗಳಲ್ಲಿಯ ವ್ಯಾಪಾರ, ಭಾರತದ ಇತರ ರಾಷ್ಟ್ರಗಳ, ಪ್ರಜೆಗಳಲ್ಲಿ ನಡೆದ ವ್ಯಾಪಾರ ಇವೇ ಅದಕ್ಕೆ ದೃಷ್ಟಾಂತವಾಗಿವೆ. ಈ ವ್ಯಾಪಾರಿ ಸಂಬಂಧವು ರಾಷ್ಟ್ರಗಳಲ್ಲಿ ಪರಿಚಯ, ಪ್ರೇಮ, ಸೌಹಾದ್ರಗಳನ್ನು ಉಂಟು ಮಾಡಿತು. ಚಿಕ್ಕದಾಗಿದ್ದ ಈ ಪ್ರಪಂಚವ್ಯವಹಾರದ ಪ್ರಮಾಣವು ಸಂಚಾರಸೌಕರ್ಯ, ಮತ್ತು ಪರಸ್ಪರರ ಪರಿಚಯಗಳು ಬೆಳೆದಂತೆ ದೊಡ್ಡದಾಯಿತು. ಆದರೆ ಅದರ ಪರಿಣಾಮವಾಗಿ ಅಂತರ ರಾಷ್ಟ್ರೀಯ ರಾಜಕೀಯ ಸಂಬಂಧವೂ ಕ್ಲಿಷ್ಟಮತ್ತು ಸಮಸ್ಯಾಧಿಕವಾದಂತೆ ಪ್ರಪಂಚದ ಆರ್ಥಿಕ ವ್ಯವಸ್ಥೆಯು ಕೂಡ ಕೇವಲ ಶೋಷಣೆಯ ರೂಪವನ್ನು ತಾಳಿತು. ಅಲ್ಲದೆ ರಾಷ್ಟ್ರರಾಷ್ಟ್ರಗಳಲ್ಲಿ ಪೇಟೆಗಳ ಸ್ಪರ್ಧೆಯಲ್ಲಿ ಪರಿವರ್ತನೆಯನ್ನು ಹೊಂದಿತು. ಮನುಷ್ಯನು ಮನುಷ್ಯನ ಮೇಲೆ ಪ್ರಭುತ್ವವನ್ನು ಬೆಳೆಯಿಸಲು ರಾಜಕೀಯ ಶಕ್ತಿಯು ಸಾಧನವಾದಂತೆ ಆರ್ಥಿಕ ಪ್ರಾಬಲ್ಯದಿಂದ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರದ ಮೇಲೆ ಪ್ರಭುತ್ವವನ್ನು ಸ್ಥಾಪಿಸುವ ಪ್ರಯತ್ನಗಳು ನಡೆಯ ಹತ್ತಿದವು. ಕಳೆದ ಶತಮಾನದ ಇತಿಹಾಸವು ಇದನ್ನೇ ಹೇಳುತ್ತದೆ.

ಧರ್ಮದ ಇತಿಹಾಸವೂ ಹೀಗಿಯೇ ಇದೆ ಎಂಬುದನ್ನು ಕೇಳಿದರೆ ಬಹುಜನರಿಗೆ ಆಶ್ಚರ್ಯವಾಗಬಹುದು. ಮಾನವನಿಗೆ ಮಾರ್ಗದರ್ಶಕವಾದುದು ಧರ್ಮವು. ಅದೇ ಅದರ ಜೀವಾಳ. ಧರ್ಮವು ಹಿಂದಿನ ಕಾಲದಲ್ಲಿ ಮನುಷ್ಯನ ಜೀವನ ಮಾರ್ಗವನ್ನು ಸುಗಮಗೊಳಿಸಿ, ಆತನನ್ನು ಇತರರೊಡನೆ ಭಯ, ಭಕ್ತಿ, ಪ್ರೀತಿ, ವಿಶ್ವಾಸಗಳಿಂದ ನಡೆದುಕೊಳ್ಳುವಂತೆ ಮಾಡಿದ ಒಂದು ಪ್ರಬಲವಾದ ಶಕ್ತಿಯಾಗಿದ್ದಿತು. ಆದರೆ ಬರಬರುತ್ತ ಧರ್ಮದ ಈ ಬಂಧನವು ಸಡಿಲಾಗುತ್ತ ಬಂದದ್ದಲ್ಲದೆ, ಅದೊಂದು ಕಾಲ್ತೊಡಕಾಗಿಯೂ ಪರಿಣಮಿಸಹತ್ತಿತು. ಮಧ್ಯ ಯುಗದಲ್ಲಿ ಕೆಲವರು ನಮ್ಮ ಧರ್ಮಶ್ರೇಷ್ಠ ನಮ್ಮ ಧರ್ಮ ಶ್ರೇಷ್ಠವೆಂದು ಧರ್ಮದ ಹೆಸರಿನಲ್ಲಿ ನಡೆಯಿಸಿದ ಮಾನವ ಸಂಹಾರವು ನಮ್ಮ ಕಣ್ಣೆದುರಿಗೆ ಬೀಳುತ್ತಿದೆ. ಎಷ್ಟೋ ರಾಷ್ಟ್ರಗಳಲ್ಲಿ ಧರ್ಮಗುರುಗಳೇ ಕರ್ತವ್ಯಚ್ಯುತರಾದ ಚಿತ್ರವು ಕಾಣುತ್ತಿದೆ.

ಇದರ ಪರಿಣಾಮವಾಗಿ ಪಾಶ್ಚಾತ್ಯ ದೇಶಗಳಲ್ಲಿ ಧರ್ಮವು ಸಾಮಾಜಿಕ ಮಹತ್ವವನ್ನು ಉಳಿಸಿಕೊಂಡರೂ ರಾಜಕೀಯ ಗೌರವವನ್ನು ಕಳೆದುಕೊಂಡಿತು. ಅಲ್ಲದೆ ರಾಜ್ಯ, ಸಾಮ್ರಾಜ್ಯಗಳನ್ನು ಸ್ಥಾಪಿಸಲಿಕ್ಕೂ ಸಾಮಾಜಿಕ ಪ್ರಭುತ್ವವನ್ನು ಪಡೆಯಲಿಕ್ಕೂ ರಾಜಕಾರಣಿಗಳಿಗೆ ಸಹಕಾರವನ್ನು ನೀಡಿ, ಅವರಿಂದ ಪರಿಹಾರವನ್ನು ಪಡೆದು ಅವರ ಕೈಗೊಂಬೆಯಾಯಿತು. ಆರ್ಥಿಕ ವಿಷಮತೆ ಸಾಮಾಜಿಕ ಅನ್ಯಾಯ, ರಾಜಕೀಯ ಉಚ್ಚ ನೀಚ ಪದಗಳನ್ನು ಅಲ್ಲಗಳೆದು ಮಾನವಕುಲದ ಶಾಂತಿ-ಪುಷ್ಟಿ-ತುಷ್ಟಿಗಳಿಗಾಗಿ ಹೆಣಗಾಡುವ ತನ್ನ ಸಾಮರ್ಥ್ಯವನ್ನು ಕಳೆದುಕೊಂಡಿತು. ಇದರಿಂದ ಪ್ರಚಲಿತ ಧರ್ಮದ ವಿರುದ್ಧ ನಮ್ಮ ರಕ್ಷಣೆಯನ್ನು ಮಾಡಿಕೊಳ್ಳಬೇಕಾದ ಪರಿಸ್ಥಿತಿಯು ನಿರ್ಮಾಣವಾಯಿತು.

ಇಂತು ಧರ್ಮಶಾಸ್ತ್ರ, ರಾಜನೀತಿ-ಅರ್ಥಶಾಸ್ತ್ರಗಳ ಮೂಲಕ ಮನುಷ್ಯನಿಗೆ ತನ್ನ ಸಮಸ್ಯೆಗಳ ಪರಿಹಾರವನ್ನು ಕಂಡುಕೊಳ್ಳುವ ಬದಲು, ಹೊಸ ಹೊಸ ಪ್ರಮೇಯಗಳನ್ನು ಎದುರಿಸಬೇಕಾದ ಸನ್ನಿವೇಶವು ಬಂದೊದಗಿದರೂ ಆತನು ನವೀನ ರೋಗಗಳಿಗೆ ನೂತನವಾದ ಉಪಾಯವನ್ನು ಕಂಡು ಹಿಡಿಯುವ ಪ್ರಯತ್ನವನ್ನೇನೂ ನಿಲ್ಲಿಸಲಿಲ್ಲ. ಹೊಸ ಕಾಲಕ್ಕೆ ತಕ್ಕಂತೆ ಹೊಸ ಸಮಾಜ, ಸಂಸ್ಥೆಗಳನ್ನು ಆತನು ರೂಪಿಸತೊಡಗಿದ. ರಾಷ್ಟ್ರದ ಹೊಸ ಕಲ್ಪನೆ, ಪ್ರಜಾಪ್ರಭುತ್ವದ ನೂತನ ತತ್ವಗಳು ಮತ್ತು ಅಂತರರಾಷ್ಟ್ರೀಯ ಸಹಕಾರದ ನೂತನ ಅಗತ್ಯಗಳು, ಈ ದಿಶೆಯಲ್ಲಿ ಮಾನವನಿಗೆ ಗೋಚರವಾದವು.

ಇಂತಹ ಸನ್ನಿವೇಶದಲ್ಲಿ ಪ್ರಪಂಚದ ಭವಿಷ್ಯತ್ತಿನ ವಿಷಯವೂ ಸಹಜವಾಗಿಯೆ ಅತ್ಯಂತ ಆಳವಾದ ಯೋಚನೆಗೆ ಅನುವನ್ನುಂಟುಮಾಡಿತು. ವಿಚಾರ ಕ್ರಾಂತಿಯ ಈ ಅವಧಿಯಲ್ಲಿ, ಔದ್ಯೋಗಿಕ ಪರಿವರ್ತನೆಯ ಪರಿಣಾಮವಾಗಿ ಇಡಿಯ ವಿಶ್ವದ ಬಾಗಿಲು ಪ್ರಪಂಚದ ಪ್ರತಿಯೊಂದು ರಾಷ್ಟ್ರಕ್ಕೆ ತೆರೆಯಲ್ಪಟ್ಟಿತು. ಅಂತೆಯೇ ಪರಸ್ಪರ ಸಂಪರ್ಕವು ಬೆಳೆದಂತೆ, ತಿಕ್ಕಾಟವೂ ಹೆಚ್ಚಾಗುವದು ಸ್ವಾಭಾವಿಕವೆನಿಸಿತು. ವ್ಯಾಪಾರ, ವಿದ್ಯಾಭ್ಯಾಸ, ರಾಜಕೀಯ ಪ್ರವೇಶಗಳೇ ಮೊದಲಾದ ರೀತಿಯಲ್ಲಿ ಜಗತ್ತಿನ ಮೂಲೆ ಮೂಲೆಗಳನ್ನು ಮಾನವನು ಹೊಸ ನೋಟದಿಂದ ಕಂಡು, ಕೈವಶ ಮಾಡಿಕೊಳ್ಳಲಿಕ್ಕೆ ಹವಣಿಸುತ್ತಿದ್ದ ಆತನಿಗೆ ವಿಶ್ವದ ಸಂಘಟನೆಯ ಕಲ್ಪನಾಸ್ವಪ್ನವು

ಕಂಡುದು ಆಶ್ಚರ್ಯವೇನು ? ಈ ಬಗೆಯ ಕನಸನ್ನು ಕಂಡ ಮಹನೀಯ ರಲ್ಲಿ ಸಾಮಾನ್ಯವಾಗಿ ಎರಡು ಗುಂಪು ಇರುತ್ತವೆ. ಒಂದು ಗುಂಪು 'ಒಂದು ರಾಷ್ಟ್ರವು ಇನ್ನೊಂದರ ಸಂಗಡ ಕೇವಲ ಸ್ವಾರ್ಥ ಸಾಧನೆಯ ಮತ್ತು ಆತ್ಮ ರಕ್ಷಣೆಯ ದೃಷ್ಟಿಯಿಂದ ಸ್ನೇಹವನ್ನು ಬೆಳೆಯಿಸಿಕೊಳ್ಳಬೇಕು, ಎಂದು ನುಡಿದರೆ, ಇನ್ನೊಂದು ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಸಂಯುಕ್ತ ಪ್ರಯ ತ್ನದ ಫಲವಾಗಿ, ಸಕಲರ ಹಿತವನ್ನು ಸಾಧಿಸುವಂತಹ ಸಹಕಾರವು ಹುಟ್ಟ ಬೇಕು, ಎಂದು ಪ್ರತಿಪಾದಿಸುತ್ತದೆ. ಈ ಎರಡು ಪಂಗಡಗಳ ದೃಷ್ಟಿಕೋನ ದಲ್ಲಿ ಮೂಲವಾಗಿರುವ ವಿಚಾರಬಿಂದುವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವದು ಅವಶ್ಯಕವಾಗಿದೆ.

ಅಂತರ್ರಾಷ್ಟ್ರೀಯ ಸಂಬಂಧದಲ್ಲಿ ಪ್ರತಿಯೊಂದು ರಾಷ್ಟ್ರವು ತಾನು ಸಲ್ಲಿ ಸುತ್ತಿದ್ದ ಸಹಾಯದ ವಿಷಯವಾಗಿ, ಒಂದು ನೀತಿಯನ್ನು ಅನುಸರಿಸಿ, ಅದ ರಿಂದ ತನಗೆ ಯಾವ ಬಗೆಯ ಮನ್ನಣೆ, ಮತ್ತು ಪ್ರತಿಫಲಗಳು ದೊರೆಯು ವವು, ಎಂಬುದರ ಬಗ್ಗೆ ಅದು ಸರಿಯಾದ ಚಿತ್ರವನ್ನು ಮಾಡಿಕೊಂಡಿರಬೇಕು; ಎಂಬುದೇ ಸ್ವಾರ್ಥವಾದಿಗಳ ಅಭಿಪ್ರಾಯ. ಪರಸ್ಪರ ವಿನಿಮಯವು ಕೇವಲ ಸಮಾನ ಶಕ್ತಿಯುಳ್ಳವರಲ್ಲಿಯೇ ಸಾಧ್ಯ, ಅನ್ಯ ಅಶಕ್ತ ರಾಷ್ಟ್ರಗಳನ್ನು ಮೇಲಿ ನವರು ಕರುಣೆಯ ದೃಷ್ಟಿಯಿಂದಾಗಲಿ, ಅನುಚರರೆಂಬ ಭಾವನೆಯಿಂದಾಗಲಿ ನೋಡಿಕೊಳ್ಳಬೇಕು ಎಂದು ಅವರು ಸಾಧಿಸುತ್ತಾರೆ. ಒಟ್ಟಿನಲ್ಲಿ ತಮ್ಮ ಸಾಮರ್ಥ್ಯದಿಂದ ಯಾವುದೊಂದು ಸಮಾನ ಹಿತದ ಕಾರ್ಯವನ್ನು ಪ್ರಪಂಚ ದಲ್ಲಿ ಸಾಧಿಸುವದಿದ್ದರೆ ಅದರಿಂದ ತಮ್ಮ ಬಲವು ಹೇಗೆ ಬೆಳೆಯಬಹುದು ಎಂಬತ್ತ ಮಾತ್ರ ಅವರ ದೃಷ್ಟಿಯಿರುವದು ಈ ಪಂಗಡದ ವೈಶಿಷ್ಟ್ಯವಾಗಿದೆ.

ಆದರೆ ಎರಡನೇ ಪಕ್ಷದ ದೃಷ್ಟಿಗೆ ಇದರಲ್ಲಿ ಸಹಾಯದ ಬದಲು ಸಹ ಕಾರದ ಚಿತ್ರವು ಗೋಚರವಾಗುತ್ತದೆ. ಇದೇ ಈ ಎರಡೂ ಪಕ್ಷಗಳಲ್ಲಿದ್ದ ಅಂತರವು. ಸ್ವಯಂ ಪ್ರೇರಣೆಯಿಂದ ಒಟ್ಟು ಹಿತವನ್ನು ಸಾಧಿಸುವದಕ್ಕಾಗಿ ವಿಶ್ವದ ಪ್ರತಿಯೊಂದು ರಾಷ್ಟ್ರವು ಮುಂದೆ ಬರಬೇಕು, ಮತ್ತು ತತ್ಪರಿಣಾಮ ವಾಗಿ, ಆ ಸಂಯುಕ್ತ ಯತ್ನದ ಫಲವಾಗಿ, ಯಾವ ರಾಷ್ಟ್ರವೂ ವೈಯಕ್ತಿಕ ವಾಗಿ ಏನನ್ನೂ ಬಯಸಬಾರದು ಎಂಬುದೇ ಇನ್ನೊಂದು ಬಣದ ಮತವಾ

ಗಿದೆ. ಒಂದು ರಾಷ್ಟ್ರವು ಪ್ರಬುದ್ಧವಾಗಿರಬಹುದು, ಇನ್ನೊಂದು ಹಿಂದುಳಿದಿರಬಹುದು. ಒಂದು ದೇಶವು ದೊಡ್ಡದಿರಬಹುದು, ಇನ್ನೊಂದು ಚಿಕ್ಕದಿರಬಹುದು; ಅದರಂತೆಯೆ ಒಂದು ಕಡೆಯಲ್ಲಿ ಅತ್ಯಂತ ಪ್ರಭಾವಿಯಾದ ಪರಂಪರೆಯಿರಬಹುದು ಇನ್ನೊಂದರಲ್ಲಿ ಶಿಥಿಲವಾದ ಸಮಾಜರಚನೆಯಿರಬಹುದು. ಅದು ಎಂತಹ ಸ್ಥಿತಿಯಲ್ಲಿಯೇ ಇರಲಿ, ಎಲ್ಲರ ಶಿಕ್ಷಣ ಎಲ್ಲರ ಪ್ರಗತಿ ಮತ್ತು ಎಲ್ಲರ ಕಲ್ಯಾಣಕ್ಕಾಗಿ ಪ್ರತಿಯೊಂದು ರಾಷ್ಟ್ರವು ತನ್ನ ಶಕ್ತಿಗೆ ಅನುಸರಿಸಿ, ಸಹಕಾರವನ್ನು ನೀಡಬೇಕು; ಅಷ್ಟೇ ಅಲ್ಲದೆ ಈ ಅಂತರ್ರಾಷ್ಟ್ರೀಯ ಯೋಜನೆಯ ದುರ್ಲಾಭವನ್ನು ಯಾವ ರಾಷ್ಟ್ರವೂ ಪಡೆಯಬಾರದು, ಎಂಬುದೇ ಎರಡನೆಯ ಮತಾನುಯಾಯಿಗಳ ವಿಚಾರ.

ಮಾನವನು ತನ್ನ ಅನುಕೂಲಕ್ಕಾಗಿ ನಿರ್ಮಿಸಿಕೊಂಡ ಸಮಾಜದ ಪ್ರತಿಯೊಂದು ಸಂಘಟನೆಯಂತೆಯೇ ಈ ವಿಶ್ವಯೋಜನೆಯಲ್ಲಿಯೂ ಗುಣಾವಗುಣಗಳು ಅಡಕವಾಗಿರುವದು ಸ್ವಾಭಾವಿಕವಾಗಿದೆ. ಯಾವುದೊಂದು ಸಾಮಾಜಿಕ ಕಾರ್ಯಕ್ಕೆ ಮಾನವನು ನೀಡಿದ ಸೇವೆಯ ಬದಲಾಗಿ ಆತನು ಯಾವ ಮನ್ನಣೆಯನ್ನೂ ಅಪೇಕ್ಷಿಸದಿರುವದು ಜನಸಾಮಾನ್ಯರಿಗೆ ಅಸಹಜವೆಂದೇ ಹೇಳಬೇಕಾಗುವದು. ಅದರಂತೆಯೆ ಒಂದುಸಂಸ್ಥೆಯನ್ನು ಎಲ್ಲರ ಹಿತದ ಸಲುವಾಗಿ ಸ್ಥಾಪಿಸಿಕೊಂಡು, ಅದರ ಪ್ರತಿಯೊಬ್ಬ ಸದಸ್ಯನು ತನ್ನ ಸಮಯ ಸಲಕರಣೆಗಳ ಒಂದಂಶವನ್ನು ಆ ಸಂಸ್ಥೆಯ ಉತ್ಕರ್ಷಕ್ಕಾಗಿ ಯಶಸ್ಸಿಗಾಗಿ ವಿನಿಯೋಗಿಸುವಾಗ್ಗೆ, ಯಾವನಾದರೂ ಒಬ್ಬ ವ್ಯಕ್ತಿಯು ಆ ಸಂಸ್ಥೆಯ ಹೆಸರಿನಲ್ಲಿ ತನ್ನ ಪ್ರಾಬಲ್ಯವನ್ನು ಮಾತ್ರ ಹೆಚ್ಚಿಸಿಕೊಳ್ಳುವದು ಅನರ್ಥವಿದ್ದಷ್ಟೆ ಅಸಹ್ಯವೂ ಆಗಿರುವದು. ಆದರೆ ಈ ಬಗೆಯ ಪರಿಸ್ಥಿತಿಯು ಇಂದಿಗೂ ಪ್ರತಿಯೊಂದು ಸ್ಥಳದಲ್ಲಿರುವ ಚಿಕ್ಕ ದೊಡ್ಡ ಸಂಸ್ಥೆಗಳಲ್ಲಿ ಕಂಡುಬರುವದಷ್ಟೆ, ಅಲ್ಲದೆ ಅಂತರ್ರಾಷ್ಟ್ರೀಯ ಸಂಘಟನೆಯಲ್ಲಿ ಕೂಡ ಕಂಡುಬರುವದು ಮಾನವ ಸ್ವಭಾವದ ಒಂದು ಬದಿಯನ್ನು ಸ್ಪಷ್ಟವಾಗಿ ತೋರಿಸುತ್ತದೆ.

ವಾಹನಗಳ ಸೌಕರ್ಯ, ವಿದ್ಯಾಭ್ಯಾಸದ ಅನುಕೂಲ, ಅಂಚೆ ತಂತಿಯ ಪ್ರಯೋಜನ, ವ್ಯಾಪಾರದ ಸಹಕಾರಗಳಂತೆಯೆ; ರಾಜಕೀಯ ಒಪ್ಪಂದಗಳ ದೃಷ್ಟಿಯಿಂದ ಕೂಡ, ವಿಶ್ವದ ವಿವಿಧ ರಾಷ್ಟ್ರಗಳಲ್ಲಿ ಪರಸ್ಪರ ಸಂಬಂಧವು

ಅನೇಕ ಶತಮಾನಗಳಿಂದ ರೂಢಿಯಲ್ಲಿದ್ದರೂ, ಯುದ್ಧಗಳು ಕೊನೆಗೊಂಡು, ಶಾಂತಿಯ ಸ್ಥಾಪನೆಯಾಗಬೇಕಾದರೆ ಯಾವ ಬಗೆಯ ಕಾರ್ಯಕ್ರಮವನ್ನು ಕೈಕೊಳ್ಳಬೇಕು ಎಂಬ ವಿಧಾಯಕ ವಿಷಯವನ್ನು ಯೋಚಿಸುವದಕ್ಕಾಗಿ ಉದ್ದೇಶಪೂರ್ವಕ ಪ್ರಯತ್ನಗಳು ಆರಂಭವಾದುದು ಈಗ ಒಂದೆರಡು ಶತಕಗಳ ಈಚೆಗೆ ಮಾತ್ರ. ಒಬ್ಬ ಹಗೆಯನ್ನು ಸದೆಬಡೆಯಲಿಕ್ಕೆ ಇನ್ನೊಬ್ಬ ಆತನ ಹಗೆಯ ಸಂಗಡ ಸಂಧಿಯನ್ನು ಮಾಡಿಕೊಳ್ಳುವ ಪರಿಪಾಠವು ಎಂದಿನಿಂದಲೊ ಅಸ್ತಿತ್ವದಲ್ಲಿದೆ. ಆದರೆ ಕೆಲವರು ಕೂಡಿ ಒಬ್ಬನನ್ನಾಗಲಿ – ಹಲವರನ್ನಾಗಲಿ ಸೋಲಿಸಿದ ನಂತರ, ಅರಾಜಕತೆ, ಆರ್ಥಿಕ ಕ್ಲೇಶ ಮತ್ತು ಸಾಮಾಜಿಕ ಕೋಲಾಹಲವೆದ್ದ ಪರಿಸ್ಥಿತಿಯಲ್ಲಿ, ಮತ್ತೆ ಶಾಂತಿಯು ನೆಲಸಿ, ಸುಭಿಕ್ಷವು ಗೋಚರವಾಗುವಂತೆ ಮಾಡಬೇಕಾದ ಕೆಲಸದ ರಚನಾತ್ಮಕವಾದ ಕಾರ್ಯ ವನ್ನು ಕೈಕೊಳ್ಳುವ ವಿವೇಕವು ಪ್ರಪಂಚದ ರಾಷ್ಟ್ರಗಳಲ್ಲಿ ತೀರ ಮೊನ್ನೆ ಮೊನ್ನೆ ಉದಯವಾಗಿದೆ.

ಆದರೆ ಈ ಬಗೆಯ ವಿಶಿಷ್ಟ ಕಾರ್ಯವು ಕೂಡ, ವಿಕ್ಷಿಪ್ತವಾದ ಸ್ವರೂಪ ವನ್ನು ತಳೆದು ಇಂದಿಗೂ ಅದೇ ಸ್ಥಿತಿಯಲ್ಲಿರುವದು. ಯುದ್ಧ ಸಮಯ ದಲ್ಲಿ ಪಂಗಡಗಳನ್ನು ಮಾಡಿಕೊಳ್ಳುವಾಗ್ಗೆ ಪ್ರತಿಯೊಂದು ಪಕ್ಷದ ಬಲಾಬಲ ಗಳನ್ನು ತೂಗಿನೋಡಿ, ಯಾವುದೊಂದನ್ನು ಸೇರುವಂತೆ, ಶಾಂತಿ ಸ್ಥಾಪನೆಯ ಕಾರ್ಯದಲ್ಲಿಯೂ ಸಮರ್ಥ ರಾಷ್ಟ್ರಗಳ ಗುಂಪು ಮತ್ತು ಉಳಿದ ಮಿತ್ರರ ವೃಂದ, ಹೀಗೆ ಇಬ್ಬಣಗಳಾಗಿದ್ದುದು ಗಮನಾರ್ಹವಾದ ವಿಷಯವಾಗಿದೆ. ಈ ಬಗೆಯ ಸ್ಥಿತಿಯು ಈ ಕಾಲದಲ್ಲಿ ಕೂಡ ಕಂಡುಬರುವದು. ಮಾನವನು ಪ್ರಗತಿಯತ್ತ ಹಂಬಲಿಸುತ್ತಿದ್ದರೂ ತನ್ನ ಗುಣಗಳ ಗೊಂದಲಬಲ್ಲಿ ಹೇಗೆ ಸಿಕ್ಕುಬಿದ್ದಿರುವನೆಂಬುದನ್ನು ಇದು ತೋರಿಸುತ್ತದೆ. ಈಗ ಎರಡು ಶತಮಾನ ಗಳ ಹಿಂದೆ ಫ್ರಾನ್ಸದ ಅರಸನಾದ ೧೪ನೆಯ ಲುಯಿಯನ್ನು ಸೋಲಿಸಿದ ನಂತರ, ಆ ಮೇಲೆ ನೆಪೋಲಿಯನ್ನನ ಪರಾಜಯವಾದ ಮೇಲೆ, ಮತ್ತು ಮೊನ್ನೆ ಪ್ರಪಂಚದ ಮೊದಲನೆಯ ಮಹಾಯುದ್ಧದ ಮುಕ್ತಾಯವೆಂದು ಜರ್ಮನಿಯನ್ನು ಸದೆಬಡೆದ ಪರಿಣಾಮವಾಗಿ ವಿಶ್ವಶಾಂತಿಯ ಸ್ಥಾಪನೆಯ ಕಾರ್ಯವು ವಿಧಾಯಕವಾದ ರೀತಿಯಲ್ಲಿ ಯೋಜಿತವಾದರೂ, ಅದರ ಪ್ರತ್ಯಕ್ಷ ಕಾರ್ಯರೂಪವು ಮತ್ತೆ ಬಲಿಷ್ಠ ಮತ್ತು ಸಹಕಾರಪ್ರಿಯ ಎಂಬೆರಡು ಗುಂಪು

ಗಳ ಮೇಲಾಟದಲ್ಲಿ ಕಳೆಗೆಟ್ಟಿತು; ಇದಕ್ಕೆ ಕಾರಣವೆಂದು ನಾವು ಮಾನವ ಕುಲವನ್ನು, ತನ್ನ ಪ್ರವೃತ್ತಿಯನ್ನು ಬಿಡದಿದ್ದುದಕ್ಕಾಗಿ ಹಳಿಯುತ್ತಿದ್ದರೂ; ಅದು ಆಗಾಗ್ಗೆ ಜನಿಸುತ್ತಿರುವ ಸಮಸ್ಯೆಗಳನ್ನು ಎದುರಿಸುವದಕ್ಕಾಗಿ ಮತ್ತೆ ಶಾಂತಿಗಾಗಿ ಉತ್ಸಾಹಪೂರ್ಣ ಪ್ರಯತ್ನವನ್ನೂ, ಹೃತ್ಪೂರ್ವಕವಾದ ಆಕಾಂಕ್ಷೆಯನ್ನೂ ತಳೆದಿರುವದು ಎಂಬುದನ್ನು ಕಂಡು, ಕೌತುಕ ಪಡದೆ ಇರಲಾರೆವು.

ಕಳೆದ ಶತಮಾನದಲ್ಲಿ ಸಂಭವಿಸಿದ ಅಂತರ್‌ರಾಷ್ಟ್ರೀಯ ಸಂಘಟನೆಯಲ್ಲಿ ಪ್ರಮುಖವಾದ ಭಾಗವು ಶಾಸನಾಧಿಕಾರದ್ದಾಗಿದೆ. ಪ್ರೇರಣೆಯಿಂದ ಪ್ರಯತ್ನದ ಪ್ರಾರಂಭ. ಆ ಪ್ರಯತ್ನವು ಸಾರ್ವಜನಿಕವಾದಾಗ ಅದಕ್ಕೊಂದು ಅಧಿಕಾರದ ಆವಶ್ಯಕತೆಯಿರುತ್ತದೆ. ಈ ಅಧಿಕಾರವು ಎಲ್ಲರೂ ಕೂಡಿ ಒಪ್ಪಿಕೊಂಡ ಕೆಲವು ನಿಯಮ-ನಿಯಂತ್ರಣಗಳಿಂದ ಪ್ರಾಪ್ತವಾಗುತ್ತದೆ. ಕಳೆದ ಶತಮಾನದಲ್ಲಿ ಪರಸ್ಪರ ವಿಚಾರ ವಿನಿಮಯದ ಫಲವಾಗಿ, ಪ್ರಪಂಚದ ಕೆಲವು ರಾಷ್ಟ್ರಗಳು ಅಂತರ್‌ರಾಷ್ಟ್ರೀಯ ಸಂಬಂಧದ ನಿರ್ದಿಷ್ಟ ರೀತಿ ಮತ್ತು ನೀತಿಗಳನ್ನು ರೂಪಿಸಿದರೂ, ಅದರ ಆರಂಭವಾದುದು ಈಗ ೨-೩ ಶತಮಾನಗಳಿಗಿಂತ ಹಿಂದೆಯೆ ಎಂದೆನ್ನಬಹುದು. ಮೊದಲು ವ್ಯಾಪಾರಿಗಳು ದೇಶ ವಿದೇಶಗಳಿಗೆ ಹೋಗಿಬಂದು ಪರಸ್ಪರ ವಾಣಿಜ್ಯ-ವ್ಯವಹಾರವನ್ನು ಸುಕರವಾಗಿ ಸಾಗಿಸಿಕೊಳ್ಳುವದಕ್ಕಾಗಿ ಮಾಡಿಕೊಂಡ ಕೆಲವು ರೂಢಿ-ಸಾಂಪ್ರದಾಯಗಳೇ ಮುಂದೆ ಅಂತರ್‌ರಾಷ್ಟ್ರೀಯ ಅರ್ಥಶಾಸ್ತ್ರವನ್ನು ರೂಪಿಸಿದಂತೆ, ರಾಜನೀತಿಯಲ್ಲಿಯೂ ಹಲವು ರಾಷ್ಟ್ರಗಳು ಒಂದೆಡೆ ಸೇರುವದಕ್ಕೆಂದು ಮಾಡಿಕೊಂಡ ನಿಯಮ-ನಿಬಂಧನೆಗಳೆ, ಅನಂತರ ಅಂತರ್‌ರಾಷ್ಟ್ರೀಯ ಶಾಸನದಲ್ಲಿ ಪರಿಣಮಿಸಿದವು. ಆರಂಭದಲ್ಲಿ ಈ ಬಗೆಯ ಶಾಸನಗಳು ಕೇವಲ ಔಪಚಾರಿಕವಾಗಿದ್ದು ಕ್ರಮವಾಗಿ ಅವುಗಳ ಪರಿಪಾಲನೆಯ ಬಗ್ಗೆ ರಾಯಭಾರಿಗಳ ನೇಮಕ, ಪ್ರತಿಯೊಂದು ರಾಜ್ಯದಲ್ಲಿ ಇನ್ನುಳಿದ ರಾಷ್ಟ್ರಗಳ ಪ್ರತಿನಿಧಿಗಳ ಪ್ರತಿಷ್ಠಾಪನೆಯೆ ಮೊದಲಾದ ಸಾಧನಗಳ ಮೂಲಕ, ಅವು ಕಾರ್ಯರೂಪಕ್ಕಿಳಿಯುವಂತಹ ಪರಿಪಾಠಗಳು ಅಸ್ತಿತ್ವದಲ್ಲಿ ಬಂದುವು. ರಾಯಭಾರಿಗಳ ಪ್ರಯೋಜನವು ಮೊದಲು ತಮ್ಮ ಅರಸರ ಇಲ್ಲವೆ ರಾಷ್ಟ್ರದ ಅಭಿಪ್ರಾಯವನ್ನು ಮಿಕ್ಕವರಿಗೆ ತಿಳಿಯುವ ಭಾವ-ಭಾಷೆಗಳಲ್ಲಿ ಹೇಳುವದಕ್ಕೆಂದು ಆರಂಭವಾದ ಈ

ಸಂಸ್ಥೆಯು ಇಂದು ಅಂತರ್ರಾಷ್ಟ್ರೀಯ ಸಂಬಂಧವನ್ನು ಸುಗಮಗೊಳಿಸುವ ಕಾರ್ಯದಲ್ಲಿ ಅತ್ಯಂತ ಪ್ರಭಾವಪೂರ್ಣ ಪಾತ್ರವನ್ನು ವಹಿಸಿಕೊಂಡಿದೆ.

೧೯ನೆಯ ಶತಮಾನದ ಕೊನೆಯ ಪಾದದಲ್ಲಿ ಹೇಗ್ ನಗರದಲ್ಲಿ ಜರುಗಿದ ಶಾಂತಿ ಸಮ್ಮೇಳನಗಳು ಅಂತರ್ರಾಷ್ಟ್ರೀಯ ಸಂಬಂಧವನ್ನು ಬಂಧುರವಾದ ತಳಹದಿಯ ಮೇಲೆ ನೆಲಸುವದಕ್ಕಾಗಿ, ಕೆಲವು ಶಾಸನಗಳನ್ನು, ನಿಯಮಗಳನ್ನು ನಿರ್ಧರಿಸಿದವು. ಯುದ್ಧವನ್ನು ನಡೆಯಿಸುವ ಸಂಪ್ರದಾಯ, ಜಲ-ನೆಲ-ಸೇನೆಗಳ ಪರಿವಹನದಲ್ಲಿ ಮತ್ತು ಪ್ರಯೋಜನದಲ್ಲಿ ಪ್ರತಿಯೊಂದು ರಾಷ್ಟ್ರವು ಪಾಲಿಸಬೇಕಾದ ಪರಂಪರೆಗಳು, ಮತ್ತು ವ್ಯಾಪಾರ-ವ್ಯವಸಾಯವನ್ನು-ಅಂತರ್ರಾಷ್ಟ್ರೀಯ ಕ್ಷೇತ್ರದಲ್ಲಿ ಸಾಗಿಸಿಕೊಂಡು ಹೋಗಬೇಕಾದ ರೂಢಿ ಇವುಗಳನ್ನು ಯೋಚಿಸಿದ ಅನೇಕ ಸಭೆ-ಸಮ್ಮೇಳನಗಳು ಈ ಐಯ್ವತ್ತು ವರ್ಷಗಳಿಂದ ಜರುಗುತ್ತಲಿವೆ. ಎಷ್ಟೋ ಸಂಘ, ಸಂಸ್ಥೆಗಳ ಸ್ಥಾಪನೆಯೂ ಆಗಿದೆ. ಆದರೆ ಪ್ರತಿಯೊಂದು ಶಾಸನಕ್ಕೆ ಅದನ್ನು ನಡೆಯಿಸುವ ಅಧಿಕಾರವೊಂದು ಬೆಂಬಲವಾಗಿರುವದು ಇಂದಿನ ವರೆಗೆ ಪ್ರಚಲಿತವಾಗಿರುವ ರೀತಿಯಾಗಿದೆ. ಅದರ ಶಕ್ತಿಯ ಮೇಲೆ ಆ ಶಾಸನದ ಉಪಯೋಗ ಮತ್ತು ಪ್ರಭಾವಗಳು ಅವಲಂಬಿಸಿರುವದೂ ಅಷ್ಟೆ ಸಾರ್ವತ್ರಿಕವಾಗಿದೆ. ಅಂತೆಯೆ ಸ್ವಯಂಪ್ರೇರಣೆಯಿಂದ ಸಕಲರ ಹಿತವನ್ನು ಸಾಧಿಸುವದಕ್ಕಾಗಿ ಪ್ರಪಂಚದ ರಾಷ್ಟ್ರಗಳು ಒಂದಾಗಿ ಕೈಕೊಂಡ ಇಲ್ಲಿಯ ವರೆಗಿನ ಪ್ರಯತ್ನಕ್ಕೆ ಕೂಡ ಮಿತವಾದ ಯಶಸ್ಸು ದೊರೆತುದನ್ನು ನಾವು ನೋಡುತ್ತಿದ್ದೇವೆ.

ಇಂತಹ ಹಿನ್ನೆಲೆಯಲ್ಲಿಯೆ ೧೯೧೯ ರ ಜನವರಿ ೨೫ ನೆಯ ದಿನಾಂಕ, ಪ್ರಥಮ ಮಹಾಯುದ್ಧವು ಕೊನೆಗೊಂಡು, ಶಾಂತಿಸಮ್ಮೇಲನವು ಸೇರಿದುದರ ಪರಿಣಾಮವಾಗಿ, ರಾಷ್ಟ್ರಸಂಗಮ (ರಾಷ್ಟ್ರಸಂಘ) (League of Nations) ಎಂಬ ಹೆಸರಿನ ಅಪೂರ್ವವಾದ ಸಂಸ್ಥೆಯು ಜನಿಸಿತು ಎಂದು ಸಾರ-ಲಾಯಿತು. ಈ ಒಂದು ಘಟನೆಯು ಮಾನವನ ಧೈರ್ಯ, ಸತತ ಪ್ರಯತ್ನ ಮತ್ತು ಆಶಾವಾದದ ಪ್ರತೀಕವಾಗಿ ನಿಂತಿದೆ. ಯುದ್ಧದಿಂದ ಜರ್ಜರಿತವಾದ ಪ್ರಪಂಚದಲ್ಲಿ ಶಾಂತಿಯು ಸ್ಥಾಪಿತವಾಯಿತು, ಆದರೆ ಆ ವಿಷಯದತ್ತ ಮುಂದುವರಿದ ರಾಜ್ಯಗಳ ನಾಯಕರ ಮನಸ್ಸು ಅಷ್ಟು ರಭಸದಿಂದ ಹರಿದಿರ

ಲಿಲ್ಲ. ದೊರೆತ ಶಾಂತಿಯನ್ನು ಉಳಿಸಿಕೊಳ್ಳುವದು ಹೇಗೆ? ಮತ್ತು ಯುದ್ಧಗಳಿಗಾಗಿ ಅಣಿಯಾಗುತ್ತಿದ್ದ ಪ್ರಚಂಡ ಸಲಕರಣೆಗಳನ್ನು ಶಾಂತಿ-ಸೌಹಾರ್ದಗಳು ಬಲಗೊಳ್ಳುವಂತೆ ವಿನಿಯೋಗಿಸಿಕೊಳ್ಳುವದು ಹೇಗೆ? ಎಂಬುದನ್ನು ಯೋಚಿಸುವದೇ ಅದರ ಮುಖ್ಯಪ್ರಮೇಯವಾಗಿತ್ತು.

ರಾಷ್ಟ್ರಸಂಗಮವನ್ನು ಕಟ್ಟಿಕೊಂಡುದು ಅದನ್ನೊಂದು ಶಾಸನ ಸಮ್ಮತವಾದ ಅಧಿರಾಷ್ಟ್ರ ಎಂಬ ವಿಚಾರದಿಂದ ಅಲ್ಲ, ಮತ್ತು ಆ ಸಂಘಟನೆಯು ಮುಖಾಂತರ ಕೈಕೊಳ್ಳುವ ಯಾವುದೆ ನಿರ್ಣಯವನ್ನು ತನ್ನದೇ ಆದ ಒಂದು ಸೇನಾಬಲವನ್ನು ನಿರ್ಮಿಸಿಕೊಂಡು ಕಾರ್ಯರೂಪಕ್ಕಿಳಿಸಬೇಕು ಎಂಬ ಹಂಬಲವೂ ಆ ಯೋಜಕದಲ್ಲಿರಲಿಲ್ಲ. ಸ್ವಯಂ ಪ್ರೇರಣೆಯಿಂದ ಮತ್ತು ಪೂರ್ಣ ಸಂತೋಷದಿಂದ ಪ್ರಪಂಚದ ರಾಷ್ಟ್ರಗಳು ತಮ್ಮ ಅಧಿಕಾರ-ಶಕ್ತಿ-ಸಂಪತ್ತುಗಳ ಒಂದಂಶವನ್ನು ಈ ಸಂಸ್ಥೆಯ ವ್ಯವಸ್ಥೆಗಾಗಿ ಸಲ್ಲಿಸಬೇಕು ಮತ್ತು ಅಷ್ಟೇ ಸಂಯಮ ಹಾಗೂ ಸಹನಶೀಲತೆಯಿಂದ ಸಂಗಮದ ಎಲ್ಲ ಸದಸ್ಯರು ಪರಸ್ಪರ ಗೌರವಾದರಗಳನ್ನು ಕಾಪಾಡಬೇಕು ಎಂಬ ಉದಾತ್ತವಾದ ತತ್ವಗಳು ಈ ಸಂಘಟನೆಯ ಕಟ್ಟಡಕ್ಕೆ ತಳಹದಿಯಾದವು, ಈ ಬಗೆಯ ಉದ್ದೇಶಗಳಲ್ಲಿ ಮಾನವನು ತನ್ನ ಆದರ್ಶವನ್ನು ಪಡೆಯುವದಕ್ಕಾಗಿ ಹೇಗೆ ಎಡೆಬಿಡದೆ ಹೆಣಗುತ್ತಿರುವನು ಎಂಬುದು ಈ ಸಂಸ್ಥೆಯಿಂದ ಮತ್ತೆ ನೆನಪಿಗೆ ಬರುತ್ತದೆ.

ರಾಷ್ಟ್ರಸಂಗಮವು ಅಸ್ತಿತ್ವದಲ್ಲಿ ಬಂದ ಕೆಲವೇ ದಿನಗಳಲ್ಲಿ ವರ್ಸಾಯಿಯ ಒಪ್ಪಂದವು ಸ್ವೀಕೃತವಾಯಿತು. ಆದರೆ ಪ್ರಪಂಚದಲ್ಲಿ ಅದ್ಭುತವಾದ ಹಗೆಯನ್ನು ಸದೆಬಡೆದ, ಮಹಾಯುದ್ಧವನ್ನು ಗೆದ್ದ ಸಂತೋಷಕ್ಕಿಂತ, ಇಡಿಯ ವಿಶ್ವದ ನಿರಂತರ ಕಲ್ಯಾಣದ ದೃಷ್ಟಿಯಿಂದ ಶಾಂತಿ ನೆಲೆಯೆನಿಸುವ ಒಂದು ಸಂಸ್ಥೆಯನ್ನು ಕಟ್ಟಿದುದು ಹೆಚ್ಚಿನ ಸಂಭ್ರಮಕ್ಕೆ ಕಾರಣವಾಯಿತು. ಅದೊಂದು ಸಾಮಾನ್ಯವಾದ ಸಂಘಟನೆಯಾಗಿರದೆ ತನ್ನ ಪ್ರಾತಿನಿಧ್ಯ, ತನ್ನ ಅಧಿಕಾರಯುಕ್ತವಾಣಿ ಮತ್ತು ತನ್ನ ಉನ್ನತ ಪರಂಪರೆಗಳ ಮೂಲಕ ಅದು ಪ್ರತಿಯೊಂದು ರಾಷ್ಟ್ರಕ್ಕೆ ಮಾರ್ಗದರ್ಶನ ಮಾಡಬಲ್ಲ ಸಾಧನವಾಗ

ಬೇಕಲ್ಲದೆ ಸಂತತವಾದ ಸ್ಫೂರ್ತಿಯ ಸೆಲೆಯಾಗಬೇಕು, ಈ ಸಂಗಮ ಎಂಬುದೇ ನಿಯೋಜಕರ ಕನಸಾಗಿತ್ತು.

ಪ್ರತಿಯೊಂದು ಸಂಸ್ಥೆಗೆ ಒಂದು ಸಂವಿಧಾನ ವಿರುವಂತೆ ರಾಷ್ಟ್ರಸಂಗಮಕ್ಕೂ ಒಂದು ಸಂವಿಧಾನವು ರಚಿಸಲ್ಪಟ್ಟಿತು. ಆದರೆ ಅದು ಕಾರ್ಯಕ್ಷೇತ್ರವನ್ನು ಮರ್ಯಾದಿತ ಮಾಡುವ ನಿಯಮ-ನಿಯಂತ್ರಣಗಳ ಕಂತೆಯಾಗಿರದೆ, ತನ್ನ ಮುಂದೆ ಇರಿಸಿಕೊಂಡ ಭವ್ಯ ಉದ್ದೇಶಗಳನ್ನು ಸುಲಲಿತವಾಗಿ ಸಾಧಿಸುವ ಸೌಕರ್ಯವುಳ್ಳದ್ದೇ ಆಗಿತ್ತು. ಇಂತಹ ವಿಸ್ತಾರವುಳ್ಳ ಸಂವಿಧಾನವನ್ನು ಕಲ್ಪಿಸಿಕೊಳ್ಳುವ ಕಾರ್ಯದಲ್ಲಿ ಕಾಲಾಂತರದಲ್ಲಿ ಕೂಡ ಯಾರಿಗೂ ಆದರ್ಶದ ಪ್ರಾಪ್ತಿಗಾಗಿ ಅದರ ಕಟ್ಟುಸಿಟ್ಟುಗಳು ಕಾಲ್ತೊಡಕಾಗಬಾರದು ಎಂಬುದೇ ನಿಯೋಜಕರ ಧೋರಣೆಯಾಗಿತ್ತು. ಕಣ್ಣೆದುರಿಗೆ ಇಟ್ಟುಕೊಂಡ ತತ್ಕಾಲೀನ ವಿಷಯವಷ್ಟೇ ಅವರ ದೃಷ್ಟಿಯಲ್ಲಿರದೆ ಶಾಶ್ವತವಾದ ಶಾಂತಿಯತ್ತ ಆ ನಾಯಕರ ಮನಸ್ಸು ಆತುರವಾಗಿದ್ದ ಮೂಲಕ ಸಂವಿಧಾನದಂತಹ ಸಾಧನವನ್ನು ಅವರು ಸಂಕೋಲೆಯೆಂದು ಹೇಗೆ ಕಂಡುಕೊಳ್ಳಬಹುದು.?

ನಾಲ್ವತ್ತೈದು ರಾಷ್ಟ್ರಗಳು ಹಿರಿ-ಕಿರಿ, ಜಯಶೀಲ-ಪರಾಜಿತ, ಬಲಿಷ್ಠ-ಅಶಕ್ತ, ಆಧುನಿಕ-ಪುರಾತನ ಎಂಬ ಯಾವ ಭೇದಭಾವವೂ ಇಲ್ಲದೆ ಶಾಂತಿಯನ್ನು ಭದ್ರವಾದ ಸಿಂಹಾಸನದಲ್ಲಿ ಸ್ಥಾಪಿಸುವ ಒಂದೇ ಒಂದಾದ ಉದಾತ್ತ ಉದ್ದೇಶದಿಂದ ಮುಂದೆ ಬಂದು, ಆ ಸಂವಿಧಾನವನ್ನು ಸ್ವೀಕರಿಸಿ, ಅದರ ರಹಸ್ಯವನ್ನು ತಿಳಿದು, ಆ ಗುರಿಯನ್ನು ತಲುಪುವ ದಿವ್ಯ ಶಪಥವನ್ನು ಅಂದು ವಹಿಸಿಕೊಂಡವು. ಬಹಿರಂಗವಾಗಿ ಯಾವ ಆತಂಕ ಇಲ್ಲವೆ ಒತ್ತಡವಿಲ್ಲದೆ ಪ್ರತಿಯೊಂದು ರಾಷ್ಟ್ರವು ತನ್ನ ಹಿತ ಮತ್ತು ಮುಂದಿನ ಪೀಳಿಗೆಯ ಕ್ಷೇಮದ ದೃಷ್ಟಿಯಿಂದ ರಾಷ್ಟ್ರ ಸಂಗಮದ ಆ ಸೇವಾದೀಕ್ಷೆಯನ್ನು ಪಡೆಯಿತು.

ಈ ಸಂಸ್ಥೆಯ ಸಂವಿಧಾನದ ಮುಖ್ಯ ಭಾಗಗಳು ಕೇವಲ ನಾಲ್ಕು ಆಗಿವೆ. ಮೊದಲನೆಯದಾಗಿ ಮಹಾಸಭೆ, ಎರಡನೆಯದಾಗಿ ಕಾರ್ಯಮಂಡಲ, ಮೂರನೆಯದಾಗಿ ಪ್ರಧಾನ ಕಾರ್ಯಾಲಯ ಮತ್ತು ನಾಲ್ಕನೆಯದು ಹಾಗೂ ಅತ್ಯಂತ ಮಹತ್ತರವಾದುದು ಶಾಶ್ವತ ನ್ಯಾಯ ಮಂದಿರ,

ಇವೇ ಅದರ ಘಟಕಗಳಾಗಿವೆ. ಈ ಬಗೆಯ ಅಂಗರಚನೆಯನ್ನು ನಿರ್ಧರಿಸು ವಾಗ ಸ್ವಾಭಾವಿಕವಾಗಿಯೆ ಪರಾಜಿತ ರಾಷ್ಟ್ರಗಳ ಪ್ರಶ್ನೆಯು ಉದ್ಭವ ಹೊಂದಿತು. ಸಾಮಾನ್ಯವಾಗಿ ಇಂತಹ ಯುದ್ಧಗಳು ಜರುಗಿ ಒಂದು ಪಕ್ಷದ ಪರಾಜಯವಾದಾಗ, ಗೆದ್ದಪಕ್ಷವು ಸೋತ ಪಕ್ಷದ ಎಲ್ಲ ಪ್ರದೇಶ ವನ್ನು ಮತ್ತು ರಾಜ್ಯಗಳನ್ನು ತಮ್ಮ ತಮ್ಮಲ್ಲಿ ಹಂಚಿಕೊಳ್ಳುವದು ಇಲ್ಲಿಯ ವರೆಗೆ ವಾಡಿಕೆಯಾಗಿದ್ದಿತು. ಆದರೆ ರಾಷ್ಟ್ರ ಸಂಗಮದ ಒಂದು ವೈಶಿಷ್ಟ್ಯ ವೆಂದರೆ ಸೋಲಿನಲ್ಲಿ ಸೆರೆಬಿದ್ದ ಇಂತಹ ರಾಷ್ಟ್ರಗಳ ಅಪ್ರತಿಷ್ಠೆಯಾಗದಂತೆ ಮತ್ತು ಅಲ್ಲಿಯ ಪ್ರಜೆಗಳು ಹತಾಶರೂ, ನಿರ್ವೀರ್ಯರೂ ಆಗದಂತೆ ಮುಂಜಾಗ್ರತೆಯನ್ನು ವಹಿಸಿದುದೇ ಆಗಿದೆ. ಸಂಗಮವು ಯೋಜಿಸಿದ ಕಾರ್ಯಕ್ರಮದ ಮೇರೆಗೆ ಆ ಆ ರಾಷ್ಟ್ರಗಳಿಗೆ ತಕ್ಕ 'ಧರ್ಮದರ್ಶಿ' ಎಂದು ಗೆದ್ದ ರಾಷ್ಟ್ರಗಳಲ್ಲಿ ಕೆಲವನ್ನು ನೇಮಿಸಲಾಯಿತು. ಈ ವ್ಯವಸ್ಥೆಯು ಮೇರೆಗೆ ಇತ್ತ ಸದೆಬಡೆಯಲ್ಪಟ್ಟ ರಾಷ್ಟ್ರಗಳು ಮತ್ತೆ ಚೇತರಿಸಿಕೊಳ್ಳಲಿಕ್ಕೆ ಅನುಕೂಲ ವಾಯಿತಲ್ಲದೆ, ವಿಶ್ವಸ್ತಸ್ಥಾನದಲ್ಲಿದ್ದ ರಾಷ್ಟ್ರಗಳು ರಾಷ್ಟ್ರಸಂಗಮದ ಆದೇಶದಂತೆ ನಡೆಯುತ್ತಿದ್ದ ಕಾರಣ, ತಮ್ಮ ಪದದ ದುರ್ಲಾಭವನ್ನು ಪಡೆಯು ವಂತೆಯೂ ಆಗಲಿಲ್ಲ. ಈ ಅದ್ವಿತೀಯ ಏರ್ಪಾಡಿನ ಮೂಲಕ ಸಂಗಮದ ವಿಷಯವಾಗಿ ಜಯಶೀಲ ಮತ್ತು ಪರಾಜಿತ ಹೀಗೆ ಎರಡೂ ಪಕ್ಷಗಳ ಸದಸ್ಯ ರಾಷ್ಟ್ರಗಳಿಗೆ ಅತ್ಯಂತ ಆತ್ಮೀಯತೆ ಮತ್ತು ವಿಶ್ವಾಸಗಳು ಸಹಜವಾಗಿಯೆ ಹುಟ್ಟಿದವು.

ಈ ವೈಶಿಷ್ಟ್ಯದ ಜೊತೆಯಲ್ಲಿಯೆ ಜನ್ಮವನ್ನು ತಳೆಯದಿದ್ದರೂ, ಇವು ಗಳಿಂದ ಹೆಚ್ಚು ಉಪಯುಕ್ತವಾದ ಕಾರ್ಯವನ್ನು ಮಾಡುತ್ತ, ಇಂದಿಗೂ ರಾಷ್ಟ್ರಸಂಗಮದ ಉದಾತ್ತ ಆದರ್ಶಗಳನ್ನು ಕಾರ್ಯರೂಪಕ್ಕಿಳಿಸುತ್ತಿರುವ ಇನ್ನೊಂದು ಅಂಗವೆಂದರೆ ಅಂತರ್ರಾಷ್ಟ್ರೀಯ ಶ್ರಮಿಕ (ಕೂಲಿಕಾರರ) ಸಂಘಟನೆಯಾಗಿದೆ. ಪ್ರಪಂಚದೊಳಗಿನ ಯಾವುದೇ ರಾಷ್ಟ್ರವಿರಲಿ, ಅಲ್ಲಿ ಹೊಟ್ಟೆಯ ಹಿಟ್ಟಿಗಾಗಿ ಹಗಲಿರುಳು ದೇಹವನ್ನು ದಂಡಿಸುತ್ತಿದ್ದ ಶ್ರಮಿಕರ ಜೀವನವು ಯಾವ ತೊಡಕು, ತೊಂದರೆಗಳನ್ನು ಅನುಭವಿಸುತ್ತಿರುವದು ಮತ್ತು ದಾರಿದ್ರ್ಯ-ಅಜ್ಞಾನ-ಅನಾರೋಗ್ಯಗಳೇ ಮೊದಲಾದ ಅವರ ಅಸಂಖ್ಯ

ಸಮಸ್ಯೆಗಳಾವು? ಹಾಗೂ ಅವುಗಳಿಗೆ ಯಾವ ಬಗೆಯ ಉಪಾಯಗಳನ್ನು ಕೈಕೊಳ್ಳಬೇಕು? ಎಂಬುದನ್ನು ವಿಶ್ವದಾದ್ಯಂತ ಪ್ರಮಾಣದಲ್ಲಿ ಮೊದಲನೆಯ ಸಾರೆ ವಿಚಾರ ಮಾಡುವದಕ್ಕಾಗಿ ಈ ಸಂಘಟನೆ ಸ್ಥಾಪಿತವಾಯಿತು. ರಾಷ್ಟ್ರಸಂಗಮವು ರಾಜಕೀಯ ಮತ್ಸರದ ಮಹಾರೋಗದಿಂದ ಬಳಲಿ-ಬೆಂಡಾಗಿ, ನಿಸರ್ಗಸಿದ್ಧವಾದ ಮರಣವನ್ನು ಎದುರಿಸಬೇಕಾದರೂ, ಮನನೀಯ ದೃಷ್ಟಿಯಿಂದ ಬಡವರ-ಹಿಂದುಳಿದವರ ಮತ್ತು ಅಸಹಾಯ ಪರಿಸ್ಥಿತಿಯಲ್ಲಿದ್ದ ಶ್ರಮಿಕರ ಹಿತವನ್ನು ಸಾಧಿಸುವ ಏಕೈಕ ಧ್ಯೇಯವನ್ನಿಟ್ಟುಕೊಂಡು ಕೆಲಸಕ್ಕೆ ಹೊರಟ ಈ ಅಂತರ್‍ರಾಷ್ಟ್ರೀಯ ಶ್ರಮಿಕ ಸಂಘಟನೆಯು ಇನ್ನೂ ಅನುಕರಣೀಯವಾದ ಸೇವೆಯನ್ನು ಸಲ್ಲಿಸುತ್ತಿದೆ. ಒಂದು ದೃಷ್ಟಿಯಿಂದ ರಾಷ್ಟ್ರಮಂಡಲವು ತನ್ನ ಉದ್ದೇಶವೆಂದು ಇಟ್ಟುಕೊಂಡ ಮಾನವನ ಐಕ್ಯವನ್ನು ಅದು ಕಾರಣಾಂತರದಿಂದ ಸಾಧಿಸದೆ ನಿಷ್ಕ್ರಿಯವಾದಾಗ, ಮುಂದೆ ಇಪ್ಪತ್ತು ವರ್ಷಗಳ ನಂತರ ಅದೇ ದೃಷ್ಟಿಯಿಂದ ಅಸ್ತಿತ್ವದಲ್ಲಿ ಬಂದ ಸಂಯುಕ್ತ ರಾಷ್ಟ್ರಸಂಘಗಳಿಗೆ, ಅದರ ಕರ್ತವ್ಯವನ್ನು ತೋರಿಸಿಕೊಡುವ ಕೈಗಂಬವಿದ್ದಂತಿದೆ. ಈ ಸಂಘಟನೆ. ಮಾನವನು ತಾನು ಆರ್ಥಿಕ-ರಾಜಕೀಯ-ಸಾಮಾಜಿಕ ಸಮಾನತೆಯನ್ನು ಪಡೆಯುವದಕ್ಕಿಂತ ಮುಂಚೆ, ಹೇಗೆ ತನ್ನ ಹೃದಯದಲ್ಲಿ ಆ ಬಗೆಯ ಉಚ್ಚಭಾವನೆಗೆ ಉಚಿತ ಸ್ಥಾನವನ್ನು ಕಲ್ಪಿಸಿಕೊಡುವದು ಅಗತ್ಯವಾಗಿದೆ, ಎಂಬುದನ್ನು ಅಂತರ್‍ರಾಷ್ಟ್ರೀಯ ಶ್ರಮಿಕ ಸಂಘಟನೆಯು ಸಿದ್ಧಮಾಡಿತೋರಿಸುತ್ತದೆ. ಕೆಲವರು ಈ ಸಂಘಟನೆಗೆ ಶ್ರೀಮಂತರ ಕೈಗೊಂಬೆಯೆಂದೂ, ವಿರಾಗಿಗಳ ಕ್ರೀಡಾಕ್ಷೇತ್ರವೆಂದೂ, ಕೃತ್ರಿಮ ಪ್ರೇಮದ ಪ್ರದರ್ಶನವೆಂದೂ ಟೀಕಿಸುವದುಂಟು. ಆದರೆ ಈ ಬಗೆಯ ಯಾವ ಹೊಗಳಿಕೆ-ತೆಗಳಿಕೆಗಳಿಗೂ ಬಲಿಯಾಗದೆ ಈ ಸಂಘಟನೆಯು ಸತತವಾಗಿ ಸರ್ವೋದಯದ ಕಾರ್ಯವನ್ನು ಕೈಕೊಂಡಿದೆ.

ರಾಷ್ಟ್ರಮಂಡಲದ ರಚನೆಯ ಜೀವಾಳವೆಂದರೆ ಮಹಾಸಭೆಯೆಂದೇ ಹೇಳಬಹುದು. ಅದು ಮೊದಲನೆಯ ಒಡಂಬಡಿಕೆಯಲ್ಲಿ ಸಹಭಾಗಿಗಳಾದ ಎಲ್ಲ ರಾಷ್ಟ್ರಗಳ ಮತ್ತು ಆಮೇಲೆ ಸೇರಬಹುದಾದ ಸದಸ್ಯರ ಪ್ರತಿನಿಧಿಗಳನ್ನೊಳಗೊಂಡ ಒಂದು ಸಭೆ ಎನ್ನಬಹುದು. ಈ ಪ್ರತಿನಿಧಿಗಳು ತಮ್ಮ ತಮ್ಮ ಆಧಿಪತ್ಯದ ಪರವಾಗಿಯೆ ಮಾತನಾಡಬಲ್ಲ ಅಧಿಕಾರವಿದ್ದವರಿರಬೇಕು,

ಎಂಬ ಒತ್ತಾಯವೇನೂ ಇದ್ದಿರಲಿಲ್ಲ. ಅವರು ವೈಯಕ್ತಿಕವಾಗಿಯೂ ತಮ್ಮ ಅಭಿಪ್ರಾಯವನ್ನು ಸಭೆಯೆದುರು ಮಂಡಿಸಬಹುದು. ಒಟ್ಟಿನಲ್ಲಿ ೧೫೦ ರಷ್ಟು ಸದಸ್ಯರಿದ್ದ ಈ ಮಹಾಸಭೆಯು ರಾಷ್ಟ್ರಸಂಗಮದ ಮೂಲ ವಿಭಾಗ ವೆಂದೇ ಹೇಳಬಹುದು. ಪರಸ್ಪರರಲ್ಲಿ ಉಂಟಾದ ಯಾವುದೇ ಭಿನ್ನಾಭಿ ಪ್ರಾಯದ ವಿಷಯವಿರಲಿ, ಅನ್ಯರ ವಿರುದ್ಧವಾಗಿ ಮಾಡುವ ಯಾವ ಬಗೆಯದೇ ಆದ ದೂರು ಇರಲಿ, ಅಂತರ್ರಾಷ್ಟ್ರೀಯ ಸಂಬಂಧವನ್ನು ಹೆಚ್ಚು ದೃಢ- ಗೊಳಿಸುವ ಸಕಲ ಸಮಸ್ಯೆಗಳೇ ಇರಲಿ, ಈ ಸಭೆಯಲ್ಲಿ ಚರ್ಚೆಯಾಗಿ ಸರ್ವಾನುಮತದಿಂದ ನಿರ್ಣಯಗಳನ್ನು ಸ್ವೀಕರಿಸಬೇಕು ಎಂಬುದು ಇಲ್ಲಿಯ ಸಂಪ್ರದಾಯವಾಯಿತು. ಹೊಸ ಸದಸ್ಯರನ್ನು ಸಂಗಮದಲ್ಲಿ ಸೇರಿಸಿಕೊಳ್ಳುವ ಪ್ರಶ್ನೆಯು ಉದ್ಭೂತವಾದಾಗ ಸಭೆಯ ೩೪ ಸದಸ್ಯರು ಒಪ್ಪಿಗೆಯನ್ನು ಕೊಟ್ಟರೆ ಸಾಕು ಎಂಬುದೊಂದು ಮಹತ್ವದ ಸಂಗತಿಯು ಗಮನಾರ್ಹ ವಾಗಿದೆ. ಈ ಮಹಾಸಭೆಯಲ್ಲಿ ಒಪ್ಪಿದ ನಿರ್ಣಯಗಳನ್ನು ಆಮೇಲೆ ಸಮ್ಮತಿ ಯನ್ನು ಪಡೆಯಲಿಕ್ಕೆ, ಕಾರ್ಯಾಚರಣೆಯ ಸಲುವಾಗಿ ಹೆಚ್ಚಿನ ವಿವಾದ ವಾಗಿ ಸುಗಮಗೊಳಿಸುವ ಉದ್ದೇಶದಿಂದಲೊ ಕಾರ್ಯಮಂಡಲಕ್ಕೆ ಕಳಿಸ ಬೇಕು ಎಂಬ ಮಾತು ಸಂಗಮದ ಸಂವಿಧಾನದಲ್ಲಿ ಸ್ಪಷ್ಟಗೊಳಿಸಬಿದ್ದರೂ ಅದೊಂದು ಸಂಪ್ರದಾಯವಾಗಿದ್ದುದು ಸಂಗಮದ ಚರಿತ್ರೆಯಲ್ಲಿ ವಿಶಿಷ್ಟ ಅಂಶವಾಗಿದೆ

ಕಾರ್ಯಮಂಡಲವು ರಾಷ್ಟ್ರಸಂಗಮದ ಮನಸ್ಸು ಇದ್ದಂತೆ ಎಂದು ಹೇಳಬಹುದು. ಈ ಮನಸ್ಸೆಂಬ ರಹಸ್ಯಮಯ ಭಾವವೇ ಅಲ್ಲವೇ ಮನು ಷ್ಯನ ಏಳು-ಬೀಳುಗಳಿಗೆ ಕಾರಣವಾಗುವದು. ಈ ಮನಸ್ಸಿನ ಒಪ್ಪಿಗೆಯನ್ನು ಪಡೆಯುವದು ಜೀವಿಗಳಿಗೆ ಎಷ್ಟು ಕಠಿಣವಾದ ಸಮಸ್ಯೆಯಾಗಿರುವದು ಎಂಬುದು ಪ್ರಪಂಚದ ಇತಿಹಾಸದಲ್ಲಿ ಒಂದು ಹಿರಿಯ ವಿಷಯವಾಗಿದೆ. ಜೀವವು ಹಾತೊರೆಯುತ್ತಿರಬಹುದು, ಹೃದಯವು ಹಂಬಲಿಸುತ್ತಿರಬಹುದು. ದೇಹವು ತವಕಪಡುತ್ತಿರಬಹುದು ಯಾವುದೊಂದು ಉಪಯುಕ್ತವೆನಿಸುವ ಕಾರ್ಯವನ್ನು ಕೈಕೊಳ್ಳಲಿಕ್ಕೆ; ಆದರೆ ಮನಸ್ಸಿನ ಬೆಂಬಲವು ಈ ಎಲ್ಲ ಬಯಕೆಗಳಿಗೆ ಇರದಿದ್ದರೆ ಆಗಬೇಕಾದಷ್ಟು ಪರಿಣಾಮಕಾರಕ ಆದೀತೇ ಆಗಲಾರದು ಎಂಬುದು ಸ್ಪಷ್ಟವಾಗಿದೆ. ಅದರಂತೆಯೆ ಮನಸ್ಸಿನಲ್ಲಿ ಬಂದಿ

ಸಮಸ್ಯೆಗಳಾವು? ಹಾಗೂ ಅವುಗಳಿಗೆ ಯಾವ ಬಗೆಯ ಉಪಾಯಗಳನ್ನು ಕೈಕೊಳ್ಳಬೇಕು? ಎಂಬುದನ್ನು ವಿಶ್ವದಾದ್ಯಂತ ಪ್ರಮಾಣದಲ್ಲಿ ಮೊದಲನೆಯ ಸಾರೆ ವಿಚಾರ ಮಾಡುವದಕ್ಕಾಗಿ ಈ ಸಂಘಟನೆ ಸ್ಥಾಪಿತವಾಯಿತು. ರಾಷ್ಟ್ರ ಸಂಗಮವು ರಾಜಕೀಯ ಮತ್ಸರದ ಮಹಾರೋಗದಿಂದ ಬಳಲಿ-ಬೆಂಡಾಗಿ, ನಿಸರ್ಗಸಿದ್ಧವಾದ ಮರಣವನ್ನು ಎದುರಿಸಬೇಕಾದರೂ, ಮನನೀಯ ದೃಷ್ಟಿಯಿಂದ ಬಡವರ-ಹಿಂದುಳಿದವರ ಮತ್ತು ಅಸಹಾಯ ಪರಿಸ್ಥಿತಿಯಲ್ಲಿದ್ದ ಶ್ರಮಿಕರ ಹಿತವನ್ನು ಸಾಧಿಸುವ ಏಕೈಕ ಧ್ಯೇಯವನ್ನಿಟ್ಟುಕೊಂಡು ಕೆಲಸಕ್ಕೆ ಹೊರಟ ಈ ಅಂತರ್‍ರಾಷ್ಟ್ರೀಯ ಶ್ರಮಿಕ ಸಂಘಟನೆಯು ಇನ್ನೂ ಅನುಕರಣೀಯವಾದ ಸೇವೆಯನ್ನು ಸಲ್ಲಿಸುತ್ತಿದೆ. ಒಂದು ದೃಷ್ಟಿಯಿಂದ ರಾಷ್ಟ್ರಮಂಡಲವು ತನ್ನ ಉದ್ದೇಶವೆಂದು ಇಟ್ಟುಕೊಂಡ ಮಾನವನ ಐಕ್ಯವನ್ನು ಅದು ಕಾರಣಾಂತರದಿಂದ ಸಾಧಿಸದೆ ನಿಷ್ಕ್ರಿಯವಾದಾಗ, ಮುಂದೆ ಇಪ್ಪತ್ತು ವರ್ಷಗಳ ನಂತರ ಅದೇ ದೃಷ್ಟಿಯಿಂದ ಅಸ್ತಿತ್ವದಲ್ಲಿ ಬಂದ ಸಂಯುಕ್ತ ರಾಷ್ಟ್ರಸಂಘಗಳಿಗೆ, ಅದರ ಕರ್ತವ್ಯವನ್ನು ತೋರಿಸಿಕೊಡುವ ಕೈಗಂಬವಿದ್ದಂತಿದೆ. ಈ ಸಂಘಟನೆ. ಮಾನವನು ತಾನು ಆರ್ಥಿಕ-ರಾಜಕೀಯ-ಸಾಮಾಜಿಕ ಸಮಾನತೆಯನ್ನು ಪಡೆಯುವದಕ್ಕಿಂತ ಮುಂಚೆ, ಹೇಗೆ ತನ್ನ ಹೃದಯದಲ್ಲಿ ಆ ಬಗೆಯ ಉಚ್ಚ ಭಾವನೆಗೆ ಉಚಿತ ಸ್ಥಾನವನ್ನು ಕಲ್ಪಿಸಿಕೊಡುವದು ಅಗತ್ಯವಾಗಿದೆ, ಎಂಬುದನ್ನು ಅಂತರ್‍ರಾಷ್ಟ್ರೀಯ ಶ್ರಮಿಕ ಸಂಘಟನೆಯು ಸಿದ್ಧಮಾಡಿತೋರಿಸುತ್ತದೆ. ಕೆಲವರು ಈ ಸಂಘಟನೆಗೆ ಶ್ರೀಮಂತರ ಕೈಗೊಂಬೆಯೆಂದೂ, ವಿರಾಗಿಗಳ ಕ್ರೀಡಾಕ್ಷೇತ್ರವೆಂದೂ, ಕೃತ್ರಿಮ ಪ್ರೇಮದ ಪ್ರದರ್ಶನವೆಂದೂ ಟೀಕಿಸುವದುಂಟು. ಆದರೆ ಈ ಬಗೆಯ ಯಾವ ಹೊಗಳಿಕೆ-ತೆಗಳಿಕೆಗಳಿಗೂ ಬಲಿಯಾಗದೆ ಈ ಸಂಘಟನೆಯು ಸತತವಾಗಿ ಸರ್ವೋದಯದ ಕಾರ್ಯವನ್ನು ಕೈಕೊಂಡಿದೆ.

ರಾಷ್ಟ್ರಮಂಡಲದ ರಚನೆಯ ಜೀವಾಳವೆಂದರೆ ಮಹಾಸಭೆಯೆಂದೇ ಹೇಳಬಹುದು. ಅದು ಮೊದಲನೆಯ ಒಡಂಬಡಿಕೆಯಲ್ಲಿ ಸಹಭಾಗಿಗಳಾದ ಎಲ್ಲ ರಾಷ್ಟ್ರಗಳ ಮತ್ತು ಆಮೇಲೆ ಸೇರಬಹುದಾದ ಸದಸ್ಯರ ಪ್ರತಿನಿಧಿಗಳನ್ನೊಳಗೊಂಡ ಒಂದು ಸಭೆ ಎನ್ನಬಹುದು. ಈ ಪ್ರತಿನಿಧಿಗಳು ತಮ್ಮ ತಮ್ಮ ಆಧಿಪತ್ಯದ ಪರವಾಗಿಯೆ ಮಾತನಾಡಬಲ್ಲ ಅಧಿಕಾರವಿದ್ದವರಿರಬೇಕು,

ಎಂಬ ಒತ್ತಾಯವೇನೂ ಇದ್ದಿರಲಿಲ್ಲ. ಅವರು ವೈಯಕ್ತಿಕವಾಗಿಯೂ ತಮ್ಮ ಅಭಿಪ್ರಾಯವನ್ನು ಸಭೆಯೆದುರು ಮಂಡಿಸಬಹುದು. ಒಟ್ಟಿನಲ್ಲಿ ೧೫೦ ರಷ್ಟು ಸದಸ್ಯರಿದ್ದ ಈ ಮಹಾಸಭೆಯು ರಾಷ್ಟ್ರಸಂಗಮದ ಮೂಲ ವಿಭಾಗ ವೆಂದೇ ಹೇಳಬಹುದು. ಪರಸ್ಪರದಲ್ಲಿ ಉಂಟಾದ ಯಾವುದೇ ಭಿನ್ನಾಭಿ ಪ್ರಾಯದ ವಿಷಯವಿರಲಿ, ಅನ್ಯರ ವಿರುದ್ಧವಾಗಿ ಮಾಡುವ ಯಾವ ಬಗೆಯದೇ ಆದ ದೂರು ಇರಲಿ, ಅಂತರ್ರಾಷ್ಟ್ರೀಯ ಸಂಬಂಧವನ್ನು ಹೆಚ್ಚು ದೃಢ- ಗೊಳಿಸುವ ಸಕಲ ಸಮಸ್ಯೆಗಳೇ ಇರಲಿ, ಈ ಸಭೆಯಲ್ಲಿ ಚರ್ಚೆಯಾಗಿ ಸರ್ವಾನುಮತದಿಂದ ನಿರ್ಣಯಗಳನ್ನು ಸ್ವೀಕರಿಸಬೇಕು ಎಂಬುದು ಇಲ್ಲಿಯ ಸಂಪ್ರದಾಯವಾಯಿತು. ಹೊಸ ಸದಸ್ಯರನ್ನು ಸಂಗಮದಲ್ಲಿ ಸೇರಿಸಿಕೊಳ್ಳುವ ಪ್ರಶ್ನೆಯು ಉದ್ಭೂತವಾದಾಗ ಸಭೆಯ ⅔ ಸದಸ್ಯರು ಒಪ್ಪಿಗೆಯನ್ನು ಕೊಟ್ಟರೆ ಸಾಕು ಎಂಬುದೊಂದು ಮಹತ್ವದ ಸಂಗತಿಯು ಗಮನಾರ್ಹ ವಾಗಿದೆ. ಈ ಮಹಾಸಭೆಯಲ್ಲಿ ಒಪ್ಪಿದ ನಿರ್ಣಯಗಳನ್ನು ಆಮೇಲೆ ಸಮ್ಮತಿ ಯನ್ನು ಪಡೆಯಲಿಕ್ಕೆ, ಕಾರ್ಯಾಚರಣೆಯು ಸಲುವಾಗಿ ಹೆಚ್ಚಿನ ವಿವಾದ ವಾಗಿ ಸುಗಮಗೊಳಿಸುವ ಉದ್ದೇಶದಿಂದಲೂ ಕಾರ್ಯಮಂಡಲಕ್ಕೆ ಕಳಿಸ ಬೇಕು ಎಂಬ ಮಾತು ಸಂಗಮದ ಸಂವಿಧಾನದಲ್ಲಿ ಸ್ಪಷ್ಟಗೊಳಿಸಲ್ಪಟ್ಟರೂ ಅದೊಂದು ಸಂಪ್ರದಾಯವಾಗಿದ್ದುದು ಸಂಗಮದ ಚರಿತ್ರೆಯಲ್ಲಿ ವಿಶಿಷ್ಟ ಅಂಶವಾಗಿದೆ.

ಕಾರ್ಯಮಂಡಲವು ರಾಷ್ಟ್ರಸಂಗಮದ ಮನಸ್ಸು ಇದ್ದಂತೆ ಎಂದು ಹೇಳಬಹುದು. ಈ ಮನಸ್ಸೆಂಬ ರಹಸ್ಯಮಯ ಭಾವವೇ ಅಲ್ಲವೇ ಮನು ಷ್ಯನ ಏಳು-ಬೀಳುಗಳಿಗೆ ಕಾರಣವಾಗುವದು. ಈ ಮನಸ್ಸಿನ ಒಪ್ಪಿಗೆಯನ್ನು ಪಡೆಯುವದು ಜೀವಿಗಳಿಗೆ ಎಷ್ಟು ಕಠಿಣವಾದ ಸಮಸ್ಯೆಯಾಗಿರುವದು ಎಂಬುದು ಪ್ರಪಂಚದ ಇತಿಹಾಸದಲ್ಲಿ ಒಂದು ಹಿರಿಯ ವಿಷಯವಾಗಿದೆ. ಜೀವವು ಹಾತೊರೆಯುತ್ತಿರಬಹುದು, ಹೃದಯವು ಹಂಬಲಿಸುತ್ತಿರಬಹುದು. ದೇಹವು ತವಕಪಡುತ್ತಿರಬಹುದು ಯಾವುದೊಂದು ಉಪಯುಕ್ತವೆನಿಸುವ ಕಾರ್ಯವನ್ನು ಕೈಕೊಳ್ಳಲಿಕ್ಕೆ; ಆದರೆ ಮನಸ್ಸಿನ ಬೆಂಬಲವು ಈ ಎಲ್ಲ ಬಯಕೆಗಳಿಗೆ ಇರದಿದ್ದರೆ ಆಗಬೇಕಾದಷ್ಟು ಪರಿಣಾಮಕಾರಕ ಅಂದರೆ ಆಗಲಾರದು ಎಂಬುದು ಸ್ಪಷ್ಟವಾಗಿದೆ. ಅದರಂತೆಯೆ ಮನಸ್ಸಿನಲ್ಲಿ ಬಂದಿ

ತೆಂದರೆ, ಯಾವುದೇ ಬಗೆಯ ದುಸ್ತರವಾದ ಕೆಲಸವಿರಲಿ, ಅದನ್ನು ಪಾರು ಗಾಣಿಸುವ ದಾರಿಯನ್ನು ಅದು ಹುಡುಕಿ ತೆಗೆಯುತ್ತದೆ. ಈ ಬಗೆಯ ಗುಣಾವ ಗುಣಗಳು ಕಾರ್ಯಮಂಡಲದ ವಿಷಯವಾಗಿಯೂ ನಮಗೆ ನೋಡಲಿಕ್ಕೆ ದೊರೆಯುತ್ತಿವೆ. ಎಂತಹ ಸರಲ, ಸ್ಪಷ್ಟ ಮತ್ತು ಸಹಜವಾದ ವಿಚಾರವಿದ್ದಲ್ಲಿ ಅದನ್ನು ಈಡೇರಿಸಲಿಕ್ಕೆ ಮೊದಲು ಮನಸ್ಸನ್ನು ಒಲಿಸಿಕೊಳ್ಳುವದು ಹೇಗೆ ಅಗತ್ಯವಾಗಿರುವದೋ ಹಾಗೆಯೆ ರಾಷ್ಟ್ರಸಂಗದ ಆದರ್ಶದ ಇಡಿಯ ಭವ್ಯಭವನವೇ ಕಾರ್ಯಮಂಡಲದ ಅಭಿಪ್ರಾಯ ಮತ್ತು ಕಾರ್ಯಕ್ಷಮತೆಯ ಮೇಲೆ ಅವಲಂಬಿಸಿದೆ ಎಂದೆನ್ನಬಹುದು. ಮನಸ್ಸನ್ನು ನಿಗ್ರಹದಲ್ಲಿರಿಸುವದು, ಮನಸ್ಸನ್ನು ಒಪ್ಪಿಸುವದು, ಮನಸ್ಸನ್ನು ಕಾಯ ಮತ್ತು ವಾಕ್ಯಗಳಿಗೆ ಅನು ಸರಿಸಿ ನಡೆಯುವಂತೆ ಮಾಡುವದು ಅನಾದಿಕಾಲದಿಂದಲೂ ಮಾನವನ ಆತ್ಮ ವಿಜಯದ ಹೋರಾಟದ ಭಾಗವಾಗಿದೆ. ಇಂದು ಪ್ರಪಂಚದಲ್ಲಿ ಹೃದಯವು ಅಪೇಕ್ಷಿಸುತ್ತಿದ್ದ ಯಾವುದೊಂದು ವಸ್ತು-ವ್ಯಕ್ತಿ-ವಿಷಯದ ಪ್ರಾಪ್ತಿಗಾಗಿ ಮನಸ್ಸನ್ನು ಮುಂದುಮಾಡುವದೊಂದು ಅನಿವಾರ್ಯವೆನಿಸುವಂತಹ ಪರಿಸ್ಥಿತಿಯಾಗಿದೆ.

ಕಾರ್ಯಮಂಡಲವು ಒಂದು ಚಿಕ್ಕ ವಿಭಾಗ. ಮಹಾಸಭೆಯಲ್ಲಿ ನೂರಾರು ಜನ ಸದಸ್ಯರಿದ್ದು ಅದರಲ್ಲಿ ನಿರ್ಣಯವನ್ನು ಕೈಕೊಳ್ಳುವದು ಮತ್ತು ಆ ನಿರ್ಣಯದಂತೆ ಕಾರ್ಯಭಾಗವನ್ನು ಗೊತ್ತುಪಡಿಸುವದು ಆಗಾಗ್ಗೆ ಅಸಾಧ್ಯವಾಗದಿದ್ದರೂ, ವಿಲಂಬಕ್ಕೆ ಕಾರಣವನ್ನು ತೋರುತ್ತಿತ್ತು. ಅಂತೆಯೆ ವಿಶ್ವದ ಪ್ರಮುಖ ರಾಷ್ಟ್ರಗಳು ನಾಲ್ಕೈದು ಮತ್ತು ಇತರ ರಾಷ್ಟ್ರಗಳ ಪ್ರತಿನಿಧಿ ಗಳು ನಾಲ್ಕು ಹೀಗೆ ಅಲ್ಪಸಂಖ್ಯೆಯ ಸದಸ್ಯರಿದ್ದ ಈ ಮಂಡಲವು ಕಾರ್ಯ ಕಾರಿಯೆಂಬ ದೃಷ್ಟಿಯಿಂದ ಅತ್ಯಂತ ದಕ್ಷವಾದುದಾಗಿತ್ತು. ಈ ಮಂಡಲವು ಯೋಚಿಸುವ ವಿಷಯಗಳು ಸೂಕ್ಷ್ಮ ರೂಪದಲ್ಲಿ ಮಹಾಸಭೆಯು ಚರ್ಚಿಸಿದ ವಿಷಯಗಳೇ ಆಗಿದ್ದರೂ, ಸರಕಾರಗಳ ಪ್ರತಿನಿಧಿಗಳಿದ್ದ ಈ ಸಂಸ್ಥೆಯಲ್ಲಿ, ಜರುಗಿದ ವಾದ ವಿವಾದಕ್ಕೆ ಮತ್ತು ಸ್ವೀಕೃತವಾದ ಗೊತ್ತುವಳಿಗೆ ಕಾರ್ಯಾ ನ್ವಿತ ಆಗುವ ಸುಭಗತೆ ಮತ್ತು ಸಾಧ್ಯತೆಗಳು ಹೆಚ್ಚಾಗಿದ್ದುವು.

ವಿಶೇಷವಾಗಿ ಶಸ್ತ್ರಾಸ್ತ್ರಗಳ ಪ್ರಮಾಣವನ್ನು ನಿರ್ಧರಿಸುವದು, ಮತ್ತು ಮೇರೆ ಮೀರಿ ಶಸ್ತ್ರಾಸ್ತ್ರಗಳನ್ನು ನಿರ್ಮಾಣ ಮಾಡುವದರಿಂದಾಗುವ ದುಷ್ಪರಿ

ಣಾಮಗಳನ್ನು ತಿಳಿಸಿ ಹೇಳುವದು, ಪ್ರತಿಯೊಂದು ರಾಷ್ಟ್ರದ ಭೌಗೋಲಿಕ ಸೀಮೆಗಳನ್ನು ನಿರ್ಣಯಿಸುವದು, ಹಾಗೂ ಸಂರಕ್ಷಿಸುವದು ಮತ್ತು ಅದರ ರಾಜಕೀಯ ಸ್ವಾತಂತ್ರ್ಯವನ್ನು ಗೌರವಿಸುವದು, ಪರಸ್ಪರ ಭಿನ್ನಾಭಿಪ್ರಾಯ ಗಳ ಕಲಹದ ಇಲ್ಲವೆ ದೂರುಗಳ ವಿವರಗಳನ್ನು ಚರ್ಚಿಸುವದು, ಮತ್ತು ಕೈಕೊಂಡ ನಿರ್ಣಯಗಳನ್ನು ಕಾರ್ಯರೂಪದಲ್ಲಿ ತರುವಂತೆ ಉಚಿತ ಯೋಜನೆಗಳನ್ನು ಸೂಚಿಸುವದು, ಅಂತಹ ಭೇದ-ಭಾವಗಳ ವಿಷಯಗಳನ್ನು ಮಧ್ಯಸ್ಥರಿಗೆ ಒಪ್ಪಿಸದಿದ್ದ ಪ್ರಸಂಗಗಳಲ್ಲಿ ತಾನೇ ಅದರ ವಿಚಾರಣೆಯನ್ನು ಮಾಡುವದು, ಮತ್ತು ಯಾವದೊಂದು ರಾಷ್ಟ್ರವು ವಿಶ್ವ ಶಾಂತಿಯನ್ನು ಭಂಗ ಪಡಿಸುವಂತಹ ಕೆಲಸವನ್ನು ಕೈಕೊಂಡಾಗ್ಗೆ, ಅದನ್ನು ನಿಲ್ಲಿಸಲಿಕ್ಕೆಂದು ಪ್ರತಿ ಯೊಬ್ಬ ಸದಸ್ಯ ಯಾವ ಪ್ರಮಾಣದಲ್ಲಿ ಸೇನಾಬಲವನ್ನು ಸಲ್ಲಿಸಬೇಕು ಎಂಬುದನ್ನು ಗೊತ್ತುಪಡಿಸುವದು ಇವೇ ಮೊದಲಾದ ಅಧಿಕಾರಗಳು ಕಾರ್ಯ ಮಂಡಲಕ್ಕಿರುವವು. ಈ ರೀತಿಯಾಗಿ ವರ್ಷಕ್ಕೊಂದು ಬಾರಿಯಾದರೂ ಸೇರುತ್ತಿದ್ದ ಈ ಕಾರ್ಯಮಂಡಲದ ಪ್ರತಿನಿಧಿಗಳ ಸಭೆಯ ಮೂಲಕ ಅಂತ ರ್ರಾಷ್ಟ್ರೀಯ ನಿರ್ಬಂಧವು, ಶಾಂತಿಯ ರಕ್ಷಣೆಯಲ್ಲಿ ಮತ್ತು ಸೌಹಾರ್ದದ ವಿಕಾಸದಲ್ಲಿ ಹೆಚ್ಚಿನ ಫಲವನ್ನು ಪಡೆಯುವಂತಾದುದು ಇದರ ಹಿರಿಯ ಕಾಣಿಕೆಯಾಗಿದೆ.

ಬಂದ ಪ್ರಸಂಗದಿಂದ ಕಡೆಗಾಗಲಿಕ್ಕೆ ತಕ್ಕ ಪರಿಹಾರವನ್ನು ಸೂಚಿಸುವ ಕೆಲಸವು ಕಾರ್ಯಮಂಡಲದ್ದಾಗಿದ್ದರೆ ಅದಕ್ಕೆ ಪ್ರತ್ಯಕ್ಷ ಕಾರ್ಯರೂಪವನ್ನು ಕೊಡುವದು ಪ್ರಧಾನ ಕಾರ್ಯಾಲಯದ ಕರ್ತವ್ಯವಾಗಿದೆ. ಇದು ಹೃದಯವು ಹೇಳಿ, ಮನಸ್ಸು ಒಪ್ಪಿದ ಕೆಲಸವನ್ನು ಮಾಡುವ ದೇಹ. ಅಂತರ್ರಾಷ್ಟ್ರೀಯ ಕ್ಷೇತ್ರದಲ್ಲಿ ಮೊದಲನೆಯ ಸಾರೆ ಕೇಂದ್ರ ಮಂತ್ರಿದಲವೊಂದನ್ನು ಆರಂಭಿಸಿದ ಶ್ರೇಯಸ್ಸು, ರಾಷ್ಟ್ರ ಸಂಗಮದ ಈ ವಿಭಾಗಕ್ಕೆ ಸಲ್ಲಬೇಕಾಗಿದೆ. ಪ್ರತಿ ಯೊಂದು ರಾಷ್ಟ್ರವು ತನ್ನ ಸೇವಕ ಪಡೆಯೊಳಗಿಂದ ನುರಿತ ಮತ್ತು ನೆಚ್ಚಿನ ಕಾರ್ಯವಾಹಕರನ್ನು ಈ ಕಾರ್ಯಾಲಯಕ್ಕೆ ತಮ್ಮ ಕಾಣಿಕೆಯೆಂದು ಸಲ್ಲಿಸಿ ವಿಶ್ವ ಮಂತ್ರಣಾಲಯ ( World Secretariat ) ವನ್ನು ಸ್ಥಾಪಿಸಿದ್ದು ಇದೇ ಸಂದರ್ಭದಲ್ಲಿ. ಎಲ್ಲ ಪತ್ರ ವ್ಯವಹಾರದ, ಸಕಲ ಸಂಧಿ ವಿಗ್ರಹಗಳ ಮತ್ತು ಪ್ರತಿಯೊಂದು ಪ್ರಕಟನೆಯ ಪ್ರತಿಗಳನ್ನು ಪಾಲಿಸುವದು ಈ

ವಿಭಾಗದ ಕರ್ತವ್ಯವೆನಿಸಿದೆ. ಮಹಾಸಭೆಯು ಯೋಜಿಸಿದ, ಕಾರ್ಯ ಮಂಡಲವು ಸೂಚಿಸಿದ, ಕಾರ್ಯವನ್ನು ಈಡೇರಿಸುವದು ಪ್ರಧಾನ ಕಾರ್ಯಾಲಯದ ಪ್ರಮುಖ ಕಾರ್ಯವಾಗಿದ್ದರೂ ಕಾರ್ಯದ ಪರಂಪರೆಯನ್ನು ತಿಳಿಸಿ ತೋರಿಸುವದೂ ಒಂದು ಈ ವಿಭಾಗದ ವಿಶಿಷ್ಟ ಹೊಣೆಯಾಗಿತ್ತು.

ಇತ್ತ ನ್ಯಾಯಮಂದಿರವು ಈ ಎಲ್ಲ ಕೆಲಸಗಳ ಸಾರಾಸಾರ ವಿಚಾರ ಮಾಡಿ ವಿವೇಕವನ್ನು ಹೇಳುವ ಬುದ್ಧಿಯಿದ್ದಂತೆ ರಾಷ್ಟ್ರಸಂಗಮದ ಒಂದು ಸೂಕ್ಷ್ಮವಾದ ಅಂಗವಾಗಿದೆ. ರಾಷ್ಟ್ರ ರಾಷ್ಟ್ರಗಳ ನಡುವೆ ಏಳುವಂತಹ ಅನೇಕ ತೊಡರುಗಳನ್ನು, ಬರುವಂತಹ ಅಸಂಖ್ಯ ದೂರುಗಳನ್ನು ಈ ನ್ಯಾಯ ಮಂದಿರವು ತೂಗಿ ನೋಡಿ, ತನ್ನ ನಿರ್ಣಯವನ್ನು ಕೊಡುವ ಸಾಧನವಾಗಿದೆ. ಬುದ್ಧಿಯ ವಾದವನ್ನು ಮೀರಿ ಮನಸ್ಸಾಗಲಿ, ದೇಹವಾಗಲಿ ಕೆಲವು ಸಾರೆ ಕಾರ್ಯಕ್ಕೆ ಧುಮುಕುವಂತೆ, ಬುದ್ಧಿಗೆ ಸಮ್ಮತವಾಗದ ಎಷ್ಟೋ ವಿಷಯ ಗಳನ್ನು ಮನುಷ್ಯನು ಮಾಡುವಂತೆ, ಅಂತರ್ರಾಷ್ಟ್ರೀಯ ನ್ಯಾಯಮಂದಿರದ ಬಗೆಯಲ್ಲಿಯೂ ಆಗಿದೆ, ಆಗುತ್ತಲಿದೆ. ಇದರರ್ಥ ನ್ಯಾಯವನ್ನೇ ಈ ಸಂಸ್ಥೆಯು ಸಾರುವದಿಲ್ಲ ಎಂದಾಗಲಿ, ಈ ಸಂಸ್ಥೆಯು ಹೇಳುವ ನಿರ್ಣಯವು ಯಾವ ಪಕ್ಷಕ್ಕೂ ಸಮ್ಮತವೆನಿಸುವದಿಲ್ಲ ಎಂದಾಗಲಿ ಯಾರೂ ಅರ್ಥ ಮಾಡಿ ಕೊಳ್ಳುವದಿಲ್ಲ. ಯಾವುದೊಂದು ವಿಷಯದ ಅನುಕೂಲ, ಪ್ರತಿಕೂಲ ಮರ್ಮ ಗಳನ್ನು ತಿಳಿದುಕೊಂಡು, ಅನುವಾದಿ-ಪ್ರತಿವಾದಿಗಳ ವಾದವನ್ನು ಕೇಳಿ ಕೊಂಡು ನ್ಯಾಯವೆನಿಸುವದನ್ನೇ ಈ ಸಂಸ್ಥೆಯೇನೊ ಹೇಳುತ್ತಿದೆ. ಆ ಮೇರೆಗೆ ಅದರ ಕಾರ್ಯರೂಪವನ್ನು ಪಡೆಯುವ ಹೊಣೆಯು ರಾಷ್ಟ್ರಮಂಡ ಲದ ಸೊತ್ತಾಗಿದೆ. ಇಲ್ಲವೆ ನ್ಯಾಯವನ್ನು ಪಡೆದ ಪಕ್ಷದ ತಲೆಯಮೇಲಿದೆ ಯೆಂಬುದು ಸ್ವಯಂಸ್ಪಷ್ಟವಾದ ಮಾತು.

ಇಂತಹ ಅಂಗರಚನೆಯುಳ್ಳ ರಾಷ್ಟ್ರ ಸಂಗಮವು ಎಂಟು ಹತ್ತು ವರ್ಷ ಗಳ ವರೆಗೆ ಅತ್ಯುತ್ತಮವಾದ ಸೇವೆಯನ್ನು ಪ್ರಪಂಚಕ್ಕೆ ಸಲ್ಲಿಸಿತು. ಅದು ನಿಲ್ಲಿಸಿದ ಗ್ರೀಕ, ಬಲ್ಗೇರಿಯದ ಕದನ, ಅದು ಸಾರಿದ ಅಂತರ್ರಾಷ್ಟ್ರೀಯ ಕಲಹಗಳ ನಿರ್ಣಯ, ಅದು ನಿಯಂತ್ರಿಸಿದ ಶಸ್ತ್ರಾಸ್ತ್ರಗಳ ಉತ್ಪಾದನ, ಅದು ಗೈದ ನಿಷ್ಕಾಂಚನ ಜನರ ಸೇವೆ, ಅದು ನಿಯಮಗೊಳಿಸಿದ್ದ ಪ್ರಪಂಚವಾಣಿಜ್ಯ

ಅದು ಜರುಗಿಸಿದ ಎಷ್ಟೋ ರಾಜಕೀಯ ಮತ್ತು ಆರ್ಥಿಕ ಸಮ್ಮೇಲನಗಳು, ಒಂದೇ ಎರಡೇ, ಪ್ರಪಂಚದ ನಾಗರಿಕನಿಗೆ ಸಂಬಂಧಿಸಿದ ಬಹುಶಃ ಪ್ರತಿಯೊಂದು ವಿಷಯದಲ್ಲಿ ಸಂಗವು ಮಾರ್ಗದರ್ಶನ ಮಾಡಿ, ಮೊದಲುತನವನ್ನಾದರೂ ಪಡೆಯಿತು. ಈ ಬಗೆಯ ವಿಶ್ವ ಸಂಸ್ಥೆಯು ಅಂತರರಾಷ್ಟ್ರೀಯ ಸಂಪರ್ಕ—ಸಂಬಂಧಗಳನ್ನು ಸುಗಮಗೊಳಿಸಿ ಅದಕ್ಕೊಂದು ನಿರ್ದಿಷ್ಟ ಸ್ವರೂಪವನ್ನು ಕೊಡುವಷ್ಟರಲ್ಲಿ ಪರಸ್ಪರ ಸಂಶಯ-ಅಸೂಯೆ, ಅಸಹಕಾರಗಳ ಭೂತಗಳು ತಲೆಯೆತ್ತಿದವು. ಹಿರಿಯ ರಾಷ್ಟ್ರಗಳು ತಮ್ಮ ವರ್ಚಸ್ಸನ್ನು ಮತ್ತು ಕೈವಾಡವನ್ನು ಹೆಚ್ಚಿಸಿಕೊಳ್ಳುವ ಹವಣಿಕೆಯಲ್ಲಿದ್ದವು; ಕಿರಿಯ ರಾಷ್ಟ್ರಗಳು ತಮ್ಮ ಮಾತಿಗೆ ಮನ್ನಣೆಯೆ ದೊರೆಯುವದಿಲ್ಲ ಎಂಬ ಭೀತಿ-ಸಂಕೋಚಗಳಿಗೆ ಈಡಾದುವು. ರಾಷ್ಟ್ರ ಸಂಗವುಸ್ಥಾಪಿತವಾದ ಇಪ್ಪತ್ತು ವರ್ಷಗಳಲ್ಲಿ ಅದರ ಬುಡವನ್ನೇ ಕಿತ್ತುವಂತಹ ಎರಡನೆಯ ಪ್ರಪಂಚದ ಮಹಾಯುದ್ಧವು ತನ್ನ ಕರಾಳ ಸ್ವರೂಪವನ್ನು ತೋರಿಸಿತು.

ರಾಷ್ಟ್ರ ಸಂಗಮದಂತಹ ವಿಶ್ವಸಂಸ್ಥೆಯ ರಚನೆ ಮತ್ತು ಸ್ವರೂಪಗಳು ಮಾನವನ ಹಿರಿಯ ಗುರಿಯಾಗಿವೆಯಷ್ಟೇ. ಪ್ರಪಂಚದ ಎಲ್ಲ ರಾಷ್ಟ್ರಗಳಿಗೆ ಒಂದು ಕೇಂದ್ರವನ್ನು ನಿರ್ಮಿಸಿಕೊಂಡು, ಅಧಿಷ್ಠಾನದಲ್ಲಿ ಅದನ್ನು ಇರಿಸಿ ಎಲ್ಲರ ಕ್ಷೇಮವನ್ನು ಸಾಧಿಸಿಕೊಳ್ಳಬೇಕು ಎಂದು ಮಾನವನು ಹೆಣಗುತ್ತಲಿದ್ದಾನೆ. ಈ ವಿಚಾರ ವೃಕ್ಷವು ಬೆಳೆದು ಫಲಕೊಡುವಂತೆ ಸಕಲ ಪ್ರಯತ್ನಗಳನ್ನು ಕೈಕೊಳ್ಳುತ್ತಲಿದ್ದಾನೆ. ಇಂತಹ ಯೋಜನೆಗಳಲ್ಲಿ ಪ್ರಾದೇಶಿಕ ಸಂಘಟನೆಯು ಮಹತ್ವದ್ದಾಗಿದೆ. ಮನುಷ್ಯನು ವಿಶ್ವ ಸಂಘಟನೆಯ ಕನಸು ಕಂಡ ಸಮಯದಲ್ಲಿಯೇ ಭಾಗಭಾಗವಾಗಿ ಅದನ್ನು ನನಸನ್ನಾಗಿಸಬೇಕೆಂದು ಪ್ರಾದೇಶಿಕ ಸಂಘಟನೆಗೆ ಅವನು ಮನಸ್ಸನ್ನು ತಿರುವಿದ್ದಾನೆ.

ಈ ಬಗೆಯ ಚಿಕ್ಕದಾದರೂ ಚೊಕ್ಕಟವೆನಿಸುವ ಯೋಜನೆಗಳಲ್ಲಿ ಅಮೇರಿಕನ್ ರಾಜ್ಯಗಳ ಸಂಘವು ಹಳೆಯದಾಗಿದೆ; ಅನುಕರಣೀಯವಾಗಿದೆ. ಈ ಸಂಸ್ಥೆಯ ಕಲ್ಪನೆಯನ್ನು ಬೋಲಿವಾರ ಎಂಬ ದಕ್ಷಿಣಅಮೇರಿಕೆಯ

ಒಬ್ಬ ದೃಷ್ಟಾರನು ಕಂಡು ೧೭೭೬ ರಿಂದ ತನ್ನ ಸತತ ಪ್ರಯತ್ನವನ್ನು ಆರಂಭಿಸಿದನು. ಅನೇಕ ವರ್ಷಗಳ ವರೆಗೆ ಆತನು ಹೆಣಗಾಡಿ ಕೊನೆಗೆ ಅಂತರ ಅಮೇರಿಕನ್ ಸಮ್ಮೇಳನವನ್ನು ೧೮೨೬ ರಲ್ಲಿ ಜರುಗಿಸಿದನು. ಅಮೇರಿಕೆಯ ಎಲ್ಲ ರಾಜ್ಯಗಳನ್ನು ಒಂದು ಬಂಧುಭಾವದ ಸೂತ್ರದಲ್ಲಿ ಹೆಣೆದು, ಸಂಪತ್ಕಾಲದಲ್ಲಿ ಸಂತೋಷದಿಂದ ಇರಲಿಕ್ಕೂ ಆಪತ್ಕಾಲದಲ್ಲಿ ಪರಸ್ಪರ ಸಹಾಯಕ್ಕೆ ಬರಲಿಕ್ಕೂ ಅನುವಾಗುವಂತಹ ಒಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಆತನ ವಿಚಾರವಿತ್ತು. ಮುಂದೆ ಐಯ್ವತ್ತು ವರ್ಷಗಳ ತರುವಾಯ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಆಸ್ಥೆ ಮತ್ತು ಉತ್ಸಾಹಗಳ ಮೂಲಕ ಯುದ್ಧವನ್ನು, ಅಮೇರಿಕೆಯ ರಾಜ್ಯಗಳಲ್ಲಿಯಾದರೂ ಹೇಗೆ ತಡೆಗಟ್ಟಬೇಕು ಎಂಬ ಒಂದೇ ಒಂದು ಧ್ಯೇಯದಿಂದ ಆರಂಭವಾದ ಒಂದು ಸಭೆಯು ಇಂದು ಅಮೇರಿಕಾ ಖಂಡದ ಬಹುತರ ಎಲ್ಲ ರಾಜ್ಯಗಳನ್ನು ಒಳಗೊಂಡ ಅಮೇರಿಕಾ ಸಂಸ್ಥಾನಗಳ ಸಂಘದಲ್ಲಿ ರೂಪುಗೊಂಡಿದೆ.

ಕ್ರಮವಾಗಿ ಈ ಪ್ರಾದೇಶಿಕ ಸಂಘಟನೆಯು ವಿಶ್ವಸಂಸ್ಥೆಯ ಸ್ವರೂಪ ವನ್ನು ಪಡೆದಿರದಿದ್ದರೂ ಕಾರ್ಯದಲ್ಲಿ ಪ್ರಪಂಚದ ವಿವಿಧ ಸಮಸ್ಯೆಗಳನ್ನು ಪ್ರದೇಶಗಳನ್ನು ಅಳವಡಿಸಿಕೊಂಡಿದೆ. ಇಲ್ಲಿಯ ವರೆಗೆ ಈ ಸಂಘದ ಆಶ್ರಯದಲ್ಲಿ ಅನೇಕ ಸಮ್ಮೇಳನಗಳು ಜರುಗಿರುವವಲ್ಲದೆ ಅದರ ಕಾರ್ಯಾಲಯ ವಾದ ವಿಶಾಲ ಅಮೇರಿಕಾ ಸಂಘವೆಂಬದು ನ್ಯೂಯಾರ್ಕದಲ್ಲಿ ಭವ್ಯವಾದ ಮಂದಿರವೊಂದರಲ್ಲಿ ಕಂಗೊಳಿಸುತ್ತದೆ. ಮೊದಮೊದಲು ತಮ್ಮ ಸದಸ್ಯ ರಾಜ್ಯಗಳ ಸಮಸ್ಯೆಗಳನ್ನೇ ಚರ್ಚಿಸುತ್ತಿದ್ದ ಈ ಸಂಘವು, ವ್ಯಾಪಾರ ವಾಣಿಜ್ಯದ ಸೌಕರ್ಯಗಳು, ವಿದ್ಯಾಭ್ಯಾಸದ ಅನುಕೂಲ, ವಾಹನ-ಸಂಚಾರ ಸಾಧನಗಳ ಒಪ್ಪಂದಗಳು, ಯುದ್ಧ-ಸಹಕಾರಗಳೇ ಮೊದಲಾದ ಪ್ರಮೇಯ ಗಳನ್ನು ಚರ್ಚಿಸುತ್ತ, ಇಂದು ಈ ಸಂಘವು ಇಡಿಯ ಜಗತ್ತಿಗೆ ಸಂಬಂಧಪಟ್ಟ ವಿಷಯಗಳ ಮೇಲೆಯೂ ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಲಿದೆ. ಈ ಸಂಘದಲ್ಲಿರುವ ಒಕ್ಕಟ್ಟು, ಅದು ನಿರಂತರವಾಗಿ ನಡೆಯಿಸಿಕೊಂಡು ಬಂದ ಉಪಯುಕ್ತ ಕಾರ್ಯ, ಮತ್ತು ಅದು ಹಾಕಿಕೊಟ್ಟ ಉದಾತ್ತ ಪರಂಪರೆಗಳ ಮೂಲಕ, ಈ ಸಂಘದ ವಿಚಾರ-ಆಚಾರಗಳು ಪ್ರಪಂಚದಲ್ಲಿ ವಿಶಿಷ್ಟ ಮನ್ನಣೆಯನ್ನು ಪಡೆಯುತ್ತಲಿವೆ.

ಉತ್ತರ ಮತ್ತು ದಕ್ಷಿಣ ಅಮೇರಿಕೆಗಳನ್ನು ಸೇರಿ ಆ ಖಂಡದೊಳಗಿನ ಪ್ರತಿಯೊಂದು ರಾಜ್ಯವು ಒಂದೆಡೆ ಬಂದು ಇಂತಹ ಒಂದು ಸಂಘಟನೆಯಲ್ಲಿ ಸಹಭಾಗಿಯಾಗಬೇಕು ಎಂಬುದು ಈ ಪ್ರಾದೇಶಿಕ ವ್ಯವಸ್ಥೆಯ ಉದ್ದೇಶವಾಗಿದೆಯಷ್ಟೇ! ಯುದ್ಧದಂತಹ ವಿನಾಶಕಾರಕ ವಿಷಯದಿಂದ ಮೊದಲುಗೊಂಡು, ಈ ವಿಚಾರ ಬಿಂದುವು ಇಂದು ಆರ್ಥಿಕ-ಸಾಮಾಜಿಕ ರಾಜಕೀಯ ಮೊದಲಾದ ಸಕಲ ವಿಭಾಗಗಳಲ್ಲಿಯೂ ಆಸಕ್ತಿಯನ್ನು ವಹಿಸಿ, ವ್ಯಾಪಕ ಕಾರ್ಯರಂಗವೇ ಆಗಿ ಪರಿಣಮಿಸಿದೆ. ಅಮೇರಿಕಾ ಖಂಡದ ಪ್ರತಿಯೊಂದು ರಾಜ್ಯವು ತನ್ನ ಪ್ರಮೇಯಗಳನ್ನು ಈ ಸಂಘದೆದುರುಇಟ್ಟು, ಪರಸ್ಪರ ಸ್ನೇಹ, ಪರಿಚಯ ಮತ್ತು ಸಹಕಾರಗಳಿಂದ, ಆ ವಿಷಯಗಳ ಪರಿಹಾರವನ್ನು ಕಂಡು, ಇಡಿಯ ಅಮೇರಿಕಾ ಖಂಡವು ಒಂದುಜೀವ ಎನ್ನುವಂತೆ ಮಾರ್ಪಟ್ಟು ಅದರ ಪ್ರಯತ್ನದ ಫಲವಾಗಿಯೆ ವಿಶ್ವಸಂಸ್ಥೆಯ ಸ್ವರೂಪ ದರ್ಶನವನ್ನು ಪಡೆಯಬೇಕು ಎಂಬುದು ಈ ಸಂಘದ ಯೋಜಕರ ದಿವ್ಯ ಸ್ವಪ್ನವಾಗಿದೆ. ಬಿಂದುವಿನಲ್ಲಿ ಸಿಂಧುವಿನ್ನು ಕಾಣಬಯಸುವ, ಕಿರಣದಲ್ಲಿ ಸೂರ್ಯನನ್ನು ಪಡೆಯಲೆಳಸುವ ಈ ಎತ್ತುಗಡೆಯು ಶ್ಲಾಘನೀಯವೆ ಸೈ. ಇಂತಹ ಪ್ರಾದೇಶಿಕ ಸಂಘಟನೆಗಳು ಜಯಪ್ರದವಾದ ಉದಾಹರಣೆಗಳು ನೋಡಲಿಕ್ಕೆ ಸಿಕ್ಕರೆ, ಪ್ರಾಪಂಚಿಕ ಪ್ರಯೋಗಗಳಿಗೆ ಗೆಲುವು ಕಟ್ಟಿಟ್ಟದ್ದೇ ಎಂಬ ಆತ್ಮ ವಿಶ್ವಾಸ ಮತ್ತು ಆಶಾವಾದಗಳು ಹುಟ್ಟುವದರಲ್ಲಿ ಆಶ್ಚರ್ಯವಿಲ್ಲ. ಅಮೇರಿಕಾ ರಾಜ್ಯಗಳ ಈ ಸಂಘವು ಮೊದಲನೆಯ ವಿಶ್ವಸಂಸ್ಥೆಯು ಹುಟ್ಟುವದಕ್ಕಿಂತ ಮೊದಲು ಅಸ್ತಿತ್ವದಲ್ಲಿ ಬಂದ, ರಾಷ್ಟ್ರಸಂಗವುವು ನಿಷ್ಕ್ರಿಯವಾಗಿ ಅಳಿದರೂ ಕೂಡ ಇನ್ನೂ ಇದು ಸಕ್ರಿಯವಾಗಿರುವದರಿಂದ ಅಂತರ್ರಾಷ್ಟ್ರೀಯ ಸಂಬಂಧಕ್ಕೆ ಮೂರ್ತಸ್ವರೂಪವನ್ನು ಮತ್ತೆ ಕೊಡಬಹುದು ಎಂಬ ಕಲ್ಪನೆಗೆ ಚಾಲನೆಯು ಇದರಿಂದ ಖಂಡಿತವಾಗಿಯೂ ದೊರೆಯುವದು.

ಇಂದು ಬ್ರಿಟಿಶ್ ರಾಷ್ಟ್ರಮಂಡಲದ ಸದಸ್ಯ ಆಗಿದ್ದ ಕಾನಡಾ ದೇಶವೊಂದನ್ನು ಬಿಟ್ಟು, ಅಮೇರಿಕಾ ಖಂಡದ ಮಿಕ್ಕ ಎಲ್ಲ ೨೧ ರಾಜ್ಯಗಳು ಈ ಸಂಘದ ಸದ್ಯದ ಸದಸ್ಯ ದೇಶಗಳಾಗಿವೆ. ಆಗಾಗ್ಗೆ ಅವುಗಳ ಸಮ್ಮೇಳನಗಳು ಮತ್ತು ವಿಶಿಷ್ಟ ಸಭೆಗಳು ಜರುಗುತ್ತಿದ್ದು ಈ ಸಂಘಟನೆಯ ಆಡಳಿತವು

ಯೋಜಕಸಮಿತಿ, ಕಾರ್ಯಾಲಯ ಮತ್ತು ಇತರ ವಿಭಾಗಗಳನ್ನೊಳಗೊಂಡಿದೆ. ಅದರಲ್ಲಿಯೂ ವಿಶೇಷವಾಗಿ ಅಖಿಲ ಅಮೇರಿಕಾ ನೈರ್ಮಲ್ಯ ಸಮಿತಿ, ಅಮೇರಿಕಾ ಅಂಚೆಯ ವ್ಯವಸ್ಥೆ, ಶಿಶುರಕ್ಷಣ ವಿಭಾಗ, ಚರಿತ್ರ ಮತ್ತು ಭೂಗೋಲಸಮಿತಿ, ಅಂತರ ಅಮೇರಿಕನ್ ರೇಡಿಯೋ ವಿಭಾಗ, ಅಮೇರಿಕನ್ ಕೃಷಿಶಾಸ್ತ್ರ ಮಂಡಲಗಳೇ ಮೊದಲಾದ ಕಾರ್ಯಾಂಗಗಳು ಅಮೇರಿಕಾ ಖಂಡದ ವಿವಿಧ ರಾಜ್ಯಗಳಲ್ಲಿ ಏಕರೂಪತೆಯೂ, ಸಮಾಜಪರಿಚಯವೂ, ಸಮಾನ ಜೀವನವೂ ತಲೆದೋರುವಂತೆ ಹೆಣಗುವ ಭಾಗಗಳಾಗಿವೆ. ಈ ಬಗೆಯಾಗಿ ನಡೆದ ಕಾರ್ಯಕ್ಕೆ ವೆಚ್ಚವನ್ನು ಪೂರೈಸುವದಕ್ಕಾಗಿ ಅಮೇರಿಕನ್ ರಾಜ್ಯಗಳ ಸಂಘವು ಕೈಕೊಂಡ ಯೋಜನೆಯು ಕೂಡ ಸ್ತುತ್ಯವೂ, ಸಾಧುವೂ ಆಗಿದೆ. ಪ್ರತಿಯೊಂದು ರಾಷ್ಟ್ರವು ತನ್ನ ಶಕ್ತಿಗೆ ಮತ್ತು ಪರಿಸ್ಥಿತಿಗೆ ಅನುಸರಿಸಿ ಸಂಯುಕ್ತ ವ್ಯಯದ ಪಾಲನ್ನು ಸಲ್ಲಿಸಬೇಕು ಎಂಬ ವ್ಯವಸ್ಥೆಯನ್ನು ಅಂಗೀಕರಿಸಿ ದುಡ್ಡಿನ ನಿಮಿತ್ತವಾಗಿ ಮೇಲು-ಕೀಳು ಎಂಬ ಭಾವನೆಯಾಗಲಿ, ಅದು ಕೈಕೊಂಡ ಯೋಜನೆಗೆ ಆತಂಕವಾಗಲಿ, ಉಂಟಾಗದಂತೆ ಮಾಡಿ ಕೊಂಡಿರುವದು ಈ ಸಂಘದ ವೈಶಿಷ್ಟ್ಯವಾಗಿದೆ.

ಚಿಕ್ಕ ಪ್ರಮಾಣದಲ್ಲಿ ಮಾನವನ ಉಚ್ಚ ಆದರ್ಶವನ್ನು ಕೈಗೂಡಿಸಲಿಕ್ಕೆ ಪ್ರಯತ್ನಿಸುತ್ತಿರುವದು ಈ ಪ್ರಾದೇಶಿಕ ಸಂಘಟನೆಯಾದರೆ, ಅಷ್ಟೇ ಉತ್ಸಾಹ ದಿಂದ ಮತ್ತು ಉತ್ಕಟೇಚ್ಛೆಯಿಂದ ಅದೇ ಕಾರ್ಯಭೂಮಿಯಲ್ಲಿ ದುಡಿಯುತ್ತಿ-ರುವ ಇನ್ನೊಂದು ಸಂಸ್ಥೆಯೆಂದರೆ **ಅರಬ ರಾಷ್ಟ್ರಮಂಡಲ.** ಮೊದಲಿನದು ಪ್ರಾದೇಶಿಕ-ಅಥವಾ ಪ್ರಪಂಚದ ಒಂದು ಖಂಡದೊಳಗಿನ ಎಲ್ಲ ರಾಷ್ಟ್ರಗಳನ್ನು ಒಂದು ಸಂವಿಧಾನದಲ್ಲಿ ಸೇರಿಸಿ ಪರಸ್ಪರ ಸಂಬಂಧದ ಸಂಗತಿಗಳನ್ನು ಯೋಚಿಸಿ, ಒಟ್ಟು ಹಿತವನ್ನು ಹೆಚ್ಚಿಸಿಕೊಳ್ಳುವ ವ್ಯವಸ್ಥೆಯೆನಿಸಿದರೆ, ಇದು ಒಂದು ಮತವನ್ನು ಧರಿಸಿದ ಎಲ್ಲ ರಾಷ್ಟ್ರಗಳ ಅನೇಕ ಮಣಿಗಳನ್ನು ಒಂದೇ ದಾರದಲ್ಲಿ ಪವಣಿಸಿ, ಮುಕ್ತಿಮಂತ್ರವನ್ನು ಜಪಿಸುವಂತೆ ಯೋಜಿಸಿಕೊಂಡ ಸಂಸ್ಥೆಯಾಗಿದೆ.

ಶತಮಾನಗಳಿಂದ ತಮ್ಮ ವೈಭವ, ತಮ್ಮ ವರ್ಚಸ್ಸು ಮತ್ತು ತಮ್ಮ ಚಕ್ರಾಧಿಪತ್ಯವನ್ನು ಹೆಮ್ಮೆಯಿಂದ ಕಾಪಾಡಿಕೊಂಡ ಅರಬ ರಾಷ್ಟ್ರಗಳು ಕ್ರಮ

ವಾಗಿ ಧರ್ಮಗುರುಗಳದರ್ಪ, ಮತ್ತು ಪ್ರಜರ ದುರ್ಲಕ್ಷ್ಯಗಳಿಂದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಅವನತಿಯನ್ನು ಅನು- ಭವಿಸಬೇಕಾಯಿತು. ಮಧ್ಯಯುಗದ ಅರಬ ರಾಷ್ಟ್ರಗಳೆಂದರೆ ಯುರೋ ಪದ ಅನಾರೋಗ್ಯ ಕೇಂದ್ರ ಎಂಬುದು ನಾಣ್ಣುಡಿಯ ಸ್ವರೂಪವನ್ನು ತಳೆ ದಿತ್ತು. ಇಂತಹ ಸನ್ನಿವೇಶದ ದುರ್ಧರ ಪರಿಣಾಮಗಳನ್ನು ಸಹಿಸುತ್ತಿದ್ದ ಈ ರಾಷ್ಟ್ರಗಳು ಪ್ರಪಂಚಮಹಾಯುದ್ಧದ ಎರಡು ಸತ್ರಗಳ ಅಂತರದಲ್ಲಿ ತಮ್ಮ ರಾಷ್ಟ್ರಗಳ ಸ್ವಾತಂತ್ರ್ಯ, ಸಮಾಜಗಳ ಪುನರ್ರಚನೆ ಮತ್ತು ಆರ್ಥಿಕ ಉನ್ನತಿ ಗಳಿಗಾಗಿ ಕಣ್ದೆರೆಯತೊಡಗಿದವು. ಇಂತಹ ಹೊಸಯುಗವನ್ನು ಅವರು ಪ್ರತ್ಯಕ್ಷರೂಪದಲ್ಲಿ ಪಡೆಯಲಿಕ್ಕೆ ಆಗ್ಗೆ ಇನ್ನೂ ಅಸ್ತಿತ್ವದಲ್ಲಿದ್ದ ಫ್ರೆಂಚ್ ಮತ್ತು ಬ್ರಿಟಿಶ್ ಸಾಮ್ರಾಜ್ಯಗಳ ವಿರೋಧ, ಮತ್ತು ಅದೇ, ಸಂಘಟಿತರೂಪ ದಲ್ಲಿ ಎಚ್ಚತ್ತು ಮುನ್ನುಗ್ಗುತ್ತಿದ್ದ ಯುಹೂದಿಗಳ ಅಂಕುಶಗಳೇ ಮುಖ್ಯ ಕಾರಣ ಎಂದೆನ್ನಬಹುದು. ಆದರೂ ಈ ಎಲ್ಲ ಆತಂಕಗಳನ್ನು ಲೆಕ್ಕಿಸದೆ ಏಳೆಂಟು ಅರಬ ರಾಷ್ಟ್ರಗಳು ಸೇರಿ ೧೯೪೫ರಲ್ಲಿ ಒಂದೇ ಕಾರ್ಯಕ್ರಮ, ಒಂದೇ ಆರ್ಥಿಕ ಸಮಸ್ಯೆ, ಮತ್ತು ಒಂದೇ ಬಗೆಯ ಭಾವನಾತ್ಮಕ ಪ್ರೇರಣೆಯಿಂದ ಸ್ಫೂರ್ತಿಗೊಂಡು ಅರಬ ರಾಷ್ಟ್ರಸಂಘಕ್ಕೆ ಜನ್ಮವಿತ್ತವು.

ಈ ಅರಬ ರಾಷ್ಟ್ರಮಂಡಲದ ಮುಖ್ಯ ಕಾರ್ಯಭಾರವನ್ನು ಒಂದು ಸಮಿತಿಯು ನೋಡಿಕೊಳ್ಳುತ್ತದೆ; ಒಂದು ವರ್ಷದಲ್ಲಿ ಎರಡು ಬಾರಿಯಾದರೂ ಸೇರುವ ಈ ಸಮಿತಿಯ ಸಭೆಯು ಮಂಡಲದ ವಾಣಿಜ್ಯ-ವಿದ್ಯಾಭ್ಯಾಸ- ಉದ್ಯೋಗ-ವಾಹನ ಸೌಕರ್ಯ- ಪರಿವಹನ ವ್ಯವಸ್ಥೆ-ಸಾರ್ವಜನಿಕ ಆರೋಗ್ಯ ಸಾಂಸ್ಕೃತಿಕ ಪ್ರಶ್ನೆಗಳು ಇವೇ ಮೊದಲಾದ ಸಮರುಚಿಯ ವಿಷಯಗಳನ್ನು ಯೋಚಿಸಿ ಕಾರ್ಯರತ ಆಗುತ್ತದೆ. ಆದರೂ ಸಾಮಾಜಿಕ ಶೈಥಿಲ್ಯ, ಆರ್ಥಿಕ ಅಸಹಾಯತೆ ಮತ್ತು ರಾಜಕೀಯ ಅನೈಕ್ಯವಿದ್ದ ಈ ಗುಂಪಿನ ಸದಸ್ಯರು ಸಾಕಷ್ಟು ಪೂರ್ಣದೃಷ್ಟಿಯಿಂದ ಮಂಡಲದ ಸೇವೆಗೆ ಬೆಂಬಲವನ್ನು ನೀಡು ತ್ತಿಲ್ಲ ಎಂಬ ಮಾತು ಸ್ವಯಂ ಸ್ಪಷ್ಟವಾದುದಾಗಿದೆ. ಪರಸ್ಪರ ಸಂದೇಹ ಮತ್ತು ಮತ್ಸರಗಳು ಇನ್ನೂ ತಾಂಡವವಾಡುತ್ತಿದ್ದ ಕಾರಣ ಅರಬ ರಾಷ್ಟ್ರ ಮಂಡಲದ ಪ್ರಯತ್ನಕ್ಕೆ ತಕ್ಕ ಯಶಸ್ಸು ದೊರೆಯುವದಕ್ಕೆ ಕಿಂಚಿತ್ಕಾಲಾವ

ಕಾಶ ಒದಗಬಹುದು ಎಂದೇ ಹೇಳಬೇಕಾಗುವದು. ಅಂತಹ ಈ ಸಂಘಟನೆಯು ಪ್ರಪಂಚ ಸಂಸ್ಥೆಗೆ ಯಾವ ಬಗೆಯ ಆದರ್ಶವಾಗಲಿ, ಪ್ರಾಥಮಿಕ ಪ್ರಯತ್ನವೆಂಬ ಸ್ಫೂರ್ತಿಯಾಗರವಾಗಲಿ ಆಗುವ ಬಗೆ ಹೇಗೆ? ಆದರೂ ವಿಶ್ವ ಸಂಸ್ಥೆಯು ಇಟ್ಟುಕೊಳ್ಳಬಹುದಾದ ಧ್ಯೇಯ ಧೋರಣೆಗಳನ್ನೇ ಈ ಸಂಘಟನೆಯೂ ಇಟ್ಟುಕೊಂಡು, ತನ್ನ ಶಕ್ತಿ ಮತ್ತು ಪ್ರೇರಣೆಗಳಿಗೆ ಅನುಗುಣವಾಗಿ ಪ್ರಯತ್ನಿಸುತ್ತಿರುವದೇ, ಆದರ್ಶವನ್ನು ಸಾಧಿಸಲಿಕ್ಕೆ ಸಹಾಯಕವೆಂದೇ ತಿಳಿಯಬೇಕು.

ಮಾನವ ಕುಲವು ಒಂದು, ಅವನ ಆಶೆ-ಆಕಾಂಕ್ಷೆಗಳು ಸಮಾನವಾದುವು ಎಂಬ ಉದಾತ್ತವಾದ ಧ್ಯೇಯದ ಮರ್ಮವನ್ನು ತಿಳಿದುಕೊಂಡು, ಪ್ರತ್ಯಕ್ಷದಲ್ಲಿ ಆ ಬಗೆಯ ಪರಿಸ್ಥಿತಿಯನ್ನು ನಿರ್ಮಿಸಬೇಕೆಂಬ ಹಟದಿಂದ, ಅಂತರ್ರಾಷ್ಟ್ರೀಯ ಸಂಸ್ಥೆಗಳನ್ನು ಕಟ್ಟಬೇಕು. ಅದನ್ನು ಯಶಸ್ವಿಯಾಗಿ ರೂಪಿಸಿ, ಅದರ ಮೂಲಕ ವಿಶ್ವದಲ್ಲಿ ಶಾಂತಿ-ಸೌಹಾರ್ದಗಳು ನೆಲಸುವಂತೆ ಮಾಡಬೇಕು ಎಂದು ಮಾನವನು ತವಕಪಡುತ್ತಿದ್ದಾನೆ. ಈ ಗುರಿಯತ್ತ ಕ್ರಮಿಸಲಿಕ್ಕೆ ದಾರಿಯನ್ನು ಹಾಕಿಕೊಟ್ಟ ಕೆಲವು ಸಂಸ್ಥೆಗಳ ವಿಷಯವಾಗಿ ಈ ವರೆಗೆ ಯೋಚಿಸಿಯಾಯಿತಷ್ಟೆ! ಈ ಶತಮಾನದ ಪ್ರಚಂಡಪ್ರಯೋಗವು ಆರಂಭವಾದುದು ತೀರ ಇತ್ತೀಚೆಗೆ. ಅದರ ವಿಷಯವಾಗಿ ವಿವರಗಳನ್ನು ತಿಳಿಯುವ ಮೊದಲು ಅಂತಹದೇ ಆದರೂ ಮಿತವಾದ ಫಲವನ್ನು ಅಪೇಕ್ಷಿಸುತ್ತ ಅಸ್ತಿತ್ವದಲ್ಲಿ ಬಂದ ಇನ್ನೂ ಕೆಲವು ಸಂಸ್ಥೆಗಳ ಬಗೆಯಲ್ಲಿ ನಾಲ್ಕು ಮಾತುಗಳನ್ನು ತಿಳಿಯಬಹುದು. ಅಮೇರಿಕೆಯ ಮತ್ತು ಅರಬ ರಾಷ್ಟ್ರಗಳ ಸಂಘಟನೆಯಾದಂತೆ ಯುರೋಪದಲ್ಲಿಯೂ ಅಂತಹದೊಂದು ವ್ಯವಸ್ಥೆಯನ್ನು ಮಾಡಿಕೊಳ್ಳಲಿಕ್ಕೆ ಈಗ ಕೆಲವು ವರ್ಷಗಳಿಂದ ಕಾರ್ಯವು ನಡೆದಿದೆ. ಮಿಕ್ಕ ಪ್ರದೇಶಗಳಂತೆ ಇಲ್ಲಿ ರಾಜಕೀಯ ಇಲ್ಲವೆ ಧಾರ್ಮಿಕ ಐಕ್ಯವು ಮೂಲ ಸ್ಫೂರ್ತಿಯಾಗಿರದೆ ಆರ್ಥಿಕ ಪುನರುಜ್ಜೀವನವು ಹಿರಿಯ ಸಮಸ್ಯೆಯಾಗಿದ್ದ ಕಾರಣ ಯುರೋಪಿಯನ್ ರಾಷ್ಟ್ರಗಳ ಸಂಘವು ಅಂತಹ ಕಾರ್ಯಕ್ರಮವನ್ನು ಕೈಕೊಂಡು ಸಂಘಟಿತವಾಗಿದೆ.

ಆದರೆ ಬರಬರುತ್ತ ಕೇವಲ ಆರ್ಥಿಕ ವಿಷಯವಷ್ಟೇ ಅವುಗಳ ಮರ್ಯಾದಿತ ಕ್ಷೇತ್ರವಾಗಿರದೆ ಸಮಾಜ ರಚನೆ ಮತ್ತು ಸಂರಕ್ಷಣ ಪ್ರಮೇಯಗಳತ್ತ

ಕೂಡ ಯುರೋಪದ ರಾಷ್ಟ್ರಗಳು ಗಮನವನ್ನು ಕೊಡುತ್ತಿರುವವು. ಅಂತಹ ಪ್ರಯತ್ನಗಳ ಫಲವಾಗಿಯೆ ಅನೇಕ ವಾಣಿಜ್ಯ ಸಂಧಿಗಳು ಮತ್ತು ಯುರೋಪ ಸಂರಕ್ಷಕಸಂಘದಂತಹ ಸಂಸ್ಥೆಗಳು ಅಸ್ತಿತ್ವದಲ್ಲಿ ಬಂದಿವೆ. ಉತ್ತರಅಟ್ಲಾಂಟಿಕ ಸಂಧಿ ಸಂಘಟನೆಯ (N.A.T.O.) ಮಾದರಿಯಲ್ಲಿ ಇತ್ತೀಚೆಗೆ ದಕ್ಷಿಣ ಏಶಿಯದ ರಾಷ್ಟ್ರಗಳಿಗಾಗಿ ಒಂದು ವ್ಯವಸ್ಥೆಯನ್ನು, ಮಧ್ಯ ಯುರೋಪಿಯನ್ ರಾಷ್ಟ್ರಗಳಿಗೆ ಒಂದು ಸಂಘಟನೆಯನ್ನು ಸ್ಥಾಪಿಸಬೇಕೆಂಬ ಸೂಚನೆ, ಕಾರ್ಯ ರಚನೆಗಳು ನಡೆದಿವೆ. ಇತ್ತ ಎಚ್ಚತ್ತ ಏಶಿಯವು ತನ್ನದೇ ಆದ ಸ್ವತಂತ್ರವಾದ ಸಂಘಟನೆಯನ್ನು ಮಾಡಿಕೊಂಡು, ಪ್ರಪಂಚದೊಳಗಿನ ಉಪನಿವೇಶನ ವಾದವನ್ನು ವಸಾಹತು ನಿರ್ಮೂಲಗೊಳಿಸಿ, ತನ್ನ ಸಮಸ್ಯೆಗಳ ಚರ್ಚೆಯಲ್ಲಿ ಮತ್ತು ಪರಿಹಾರದಲ್ಲಿ ತಾವೇ ಹೊಣೆಗಾರರಾಗಬೇಕು ಎಂಬ ಅಭಿಪ್ರಾಯವೂ ಒಡಮೂಡುತ್ತಿರುವದು, ವಿಶ್ವಶಾಂತಿಯ ಇನ್ನೊಂದು ಸಾಧ್ಯ, ಎಂದು ಹೇಳಬಹುದು.



# ೨. ವಿಧಾನದ ಬಂಧನ

ಪ್ರಪಂಚದ ಬಹು ಭಾಗವನ್ನು ಆವರಿಸಿಕೊಂಡು, ವಿಪರೀತ ನಷ್ಟಕ್ಕೆ ಕಾರಣಗಳಾದ ಮಹಾಯುದ್ಧಗಳು ಈ ಪ್ರಮಾಣದಲ್ಲಿ ಜರುಗಿದುದು ಎರಡು ಬಾರಿ– ಕೇವಲ ಅಯ್ವತ್ತು ವರ್ಷಗಳ ಅಲ್ಪ ಅವಧಿಯಲ್ಲಿ! ಈ ಶತಮಾನಕ್ಕಿಂತ ಮೊದಲು ಮಹಾಯುದ್ಧಗಳು ಜರುಗುತ್ತಿದ್ದರೂ ಅವು ಕೇವಲ ಒಂದೆರಡು ಖಂಡಗಳಿಗೆ ಮತ್ತು ಹತ್ತೆಂಟು ರಾಷ್ಟ್ರಗಳಿಗೆ ಸೀಮಿತವಾಗಿರುತ್ತಿದ್ದವು. ಆದರೆ ಈ ಶತಕದ ಯುದ್ಧಗಳು ಇಡಿಯ ವಿಶ್ವವನ್ನೇ ತಮ್ಮ ಆಹುತಿಯಲ್ಲಿ ಅರ್ಪಿಸಿಕೊಂಡು, ಪಂಚಖಂಡಗಳನ್ನು ಪಂಚಾಗ್ನಿಯಲ್ಲಿ ತೂರಿ ಪಂಚತ್ವಕ್ಕೆ ಸಮೀಪವೆನಿಸುವಂತಹ ಪರಿಸ್ಥಿತಿಯನ್ನು ನಿರ್ಮಿಸಿದವು. ಯುದ್ಧವು ಇನ್ನು ಜರುಗದಂತೆ ಜಗತ್ತಿನ ರಾಜಕೀಯ ರಚನೆಯನ್ನು ಕೈಕೊಳ್ಳಬೇಕು, ಎಂಬ ಉದ್ದೇಶದಿಂದ ಸ್ಥಾಪಿಸಿಕೊಂಡ ರಾಷ್ಟ್ರಸಂಗಮವು ಯಾರ ಸ್ಮರಣೆಯಲ್ಲಿಯೂ ಉಳಿಯದಂತೆ, ನಿರುಪದ್ರವ ಮತ್ತು ನಿಷ್ಕ್ರಿಯ ಸ್ಥಿತಿಯನ್ನು ಹೊಂದಿತು. ಮೊದಲನೆಯ ಮಹಾಯುದ್ಧದ ಸಮಾಪ್ತಿಯಾಗುತ್ತಲೇ ಇನ್ನುಮುಂದೆ ಯುದ್ಧವಾಗದಂತೆ ಸುರಕ್ಷಿತವಾಗಿಯೂ, ಸುಸಂಸ್ಕೃತವಾಗಿಯೂ ಮಾನವ ಜೀವಿಗಳು ಬಾಳುವಂತೆ ಒಂದು ಅಂತರ್ರಾಷ್ಟ್ರೀಯ ಸಂಘಟನೆಯನ್ನು ಅಸ್ತಿತ್ವದಲ್ಲಿ ತಂದುದಾಯಿತು. ಆದರೆ ಹತ್ತೆಂಟು ವರ್ಷಗಳಲ್ಲಿ, ಯಾವ ಹಿಮ್ಮೆಟ್ಟಿದ, ನಿರುತ್ಸಾಹಗೊಂಡ ಮತ್ತು ಪರಾಜಿತವಾದ ರಾಷ್ಟ್ರಗಳ ಕೈವಾರಿಯಾಗಿ, ಈ ಸಂಘಟನೆಯು ತನ್ನ ವರ್ಚಸ್ಸನ್ನು ಬೀರಿ ತನ್ನ ಸೇವಾ ಪರಿಮಿತಿಯನ್ನು ಬೆಳೆಯಿಸಿಕೊಂಡಿತೋ, ಅವೇ ಜರ್ಮನಿ ಮತ್ತು ಇಟಲಿ ದೇಶಗಳು ಮತ್ತೊಂದು ಅಂತಹ ಮಹಾ ಜ್ವಾಲೆಯನ್ನು ಹೊತ್ತಿಸಲು ಕಾರಣವಾದವು. ಆ ಜ್ವಾಲೆಯು ಜಗತ್ತಿನಲ್ಲೆಲ್ಲ ಹಬ್ಬುವ ಭೀತಿಯುಂಟಾಯಿತು. ಕ್ಷುಲ್ಲಕವಾದ ಒಂದು ನೆವದಿಂದ ಈ ಅಗ್ನಿಯು ಹೊತ್ತಿ ಪ್ರಪಂಚದ ಬಹುಶಃ ಎಲ್ಲ ಪ್ರಮುಖ ರಾಷ್ಟ್ರಗಳನ್ನು ತನ್ನ ಬಾಹುಗಳಲ್ಲಿ ಸೇರಿಸಿಕೊಂಡಿತು. ಅಷ್ಟೇ ಅಲ್ಲದೆ ವಿಶ್ವಕಲ್ಯಾಣದ ದೃಷ್ಟಿಯಿಂದ ಯುದ್ಧದ ದುಷ್ಪರಿಣಾಮಗಳನ್ನು ತಪ್ಪಿಸಿಕೊಂಡು,

ಶಾಂತಿಯು ನೆಲೆಸಬೇಕು ಎಂಬ ಉದ್ದೇಶದಿಂದ ಸ್ಥಾಪಿತವಾದ ರಾಷ್ಟ್ರಸಂಗಮವನ್ನು ಕೂಡ ಆ ಮಹಾಯಜ್ಞದಲ್ಲಿ ಎಳೆದುಕೊಂಡಿತು.

ಆದರೆ ಮನುಷ್ಯನು ತನ್ನ ವಿನಾಶವನ್ನು ಮಾಡಿಕೊಳ್ಳಲಿಕ್ಕೆ ತಾನೇ ಕಾರಣನಾದಂತೆ ತನ್ನ ಪುನರುಜ್ಜೀವನಕ್ಕೂ ಆತನೇ ಬಾಧ್ಯಸ್ಥ ಮತ್ತು ಸಮರ್ಥನಲ್ಲವೇ? ಅದೇ ಉರಿಯುವ ಕುಂಡದೊಳಗಿಂದ, ಅದೇ ಅಗ್ನಿಯ ಬೂದಿಯೊಳಗಿಂದ, ಅದೇ ವಿನಾಶದ ಗೂಡಿನೊಳಗಿಂದ ಮನುಷ್ಯನು ಮತ್ತೊಂದು ಪ್ರಯೋಗದ ಕನಸನ್ನು ಕಂಡನು. ರೂಪವನ್ನು ರಚಿಸಿದನು. ಅದೇ **ಸಂಯುಕ್ತ ರಾಷ್ಟ್ರ ಸಂಘದ ಸಂಘಟನೆ.** ಮನುಷ್ಯನು ನೈಸರ್ಗಿಕವಾಗಿ ಶಾಂತಿಪ್ರಿಯನೋ, ಕಲಹಕುತೂಹಲಿಯೊ ಎಂಬುದನ್ನು ಖಚಿತವಾಗಿ ಹೇಳುವದು ಕಠಿಣವಾದರೂ, ಒಮ್ಮೆ ಕದನದ ಕಹಿ ಸವಿಗಳನ್ನು ಅನುಭವಿಸಿದ ಮಾನವನು ಶಾಂತಿಗಾಗಿ ಹಲುಬುವನು ಮತ್ತು ಕಾರಣಾಂತರದಿಂದ ನ್ಯಾಯ ದೊರೆಯದ ಇಲ್ಲವೆ ವಿಧಾಯಕ ಕಾರ್ಯಕ್ಕೆ ಅನುವು ದೊರೆಯದ ಸಮಯದಲ್ಲಿ ಆತನು ಹಿಂಸಾ ಪ್ರವೃತ್ತಿಗೆ ಮೊರೆ ಹೋಗುವನು ಎಂಬುದು ಇತಿಹಾಸವು ಹಾಕಿಕೊಟ್ಟ ಒಂದು ಕಾಲಚಕ್ರವಾಗಿರುವದು. ವಿಶ್ವದಲ್ಲಿ ಚಿರಶಾಂತಿಯನ್ನು ಸ್ನೇಹ-ಸೌಹಾರ್ದಗಳನ್ನು ಸ್ಥಾಪಿಸಬೇಕು ಎಂಬ ದೃಷ್ಟಿಯಿಂದ ಆರಂಭವಾದ ವಿಶ್ವಪ್ರಯತ್ನವು ರಾಷ್ಟ್ರಸಂಗಮದ ರೂಪವನ್ನು ತಳೆದು, ಅಲ್ಪಯಶಸ್ಸನ್ನು ಪಡೆಯುತ್ತಿದ್ದಾಗ್ಗೆ ಕೆಲವು ಅನ್ಯ ರಾಷ್ಟ್ರಗಳ ಹೇಡಿತನದ ಪರಿಣಾಮವಾಗಿ ಆ ಕೆಲಸವನ್ನು ಮುಂದುವರಿಸುವದು ದುಸ್ತರವಾಯಿತು. ಆದರೇನು? ಕೆಲವರು ವಿರುದ್ಧರಾಗಿದ್ದು ಒಂದು ಕಾರ್ಯಕ್ಕೆ ಭಂಗ ಬಂದರೆ ಪ್ರಪಂಚದಲ್ಲಿ ಆ ಕೆಲಸವನ್ನು ಮುಂದುವರಿಸುವ ಬಹುಸಂಖ್ಯರು ಕೇವಲ ಹತವೀರ್ಯರೆ! ಅಷ್ಟು ಬರಡಾಗಿರುವದೆ ಈ ನಮ್ಮ ವಸುಂಧರೆ? ಇತ್ತ ಆ ಹೀನ ಪ್ರಕೃತಿಯನ್ನು ಸದೆಬಡೆಯಲಿಕ್ಕೆಂದು ಸಮರ್ಥರಾದ ಹಲವರು ಸನ್ನಾಹವನ್ನು ಮಾಡುತ್ತಿದ್ದಂತೆಯೇ ಅತ್ತ ಶಿಷ್ಟ ಗುಣಗಳ ಸ್ಮರಣೆಯನ್ನು ವಿಶ್ವಕ್ಕೆ ಮಾಡಿಕೊಡುವ ವಿಶ್ವಕುಟುಂಬಿಗಳನೇಕರು ಆಗಲೇ ಕಾರ್ಯಪ್ರವೃತ್ತ ಆಗಿದ್ದರೆ ಆಶ್ಚರ್ಯವೇನು?

ಈ ಬಗೆಯಿಂದ ತೆರೆಯಾಚೆಯಲ್ಲಿ ನಡೆಯುತ್ತಿರುವ ಈ ಆಂದೋಲನಕ್ಕೆ ಬೆಂಬಲವು ಸಶಕ್ತರಿಂದ ದೊರೆಯುವದು ಉಭಯ ಪಕ್ಷಗಳಿಗೂ ಅಷ್ಟೆ

ಪ್ರಿಯವಾದ ಸಂಗತಿಯಾಗಿದ್ದಿತು. ಜಾಣತನದಿಂದ ಬೆಳಗುವ ಜನರು ತಮ್ಮ ಬೆಳಕನ್ನು ಬೇರೆಡೆಗಳಲ್ಲಿ ಬೀರಬೇಕಾದರೆ, ಅದಕ್ಕೆ ಸಮಾಜದ ಅನ್ಯ ಸದಸ್ಯರ ಸಹಕಾರ-ಸಹಾಯ-ಸಹಾನುಭೂತಿಗಳು ಬೇಕಷ್ಟೆ! ಅದರಂತೆಯೆ ಪ್ರಬಲರು ತಮ್ಮ ಕಾರ್ಯದಲ್ಲಿ ಜಯಪ್ರದರಾಗಬೇಕಾದರೆ ಅದಕ್ಕೆ ಮೊದಲು ಜ್ಞಾನಿಗಳ ಸಮ್ಮತಿ ಮತ್ತು ಆ ಮೇಲೆ ಬಹು ಜನರ ಒಪ್ಪಿಗೆಯನ್ನು ಪಡೆಯಬೇಕಾಗುವದು. ಈ ಪ್ರಪಂಚದ ಎರಡನೆಯ ಮಹಾಯುದ್ಧವು ಆರಂಭವಾಗಿ, ಅದು ಘನ ಪ್ರಮಾಣವನ್ನು ಹೊಂದಿದಂತೆ, ಮಿತ್ರರಾಷ್ಟ್ರಗಳಿಗೆ ಸಾಮಗ್ರಿ-ಸಹಾಯಗಳನ್ನು ಒದಗಿಸುವದಕ್ಕಿಂತ ಸಮ್ಮತಿಯನ್ನು ದೊರಕಿಸುವದು ಹೆಚ್ಚು ಪರಿಶ್ರಮವನ್ನು ಬೇಡಿತು. ಜನತೆಯು ಯುದ್ಧದ ಪ್ರಗತಿಗೆ, ಮತ್ತು ಅದರಲ್ಲಿ ಜಯವನ್ನು ಪಡೆಯುವ ಕಾರ್ಯಕ್ಕೆ, ತಮ್ಮ ಸಹಾಯ ಹಸ್ತವನ್ನು ನೀಡುವ ಮೊದಲು ಆ ಯುದ್ಧವು ಯಾವ ಉದ್ದೇಶದಿಂದ ಎಸಗುತ್ತಿರುವದು ಎಂಬುದನ್ನು ಸ್ಪಷ್ಟಗೊಳಿಸುವಂತೆ ಅಭಿಪ್ರಾಯವನ್ನು ವ್ಯಕ್ತಗೊಳಿಸಿತು. ಯುದ್ಧದ ಕ್ರಮದಲ್ಲಿಯ ಯುದ್ಧದ ಉದ್ದೇಶ ಮತ್ತು ಗೆಲುವಿನ ಉಪಯೋಗಗಳ ಚರ್ಚೆಯೂ ಸಾಕಷ್ಟು ಆಗಿ ಜನತೆಯಲ್ಲಿ ಪ್ರಚಾರ ಪಡೆಯಿತು.

ಅಂತೆಯೆ ಇತ್ತ ಯುದ್ಧವು ಸಾಗಿದಂತೆ ಯುದ್ಧದ ಧ್ಯೇಯವನ್ನು ಸ್ಪಷ್ಟಗೊಳಿಸಲಿಕ್ಕೆಂದು ಕೆಲವು ಸಭೆ-ಸಮ್ಮೇಳನಗಳು ಜರುಗಿದವು. ರಣರಂಗದಲ್ಲಿ ಹೆಣಗಳು ಉರುಳುತ್ತಿದ್ದಂತೆ ಸಮಾಜರಂಗದಲ್ಲಿ ಜೀವದಿಂದಿರುವವರ ಭವಿತವ್ಯದ ವಿಮರ್ಶೆ ಮತ್ತು ವಿಚಾರಗಳು ಜರುಗುತ್ತಿರುವದು ಮನುಷ್ಯನ ಸ್ವಭಾವ ವೈವಿಧ್ಯವನ್ನು ತೋರಿಸುತ್ತದೆ. ಇಂತಹ ಒಂದೆರಡು ಸಭೆ-ಸಮ್ಮೇಳನಗಳಲ್ಲಿ ಮಾಸ್ಕೋ ಸಮ್ಮೇಳನ ಮೊದಲಿನದಾದರೆ ಸಾನ್ ಫ್ರಾನ್ಸಿಸ್ಕೋದ ಸಮ್ಮೇಳನವು ಸದ್ಯದ ಸಂದರ್ಭದಲ್ಲಿ ಕೊನೆಯದು ಎಂದು ಹೇಳಬಹುದು. ಮಾಸ್ಕೋದ ಸಭೆಯಲ್ಲಿ ಯುದ್ಧಕಾಲದಿಂದ ಶಾಂತಿಕಾಲದ ಸಂಕ್ರಮಣವು ಕ್ರಮಬದ್ಧವಾಗಿಯೂ ಶೀಘ್ರವಾಗಿಯೂ ಜರುಗಬೇಕು. ಮತ್ತು ಯುದ್ಧಾನಂತರ ಶಾಂತಿಯ ಸ್ಥಾಪನೆಯಾಗಿ ಅದೊಂದು ಚಿರಶಾಂತಿಯಾಗುವಂತೆ ನೋಡಿಕೊಳ್ಳುವಕ್ಕೆಂದು ಒಂದು ಅಂತರ್ರಾಷ್ಟ್ರೀಯ ಸಂಸ್ಥೆಯನ್ನು ತೆರೆಯಬೇಕು ಎಂಬ ಆಶಯದ ನಿರ್ಣಯಗಳಾದವು. ೧೯೪೪ರ ಅಕ್ಟೋ

## ಸಂಯುಕ್ತರಾಷ್ಟ್ರಸಂಘದ ಪ್ರಧಾನ ಕಾರ್ಯದರ್ಶಿಗಳು



ಡಾಗ ಹ್ಯಾಮರ್ಸ್ಕೋಲ್ಡ

ಇವರು ೧೯೦೫ರಲ್ಲಿ ಸ್ವೀಡನ ದೇಶದಲ್ಲಿ ಜನಿಸಿದರು. ಉಪಸಲಾ ವಿಶ್ವವಿದ್ಯಾಲಯದ ನ್ಯಾಯಶಾಸ್ತ್ರ ಹಾಗು ಅರ್ಥಶಾಸ್ತ್ರದ ಪದವೀಧರರು. ೧೯೩೩ ಸ್ಟಾಕಹೋಮು ವಿಶ್ವವಿದ್ಯಾಲಯದಲ್ಲಿ ಅರ್ಥಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ೧೯೩೬ ರಿಂದ ೪೫ ರ ವರೆಗೆ ಸ್ವೀಡಿಸ್ ಸರಕಾರದ ಹಣಕಾಸಿನ ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ಸ್ವೀಡನ್ನಿನ ರಾಷ್ಟ್ರೀಯ ಬ್ಯಾಂಕಿನ ಕಾರ್ಯಾಧ್ಯಕ್ಷ, ಯುರೋಪದ ಆರ್ಥಿಕ ಸಹಕಾರ ಸಮಿತಿಯ ಉಪಾಧ್ಯಕ್ಷರಿದ್ದರು. ೧೯೫೦ ರಲ್ಲಿ ಸ್ವದೇಶ ಸರ್ಕಾರದ ಮಂತ್ರಿಗಳಾದರು. ಇವರು ೧೯೫೩ ರಲ್ಲಿ ಸಂಯುಕ್ತ ರಾಷ್ಟ್ರಸಂಘದ ಪ್ರಧಾನ ಕಾರ್ಯದರ್ಶಿಗಳಾದರು.

(ಯು. ರಾ. ಸಂ. ಕೃಪೆಯಿಂದ)

ಬರ ತಿಂಗಳಲ್ಲಿ ಜರುಗಿದ ಈ ಸಭೆಯಲ್ಲಿ ಪ್ರಪಂಚದ ಪ್ರಮುಖ ರಾಷ್ಟ್ರಗಳಾದ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳು, ಬ್ರಿಟನ್, ರಶಿಯ, ಮತ್ತು ಚೀನಗಳು ಭಾಗವಹಿಸಿದ್ದವು. ಮುಂದೆ ೧೯೪೪ರಲ್ಲಿ ಇವೇ ಮಾತುಗಳಿಗೆ ಒಂದು ನಿರ್ದಿಷ್ಟ ಸ್ವರೂಪವನ್ನು ಕೊಡುವದಕ್ಕೆಂದು ಅವೇ ರಾಷ್ಟ್ರಗಳ ಪ್ರತಿನಿಧಿಗಳು ಮತ್ತೆ ಸಮಾವಿಷ್ಟರಾಗಿ ಸಂಯುಕ್ತ ರಾಷ್ಟ್ರ ಸಂಘವನ್ನು ಸ್ಥಾಪಿಸಲಿಕ್ಕೆಂದು ಕೆಲವು ವಿವರಗಳನ್ನು ಚರ್ಚಿಸಿದರು. ಆ ಸಭೆ ಮತ್ತು ೧೯೪೫ರಲ್ಲಿ ಮುಂದೆ ಯಾಲ್ಟಾದಲ್ಲಿ ಸೇರಿದ ಸಭೆ ಇವೆರಡರಲ್ಲಿ ವ್ಯಾಪಕವಾದ ಸಂವಿಧಾನ ಮತ್ತು ಅದರ ಅನೇಕ ಅಂಶಗಳ ವಿಚಾರ ವಿನಿಮಯವಾಗಿ ೧೯೪೫ರಲ್ಲಿ ಜರುಗಿದ ಸಾನ್ ಫ್ರಾನ್ಸಿಸ್ಕೋ ಸಮ್ಮೇಳನದ ಸಲುವಾಗಿ ನಿಶ್ಚಿತ ಕಾರ್ಯಕ್ರಮವನ್ನು ಗೊತ್ತುಪಡಿಸಿದವು.

ರಾಷ್ಟ್ರಸಂಗಮವು ಮೊದಲನೆಯ ಮಹಾಯುದ್ಧದ ಫಲವಾಗಿ ರೂಪಗೊಂಡಿತು; ಎರಡನೆಯ ಮಹಾಯುದ್ಧದ ಆಹುತಿಯಾಗಿ ಕಣ್ಮರೆಯಾಯಿತು. ಆದರೆ ಸಂಯುಕ್ತ ರಾಷ್ಟ್ರಸಂಘವು ಆ ರೀತಿಯಾಗಿ ಜನನ ಹೊಂದಬಾರದು ಮತ್ತು ಅದರಂತೆಯೆ ಕೊನೆಗೊಳ್ಳಬಾರದು ಎಂಬುದು ಈ ಸಂಘಟನೆಯ ಯೋಜಕರು ವಹಿಸಿಕೊಂಡ ಮುಂಜಾಗ್ರತೆಯಾಗಿತ್ತು. ಅಂತೆಯೆ ರಾಷ್ಟ್ರಸಂಗಮದ ಸಂವಿಧಾನವು ವರ್ಸಾಯಿ ಒಪ್ಪಂದದ ಒಂದು ಭಾಗವೆಂದು ಅಂಗೀಕೃತವಾದರೆ, ಸಂಯುಕ್ತ ರಾಷ್ಟ್ರಸಂಘದ ಸಂವಿಧಾನವು ಯುದ್ಧ ಸಮಾಪ್ತಿ ಮತ್ತು ಅದರ ಸಂಧಿಗಳಿಗೆ ಸಂಬಂಧಿಸಿದಂತೆ ಸಿದ್ಧವಾಯಿತು. ಇದೊಂದು ದೂರಾಲೋಚನೆಯೆಂದು ತೋರುವಂತೆಯೆ ದೃಢವಾದ ಸಂಪ್ರದಾಯವೂ ಇದ್ದುದು ಒಪ್ಪಬೇಕಾದ ಮಾತು.

ಈ ಬಗೆಯ ನೀತಿಯನ್ನು ಸ್ವೀಕರಿಸಲಿಕ್ಕೆ ಉಚಿತ ಕಾರಣಗಳೂ ಇರುತ್ತವೆ. ಮೊದಲನೆಯದಾಗಿ ಮಹಾಯುದ್ಧದಲ್ಲಿ ಧುಮುಕಿ, ಅದರಲ್ಲಿ ಎಂತಹ ತ್ಯಾಗದಿಂದಾದರೂ ಗೆಲುವನ್ನು ಪಡೆದೇ ಬಿಡಬೇಕು ಎಂಬ ಹಟವನ್ನು ತಳೆದ ಹಿರಿಯ ರಾಷ್ಟ್ರಗಳ ಪ್ರಮುಖರು ತಾವು ಕೈಕೊಂಡ ಆ ಮಹತ್ಕಾರ್ಯವು ಯಾರ ಪ್ರೀತಿಗಾಗಿ ಎಂಬುದನ್ನು ಸ್ಪಷ್ಟಗೊಳಿಸುವದು ಆವಶ್ಯಕವಾಗಿತ್ತು. ಅಂತೆಯೆ ೧೯೪೧ರಲ್ಲಿ ಪ್ರಕಟಗೊಳಿಸಿದ ಅಟ್ಲಾಂಟಿಕ

ಅಧಿಪತ್ರಕದಲ್ಲಿ, ಮತ್ತು ಆ ಮೇಲೆ ೧೯೪೨ರಲ್ಲಿ ವಾಸಿಂಗಟನ್ನಿನಿಂದ ಸಾರಿದ ಸಂಯುಕ್ತ ರಾಷ್ಟ್ರಗಳ ಘೋಷಣೆಯಲ್ಲಿ, ಮಹಾಯುದ್ಧದಲ್ಲಿ ಭಾಗವಹಿಸಿದ ಉದ್ದೇಶಗಳೇನು ಎಂಬುದನ್ನು ಹೇಳಲಾಗಿತ್ತು. ಈ ಹೇಳಿಕೆಗೆ ಒಂದು ಸ್ಥಿರರೂಪವನ್ನು ಆದಷ್ಟು ಶೀಘ್ರವಾಗಿ ಒದಗಿಸಿಕೊಡಬೇಕಾಗಿತ್ತು. ಎರಡನೆ ಯದಾಗಿ ಮಹಾಯುದ್ಧಕ್ಕಾಗಿ ಸಂಭವಿಸಿದ ಪ್ರಮುಖರಾಷ್ಟ್ರಗಳ ಸ್ನೇಹವು ಯುದ್ಧವು ಮುಗಿಯುವ ವರೆಗೆ ಅಥವಾ ಯುದ್ಧವು ಸಮಾಪ್ತಿಯಾದ ನಂತರ ಉಳಿಯಲಾರದು, ಎಂಬ ಸಂಶಯವು ಈ ಸಭೆಯ ಸಂಯೋಜಕರ ಮನಸ್ಸಿನಲ್ಲಿ ಅಡಗಿಕೊಂಡಿತ್ತು. ಎಂಬುದೂ ತಿಳಿದ ಮಾತಾಗಿದೆ. ಇನ್ನು ಕೊನೆಯದಾಗಿ ಈ ನೂತನ ಸಂಘಟನೆಗೆ ಕೊಡಬಹುದಾದ ಸ್ವತಂತ್ರ ಮತ್ತು ವಿಶಿಷ್ಟ ಸ್ವರೂಪವು ಯುದ್ಧಮುಗಿಯುವ ಮುಂಚೆಯೆ ಸ್ವೀಕೃತವಾಗಬೇಕಿತ್ತು. ಕಳೆದ ಮಹಾಯುದ್ಧದ ನಂತರ ಮಾಡಿಕೊಂಡ ವರ್ಸಾಯಿ ಒಪ್ಪಂದವನ್ನು ಮಿತ್ರರಾಷ್ಟ್ರಗಳು ಸ್ವೀಕರಿಸಿದ ಸಂಕೇತವು ಆ ಆ ರಾಷ್ಟ್ರಗಳ ಸರಕಾರಗಳು ವ್ಯಕ್ತಗೊಳಿಸಿದ ಒಪ್ಪಿಗೆಯೆ ಆಗಿದ್ದಿತಷ್ಟೆ! ಈ ಬಗೆಯ ಒಪ್ಪಿಗೆಯನ್ನು ಪಡೆಯುವ ಪ್ರಯತ್ನದಲ್ಲಿ ಆಗ್ಗೆ ಅಮೇರಿಕೆಯ ಅಧ್ಯಕ್ಷರಾಗಿದ್ದ ವಿಲ್ಸನ್ನರಿಗೆ ಅತ್ಯಂತ ಅಪಮಾನಕಾರಕ ಪ್ರಸಂಗವನ್ನು ಎದುರಿಸಬೇಕಾಯಿತು. ಅಂತಹ ವಿಧಿಯು ತಮಗೂ ಕಾದಿರಬಾರದು ಎಂಬ ಸದಿಚ್ಛೆಯು ರೂಜವೆಲ್ಟರ ಮನಸ್ಸಿನಲ್ಲಿದ್ದು ಈ ಸಂಸ್ಥೆಯನ್ನು ಸ್ಥಾಪಿಸಲಿಕ್ಕೆ ಇಂತಹ ವೇಗದ ಮಿತಿಯನ್ನು ನಿರ್ಣಯಿಸಲಿಕ್ಕೆ ಕಾರಣವಾಯಿತು. ಹೀಗೆನ್ನುವದಕ್ಕಿಂತ ಯುದ್ಧಕ್ಕೆ ಸಂಬಂಧಿಸಿದ ಸಂಧಿಯನ್ನು, ಯುದ್ಧಕ್ಕೆ ವಿರುದ್ಧವಾಗಿರುವ ಮತ್ತು ಯುದ್ಧವಾಗದಂತೆ ಭದ್ರ ಶಾಂತಿಯನ್ನು ನೆಲಸಲಿಕ್ಕೆ ಹೆಣಗಬೇಕಾದ ಈ ಸಂಘಟನೆಯನ್ನು ಮೂಲದಿಂದಲೇ ಬೇರ್ಪಡಿಸಬೇಕೆಂಬುದೇ ನಿಜವಾಗಿಯೂ ನಿಯೋಜಕರ ಆತುರತೆಯಾಗಿತ್ತು.

ಇಂತು ಅಪೂರ್ವವಾದ ಈ ಬಗೆಯ ಸಂಘಟನೆಯನ್ನು ರೂಪಿಸಬೇಕು ಎಂಬ ದೃಷ್ಟಿಯಿಂದ ಹೊರಟು ಅದರ ಆದರ್ಶ ಮತ್ತು ಉದ್ದೇಶಗಳನ್ನು ನಿರ್ಧರಿಸುವಷ್ಟರಲ್ಲಿಯೆ ರಾಷ್ಟ್ರ ರಾಷ್ಟ್ರಗಳಲ್ಲಿ ಭಿನ್ನಾಭಿಪ್ರಾಯಗಳುಂಟಾದುದು ಗಮನಾರ್ಹ ವಿಷಯವಾಗಿದೆ. ಉದಾತ್ತವಾದ ಮಾನವೀಯ ಧ್ಯೇಯಗಳನ್ನಿಟ್ಟುಕೊಂಡ ಸಂಗಡವು ಪ್ರಭಾವಿಯಾಗಿದ್ದರೂ ಚಿಕ್ಕದಾಗಿರು

ವದು ಸಾಮಾನ್ಯವಾದ ವಿಷಯ. ಅಂತೆಯೇ ಅಂತಹ ಗುರಿಯು ವಾಂಛನೀಯವಾದುದು ಎಂಬ ಮಾತನ್ನು ಒಪ್ಪುತ್ತಿದ್ದರೂ ಅದನ್ನು ಸಾಧಿಸ ಬೇಕಾದರೆ, ಅದರಲ್ಲಿ ತಮ್ಮ ಕೈವಾಡವಿರಬೇಕು. ಮತ್ತು ಅದರ ಸಾಧನೆಯ ನಂತರ ಸಹಿತ ತಮ್ಮ ಪ್ರಭುತ್ವವು ಸ್ಥಿರವಾಗಿರಬೇಕು ಎಂಬ ಆಶೆಯುಳ್ಳವರೇ ಹೆಚ್ಚಾಗಿರುತ್ತಾರೆ. ಅಂತೆಯೇ ಮಾಸ್ಕೋದಲ್ಲಿ ಶಾಂತಿ ಮತ್ತು ಭದ್ರತೆ ಗಳನ್ನು ಸ್ಥಾಪಿಸುವದಕ್ಕೆ ಅಂತಹ ಸನ್ನಿವೇಶವನ್ನು ಚಿರವಾಗಿ ಉಳಿಸಿಕೊಂಡು ಹೋಗುವಂತಹ ಒಂದು ಸಂಸ್ಥೆಯನ್ನು ರಚಿಸಲಿಕ್ಕೂ ಒಪ್ಪಿದ ರಾಷ್ಟ್ರಗಳು ಆ ಸಂಸ್ಥೆಯು ಪ್ರತಿಯೊಂದು ರಾಷ್ಟ್ರದ ಶಾಂತಿಪ್ರಿಯತೆಯನ್ನು, ಸಾರ್ವಭೌಮ ಸಮತೆಯನ್ನು ಸಾರಿದ್ದವು; ಸ್ವೀಕರಿಸಿದ್ದವು. ಆದರೂ ಕೂಡ ಸಂಯುಕ್ತ ರಾಷ್ಟ್ರ ಸಂಘದ ಅಂಗರಚನೆ ಮತ್ತು ನಿರ್ಬಂಧನೆಗಳಿಗಾಗಿ ಸೇರಿದ ಡಂಬರ್ಟನ್ ಓಕ್ಸ ಸಭೆಯಲ್ಲಿ ಮತ್ತು ಯಾಲ್ಟಾ ಸಮ್ಮೇಲನದಲ್ಲಿ ಹಿರಿಯ ರಾಷ್ಟ್ರಗಳಲ್ಲಿ ಕೆಲವು ಅನ್ಯ, ಅಲ್ಪಶಕ್ತಿಯ, ಮತ್ತು ಅಪ್ರಬುದ್ಧ ರಾಷ್ಟ್ರಗಳ ಪರಿಸ್ಥಿತಿ, ಕಾಣಿಕೆ ಮತ್ತು ಸೂಚನೆಗಳನ್ನು ಸಂಪೂರ್ಣವಾಗಿ ಕಡೆಗಣಿಸಿದುವು.

ಉನ್ನತವಾದ ಉದ್ದೇಶಗಳನ್ನು ಸಾಧಿಸಬೇಕಾದರೆ ಯಾವ ಒಗೆಯ ಧೋರಣೆಯಿಂದ ಸಂವಿಧಾನವನ್ನು ಗೊತ್ತುಪಡಿಸಬೇಕು ಮತ್ತು ವಿಶ್ವ ಕಲ್ಯಾಣದಂತಹ ಸಂಘಟನೆಯು ಯಶಸ್ವಿಯಾಗಿ ಜರುಗಬೇಕಾದರೆ ಪ್ರತಿ ಯೊಂದು ರಾಷ್ಟ್ರವು, ಅದು ಬಲಿಷ್ಠವಾದುದಿರಲಿ, ಬಲಹೀನವಾದುದಿರಲಿ ಹೇಗೆ ಅನನ್ಯ ಭಕ್ತಿಯಿಂದ ಮತ್ತು ಅನುಪಮತ್ಯಾಗದಿಂದ ಅದರ ಸಂವರ್ಧನೆ ಯಲ್ಲಿ ಪಾಲುಗಾರವಾಗಬೇಕು ಎಂಬುದನ್ನು ಸಂಯುಕ್ತ ರಾಷ್ಟ್ರಸಂಘದಂತಹ ಮೊಟ್ಟ ಮೊದಲಿನ ವಿಶ್ವಸಂಸ್ಥೆಯ ಸಂಯೋಜಕರು ಅರಿತಿರುವದು ಅವಶ್ಯ ವಿತ್ತು. ಆದರೆ ಅವರಲ್ಲಿ ಅನುಭವದ ಹಾಗೂ ಪರಂಪರೆಯ ಅಭಾವ ವಿದ್ದಿತು. ಅಂತೆಯೇ ಒಂದು ಬಗೆಯ ಉತ್ಸಾಹದಿಂದ ಆ ಕೆಲಸವನ್ನು ಅವರು ಸಾಗಿಸಿದ್ದರೂ, ಅದರಲ್ಲಿ ತಮ್ಮ ಶಕ್ತಿಯ ಅಭಿಮಾನವು ಒಂದಂಶವಲ್ಲಿ ಎದ್ದು ಕಾಣುತ್ತಿತ್ತು. ತಮ್ಮ ಹೊಣೆಯ ಅಪೂರ್ಣ ಜ್ಞಾನವು ಹತ್ತು ಪಟ್ಟಿನಲ್ಲಿ ಗೋಚರವಾಗುತ್ತಿತ್ತು. ಆದರೂ ಅಂತಹ ಸನ್ನಿವೇಶದಲ್ಲಿ ಕೂಡ ಕೆಲವು ಚಿಕ್ಕ ರಾಷ್ಟ್ರಗಳು ಪ್ರತಿಕ್ರಿಯೆಯನ್ನು ತೋರಿದವು. ಅಮರವೂ, ಅಪೂರ್ವವೂ ಎನಿಸುವಂತಹ ಧ್ಯೇಯವನ್ನು ಸಾಧಿಸಲಿಕ್ಕೆಂದು ಸಂಯುಕ್ತ

ರಾಷ್ಟ್ರಸಂಘದ ಸಂವಿಧಾನವು ವಿಚಾರಕ್ಕೆ ಪ್ರಾರಂಭಿಸಿತು. ಹಳೆಯ ವಿಚಾರಗಳನ್ನೆ ಹೊಸರೂಪದಲ್ಲಿ ಇಂದು ನಾವು ಕಾಣುತ್ತಿರುವ ದಿಲ್ಲವೆ ? ಹಳೆಯ ಕೊಳವೆಯಲ್ಲಿ ಹೊಸ ನೀರು ಹರಿಯುವದಿಲ್ಲವೆ? ಇಂದಿನ ವಿಶ್ವವು ಹಿಂದಿನ ಸ್ಮರಣಶಿಲೆಯನ್ನೆ ಆಧಾರವನ್ನಾಗಿರಿಸಿಕೊಂಡಿರುತ್ತದೆ. ನಾವು ಪ್ರತಿಯೊಂದು ವಿಷಯದಲ್ಲಿಯೂ ಹಳೆಯ ಭಾವ, ಹೊಸ ವೇಷ ಎಂದು ಹೇಳುತ್ತಿರುವದನ್ನು ಕೇಳುತ್ತಿದ್ದೇವೆ. ಅದೇ ಮೇರೆಗೆ ವಿಶ್ವಸಂಘಟನೆಯ ವಿಚಾರವಾಗಿಯಾದರೂ ನಾವು ಹಿಂದಿನ ಅಡಿಗಲ್ಲಿನ ಮೇಲೆಯೆ ಇಂದಿನ ಮಂದಿರವನ್ನು ಕಟ್ಟಿಕೊಂಡಿದ್ದರೆ ಆಶ್ಚರ್ಯವೇನು ? ಅಂದು ಯುದ್ಧ ಮುಗಿಯುವಷ್ಟರಲ್ಲಿ ರಾಷ್ಟ್ರಸಂಗಮದ ಸಂವಿಧಾನವನ್ನು ವಿವರವಿವರವಾಗಿ ಚರ್ಚಿಸಿ ಸಿದ್ಧಗೊಳಿಸಿ, ಯುದ್ಧದ ಒಡಂಬಡಿಕೆಯ ಒಂದು ಭಾಗವನ್ನೆ ಮನುಷ್ಯನು ತನ್ನ ಆದರ್ಶದ ಭವನಕ್ಕೆ ತಳಪಾಯವೆಂದು ಸ್ವೀಕರಿಸಿದ್ದರೆ ಇಂದು ಆತನಿಗೆ ಒಂದು ಅನುಭವದ ಪರಿಣಾಮವಾಗಿ, ಯುದ್ಧವು ಮುಗಿಯುವದಕ್ಕಿಂತ ಮುಂಚೆಯೆ ಸಂಯುಕ್ತ ರಾಷ್ಟ್ರಸಂಘದ ಸಂಘಟನೆಯನ್ನು ಕೂಲಂಕಷವಾಗಿ ಯೋಚಿಸಿ ಸಾನ್ ಫ್ರಾನ್ಸಿಸ್ಕೋದ ಸಮ್ಮೇಲನದಲ್ಲಿ ಅದರ ಅಧಿಲೇಖನವನ್ನು ಸ್ವೀಕರಿಸಬೇಕೆಂದು ಗೊತ್ತುಪಡಿಸಿದನು.

ಆ ಸಮ್ಮೇಳನವೆಂದರೆ ಪ್ರಪಂಚದಲ್ಲಿಯೆ ಅದ್ವಿತೀಯವಾದ ಉತ್ಸವವಾಗಿತ್ತು. ಅತ್ತ ಯುದ್ಧವಿನ್ನು ನಡೆದಿದ್ದರೂ, ಕೊನೆಯ ಪಾದದಲ್ಲಿದ್ದ ಅದರ ಅಂತಿಮ ದರ್ಶನವು ಕಾಣುವದರಲ್ಲಿತ್ತು. ಐವತ್ತು ರಾಷ್ಟ್ರಗಳ ಸರಕಾರಗಳು ತಮ್ಮ ಪ್ರತಿನಿಧಿಗಳನ್ನು ಕಳಿಸಿದ ಆ ಸಭೆಯು ನೋಡುವವರ ಕಣ್ಣಿಗೆ ಹಿರಿಯ ಹಬ್ಬವಾಗಿತ್ತು. ಇನ್ನೂರ ಐವತ್ತಕ್ಕಿಂತ ಹೆಚ್ಚು ಜನ ಸಭಾಸದರು, ಪ್ರಪಂಚದ ಅತ್ಯಂತ ಆಕರ್ಷಕವಾದ ಮತ್ತು ಉಪಯುಕ್ತವಾದ ಒಂದು ಕಾರ್ಯದಲ್ಲಿ ಆಸಕ್ತರಾಗಿ ಅಲ್ಲಿ ಸಮಾವೇಶ ಹೊಂದಿದ್ದರು. ವಿಶ್ವಶಾಂತಿ, ವಿಶ್ವಕಲ್ಯಾಣಗಳೇ ಅವರ ಧ್ರುವತಾರೆಯಾಗಿದ್ದುವು. ೧೪೦೦ ಜನ ಸಹಾಯಕರಿಂದ ನೆರವನ್ನು ಪಡೆದು, ಅವರು ಅತ್ಯಂತ ಪ್ರಭಾವಿಯಾದ ಫಲಪ್ರದವಾದ ಅಧಿಲೇಖನವನ್ನು ಸಿದ್ಧಗೊಳಿಸಲಿಕ್ಕೆ ಅಣಿಯಾಗಿದ್ದರು. ಸಾವಿರಾರು ಮಂದಿ ಅನ್ಯ ಕಾರ್ಯವಾಹಕರು, ಎಷ್ಟೋ ಜನ ವೃತ್ತಪತ್ರ ಪ್ರತಿನಿಧಿಗಳು, ಚಿತ್ರ

ಗ್ರಾಹಕರು, ಅಸಂಖ್ಯ ಜನ ಪ್ರೇಕ್ಷಕರು ಮೊದಲಾದವರಿಂದ ಕಂಗೊಳಿಸು ತ್ತಿದ್ದ ಸಾನ್ ಫ್ರಾನ್ಸಿಸ್ಕೊ ಸುವರ್ಣ ನಗರವು ಒಂದು ರಮಣೀಯ ದೃಶ್ಯ ವಾಗಿತ್ತು.

ಈ ಅಧಿಲೇಖನದ ವಿವರಗಳ ಚರ್ಚೆಯು ತಕ್ಕ ಪ್ರಮಾಣದಲ್ಲಿ ಈ ಮುಂಚೆಯೆ ಜರುಗಿದ್ದರೂ, ಪ್ರತಿನಿಧಿಗಳು ಸತತವಾಗಿ ಎರಡು ತಿಂಗಳ ಕಾಲ ದೀರ್ಘವೂ ಕ್ರಮಪೂರ್ಣವೂ ಆದ ವಿಚಾರವಿನಿಮಯದ ನಂತರ ತನ್ನ ಸ್ವರೂಪದರ್ಶನವನ್ನು ದಯಪಾಲಿಸಿತು. ಹಿಂದಿನ ರಾಷ್ಟ್ರಸಂಗಮ ಮತ್ತು ಇಂದಿನ ಸಂಯುಕ್ತರಾಷ್ಟ್ರಸಂಘ ಇವೆರಡೂ ಅಂತರ್‌ರಾಷ್ಟ್ರೀಯ ಸಂಸ್ಥೆಗಳಿಗೆ ಸಂಬಂಧಿಸಿದ ಏಕಮೇವ ದ್ವಿತೀಯ ಸ್ನೇಹಸೂತ್ರವೇನೋ ಎಂಬಂತೆ ಆಫ್ರಿಕದ ದಂಡನಾಯಕ ಸ್ಮಟ್ಸ್ ಅವರು ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಅವರು ಅಧಿಲೇಖನದ ಕರಡು ಸಿದ್ಧವಾದ ಕೂಡಲೆ ತಮ್ಮ ಅಧಿಕಾರಯುಕ್ತ ವಾಣಿಯಿಂದ 'ಅಂದು ತೀರ ಪರಿಪೂರ್ಣವಾದ ಒಂದು ಸಿದ್ಧಿಯನ್ನು ತಾವು ಸಾಧಿಸಿದ್ದರೂ, ಸಾಕಷ್ಟು ಸಮಾಧಾನಕಾರಕ ಮತ್ತು ವಾಸ್ತವಿಕ ಎನ್ನಿಸುವ ಸಂಸ್ಥೆಯೊಂದನ್ನು ರಚಿಸುವದರಲ್ಲಿ ತಾವು ಸಹಭಾಗಿಗಳಾಗಿದ್ದುದು, ತಮ್ಮ ಸುದೈವವೆಂದು ಸಾರಿದರು.' ಈ ಸಂಸ್ಥೆಯು ಯುದ್ಧವನ್ನು ಮೆಟ್ಟಿ ನಿಲ್ಲಿಸುವ ಸಾಮರ್ಥ್ಯವುಳ್ಳದ್ದಾಗಿ, ಶಾಂತಿಯನ್ನು ದೃಢವಾಗಿ ಸ್ಥಾಪಿಸುವ ಸಹನೆಯುಳ್ಳದ್ದಾಗಿದೆ, ಎಂಬ ಅವರ ಮಾತುಗಳು ಅಂದಿನ ಸಭಿಕರಿಗೆ ಮತ್ತು ನಾಗರಿಕರಿಗೆ ಚಿರಸ್ಮರಣೀಯವೆನ್ನಿಸಿದವು.

ಅಂತು ನೂರಾರು ವರ್ಷಗಳಿಂದ, ಸಾವಿರಾರು ಸಂವತ್ಸರಗಳಿಂದ ಮನುಷ್ಯನು ಕಾಣುತ್ತಿದ್ದ ಕನಸಿಗೆ ಇನ್ನೊಂದು ಮೂರ್ತರೂಪವು ಒಡ ಮೂಡಿತು. ಹಿಂದಿನ ಶತಮಾನದಲ್ಲಿ ಕೇವಲ ಸ್ನೇಹಸಂಘ, ಸಂಧಿಯಸಹ ಕಾರ, ಮತ್ತು ಶಾಸನಿಕ ಸಂಘಟನೆಯ ಹಿತಗಳನ್ನು ದಾಟಿ ಈ ಶತಮಾನದ ಮೊದಲ ಪಾದದಲ್ಲಿ ಮಾಡಿಕೊಂಡ ಒಪ್ಪಿಗೆಯ ಸಂಸ್ಥೆಯ ನಂತರ, ಈಗ ಇನ್ನೊಮ್ಮೆ ಮಾನವನು ಇಡಿಯ ಪ್ರಪಂಚದ ಸಂಯುಕ್ತ ಪ್ರಯತ್ನದ ಫಲ ವಾಗಿ ಕೇವಲ ಯುದ್ಧವನ್ನು ತಡೆಗಟ್ಟುವದಷ್ಟೇ ಅಲ್ಲದೆ ಚಿರಶಾಂತಿಯನ್ನು ಸ್ಥಿರಗೊಳಿಸುವ ಶಕ್ತಿಯುಳ್ಳ ಒಂದು ಸಂಘವನ್ನು ಪ್ರತ್ಯಕ್ಷ ಕಂಡು ಪುಲುಕಿತ

ನಾದರೆ ಆಶ್ಚರ್ಯವೇನು ? ಈ ಎರಡು ಸಂಸ್ಥೆಗಳು ಮನುಷ್ಯನ ಅತ್ಯುಚ್ಚ ಆಕಾಂಕ್ಷೆಗಳ ನಿಜರೂಪಗಳಾಗಿರುತ್ತವೆ. ವಿಶ್ವದಲ್ಲಿ ಹರಡಿದ ಅಜ್ಞಾನ-ದಾರಿದ್ರ್ಯ, ಅಲ್ಲಿ ಪಸರಿಸಿದ ಅಪಪ್ರಚಾರ-ಹಿಂಸಾಚಾರ, ಅದರಲ್ಲಿ ಉದ್ಭವಿಸುವ ಯುದ್ಧ-ವೈಮನಸ್ಸು-ಇವುಗಳಿಂದ ಜರ್ಜರಿತನಾದ ಮಾನವನು ಕೊನೆಗೊಮ್ಮೆ ಸ್ವಯಂಪ್ರೇರಣೆಯಿಂದ ಕಂಡುಕೊಂಡ, ಸ್ವಯಂ ಸೇವೆಯಿಂದ ಪೋಷಿತವಾಗುವ ಮತ್ತು ಸ್ವಯಂ ಪ್ರಯತ್ನದಿಂದ ಯಶಸ್ವಿಯಾಗುವ ಒಂದು ಆದರ್ಶ ಕೇಂದ್ರವನ್ನು ಕಟ್ಟಿಕೊಂಡನು.

ರಾಷ್ಟ್ರಸಂಗಮದಂತೆಯೆ ಈ ಸಂಯುಕ್ತರಾಷ್ಟ್ರಸಂಘಕ್ಕು ನಾಲ್ಕು ಆಧಾರಸ್ತಂಭಗಳಿದ್ದ ಇನ್ನೊಂದು ಸಾಮ್ಯವು ಯಾರಿಗಾದರೂ ಕೌತುಕವನ್ನುಂಟು ಮಾಡದಿರದು. ರಾಷ್ಟ್ರಸಂಗಮದಲ್ಲಿದ್ದ ಮಹಾಸಭೆಯು ಇಲ್ಲಿ **ಸಾಮಾನ್ಯಸಭೆ** (General Assembly)ಯಾಗಿ ಪರಿಣಮಿಸಿತು. ಇದೇ ಎಲ್ಲಕ್ಕೂ ತಾಯಿಬೇರಿನಂತಿದ್ದ ಸಭೆ. ಸಂಯುಕ್ತರಾಷ್ಟ್ರಸಂಘಕ್ಕೆ ಸದಸ್ಯರಾದ ಎಲ್ಲ ರಾಷ್ಟ್ರಗಳ ಪ್ರತಿನಿಧಿಗಳೂ ಈ ಸಭೆಯಲ್ಲಿ ಸದಸ್ಯರಾಗಿರುತ್ತಾರೆ. ಈ ಸಭೆಯ ಪ್ರತಿಯೊಬ್ಬ ಸದಸ್ಯನಿಗೂ ಒಂದೊಂದು ಮಾತ್ರ ಮತವಿದ್ದು ಅದನ್ನು ಆತನು ಸಮಾನಾಧಿಕಾರದಿಂದ ಉಪಯೋಗಿಸಿಕೊಳ್ಳಬಹುದು. ಇಂತು ಈ ಸಾಮಾನ್ಯ ಸಭೆಯು ಪ್ರಪಂಚದ ಮೂಲವೇದಿಕೆ; ಮಾನವಕುಲದ ವಿವೇಕದ ಅಧಿಷ್ಠಾನ.

ಆ ಮೇಲೆ ಬರುವದು **ಕ್ಷೇಮಮಂಡಲ** (Security Council). ಭದ್ರತಾ ಮಂಡಲ ಇದನ್ನು ಸಾಮಾನ್ಯವಾಗಿ ನಾವು ರಾಷ್ಟ್ರಸಂಗಮದ ಕಾರ್ಯಮಂಡಲಕ್ಕೆ ಹೋಲಿಸಬಹುದಾದರೂ ಕಾರ್ಯಕ್ಷೇತ್ರಮತ್ತು ಅಧಿಕಾರವ್ಯಾಪ್ತಿಯ ದೃಷ್ಟಿಯಿಂದ ಇದು ಅದಕ್ಕಿಂತ ಪ್ರಗತಿಪರವಾದ ಮತ್ತು ಪ್ರಬುದ್ಧವಾದ ಆವೃತ್ತಿಯೆಂದು ಹೇಳಬಹುದು. ವಿಶ್ವಶಾಂತಿಯನ್ನು ಭದ್ರವಾಗಿ ಕಾಪಾಡಿಕೊಂಡಿರುವದೆ ಈ ಕ್ಷೇಮಮಂಡಲದ ಮುಖ್ಯ ಧ್ಯೇಯವಾಗಿದೆ. ರಾಷ್ಟ್ರಸಂಗಮದ ಕಾರ್ಯಮಂಡಲದ ಸದಸ್ಯರು ಮೊದಲನೆಯ ಯುದ್ಧದ ವಿಜಯಿಗಳೆಲ್ಲರೂ ಆಗಿದ್ದರೆ ಈ ಕ್ಷೇಮಮಂಡಲದಲ್ಲಿ ಅರ್ಧದಷ್ಟು ಚಿರಸದಸ್ಯರೂ ಅರ್ಧದಷ್ಟು ಆವರ್ತಸದಸ್ಯರೂ ಇರುವದು ಇದರ ಪರಮ ವೈಶಿಷ್ಟ್ಯವೆಂದೆನ್ನಬಹುದು.

ಮೂರನೆಯದಾಗಿ ಬರುವದು **ಅಂತರ್ರಾಷ್ಟ್ರೀಯ ನ್ಯಾಯಮಂದಿರ** (International Court of Justice). ಇದು ರಾಷ್ಟ್ರಮಂದಿರದ

ಒಂದು ಪ್ರಮುಖ ಅಂಗವಾಗಿ ಸತತವಾಗಿ ಇಪ್ಪತ್ತೈದು ವರ್ಷ ಅನ್ಯಾ-
ದೃಶವಾದ ಸೇವೆಯನ್ನು ಸಲ್ಲಿಸುತ್ತ ಬಂದ ಸಂಸ್ಥೆ; ಮಾನವನ ಕಾರ್ಯಾ-
ಚರಣೆಗೆ ವಿವೇಕದ ಮುದ್ರೆಯನ್ನು ಹಾಕಿ ಮಾರ್ಗದರ್ಶನ ಮಾಡುತ್ತ
ಬಂದ ವಿಭಾಗವಾಗಿತ್ತು. ಈಗ ಸಂಯುಕ್ತ ರಾಷ್ಟ್ರಸಂಘಕ್ಕೆ ತನ್ನ
ಅಸ್ತಿತ್ವವನ್ನು, ವಿಶ್ವಾಸವನ್ನು ಧಾರೆಯೆರೆದು ಕೊಟ್ಟು, ಅದರ ಒಂದು
ಬಂಧುರವಾದ ಆಧಾರವಾಯಿತು.

ಕೊನೆಗೆ ನಾಲ್ಕನೆಯದಾಗಿ ಬಂದುದು ಸ್ಥಿರಕಾರ್ಯಾಲಯ
( Secretariat ). ಇದೂ ಒಂದು ಹಿಂದಿನ ಸಂಗಮವು ಹುಡುಕಿ
ತೆಗೆದು ಅದಕ್ಕೊಂದು ಹಿರಿಯ ಸಂಪ್ರದಾಯವುಳ್ಳ, ಹೆಚ್ಚಿನ ಹೊಣೆ
ಯುಳ್ಳ ಸ್ಥಾನವನ್ನು ಕಲ್ಪಿಸಿಕೊಟ್ಟ ಸಂಸ್ಥೆಯೆ ಆಗಿರುವದು. ಈಗ ಮತ್ತೆ
ಅದನ್ನು ಸ್ವೀಕರಿಸಿ ಅದಕ್ಕೊಂದು ಅನುಮತಿಯ ಮುದ್ರೆಯನ್ನು ಒತ್ತುವ
ದಕ್ಕಿಂತ ಮುಂಚಿತವಾಗಿ ಅದರ ಸ್ಥಾನಮಾನ ಅದಕ್ಕೆ ಬರಲಿರುವ ಪ್ರಧಾನ
ಕಾರ್ಯದರ್ಶಿಯ ಹಕ್ಕು ಮತ್ತು ಹೊಣೆಗಳ ವಿಷಯವಾಗಿ ಸುದೀರ್ಘವಾದ
ವಿಚಾರ ಮತ್ತು ವಿಮರ್ಶೆಗಳು ಜರುಗಿದವು. ಆದರೆ ಆ ಕಾರ್ಯಾಲಯ
ಮತ್ತು ಅದರ ಅಧಿಕಾರಿಗಳ ಕಾರ್ಯಕ್ಷೇತ್ರ ಇವುಗಳ ಬಗ್ಗೆ ವಿಶೇಷ
ವಾಗಿ ಮಾತುಕತೆಗಳಾದರೂ ಆ ಸಂಸ್ಥೆಯ ಅವಶ್ಯಕತೆಯ ಬಗ್ಗೆ ಮತ್ತು
ಅಸ್ತಿತ್ವವನ್ನು ಕುರಿತು ಯಾವ ಸದಸ್ಯನೂ ಸಂದೇಹದ ಇಲ್ಲವೆ ಸಂಕೋಚದ
ಉದ್ಗಾರಗಳನ್ನು ತೆಗೆಯಲಿಲ್ಲ. ಇದು ಅಂತಹ ಕಾರ್ಯಾಲಯದ ಸೇವೆ,
ಮತ್ತು ಅದರ ಅಗತ್ಯಗಳ ವಿಷಯವಾಗಿ ಜನಸಾಮಾನ್ಯರಲ್ಲಿರುವ ಹಾರ್ದಿಕ
ವಿಶ್ವಾಸ, ಮತ್ತು ಕೊನೆಯ ನಿರ್ಧಾರಗಳ ನಿದರ್ಶನವಾಗಿದೆ.

ಸಂಯುಕ್ತ ರಾಷ್ಟ್ರಸಂಘವು ಆ ಮುಂಚಿನ ರಾಷ್ಟ್ರಸಂಗಮದಂತೆ ಆ
ನಾಲ್ಕು ಸ್ತಂಭಗಳ ಕಟ್ಟಡವಾಗಿರದೆ, ಮಾನವನ ಸ್ಥಾಪತ್ಯಶಾಸ್ತ್ರದ ಜ್ಞಾನ
ದಂತೆ ಅವನ ರಾಜ್ಯಶಾಸ್ತ್ರದಲ್ಲಿಯೂ ಪ್ರಗತಿಯಾದುದರ ಪ್ರತ್ಯಕ್ಷ ಪ್ರಮಾಣ
ಎನ್ನುವಂತೆ ಆರು ಸ್ತಂಭಗಳ ಆಧಾರದ ಮೇಲೆ ವಿರಾಜಮಾನವಾಗಿ
ರುವ ವಿಶಾಲಭವನವಾಗಿದೆ. ಕೊನೆಯ ಈ ಎರಡು ವಿಭಾಗಗಳಲ್ಲಿ
ಒಂದು **ಆರ್ಥಿಕ ಸಾಮಾಜಿಕ ಸಮಿತಿ** (Economic And Social
Council) ಯು ಇದಕ್ಕೆ ಹಿನ್ನೆಲೆಯಾಗಿ ರಾಷ್ಟ್ರಸಂಗಮದ ಚರಿತ್ರೆಯಿದ್ದರೂ

ಸಂಯುಕ್ತ ರಾಷ್ಟ್ರಸಂಘದಲ್ಲಿ ಅದಕ್ಕೆ ಹೊಸ ಅಧಿಕಾರಸ್ಥಾನವು ಪ್ರಾಪ್ತವಾದು ದೊಂದು ವೈಶಿಷ್ಟ್ಯವಾಗಿದೆ. ರಾಷ್ಟ್ರಸಂಗಮದ ದಿನಗಳಿಂದಲೇ ಅಖಿಲ ಪ್ರಪಂಚದ ಮಾನವಕೋಟಿಯು ಗುರಿಯಾಗುತ್ತಿದ್ದ, ಆರ್ಥಿಕ ಮತ್ತುಸಾಮಾಜಿಕ ತೊಡಕು ತೊಂದರೆಗಳ ಅವಲೋಕನ ಮಾಡಿ, ಅವುಗಳಿಗೆ ಪರಿಹಾರವನ್ನು ಸೂಚಿಸುವ ಹೊಣೆಯನ್ನು ಹೊತ್ತ ಪರಂಪರೆಯು ೧೯೨೯ರಿಂದ ಸ್ಥಾಪಿತವಾಗಿತ್ತು. ಆದರೆ ಮುಂದೆ ಆಗಾಗ್ಗೆ ಪ್ರಪಂಚದ ಒಂದೊಂದೆ ರಾಜ್ಯವು ಮಾಡಿದ ಆಕ್ರಮಣ ಮತ್ತು ಶಾಂತಿ ಭಂಗದ ಪರಿಣಾಮವಾಗಿ ಮತ್ತು ಕೊನೆಯಲ್ಲಿ ೧೯೩೯ರಲ್ಲಿ ಹೊತ್ತಿದ ಮಹಾಜ್ವಾಲೆಯಲ್ಲಿ ಅದೇ ಸ್ಥಾಪಿತವಾಗಬೇಕೆಂದ, ಆರ್ಥಿಕ ಮತ್ತು ಸಾಮಾಜಿಕ ಪ್ರಶ್ನೆಗಳ ಕೇಂದ್ರ ಸಮಿತಿಯು ಅಷ್ಟಕ್ಕೆ ನಿಲ್ಲಬೇಕಾಯಿತು. ಆದರೆ ಈ ಬಾರಿ ಅದಕ್ಕೊಂದು ನಿಶ್ಚಿತವಾದ ಅಂಗಸಂಸ್ಥೆಯ ಸ್ವರೂಪವನ್ನು ಕೊಡುವ ಉದ್ದೇಶದಿಂದ ಡಂಬರ್ಟನ್ ಓಕ್ಸ ಸಭೆಯಲ್ಲಿಯೆ ಆರಂಭವಾದ ಚರ್ಚೆಯು ಕೊನೆಗೆ ಅಧಿಲೇಖನದ ಪೀಠಿಕೆಯ ರೂಪದಲ್ಲಿ ಅದು ಜನ್ಮವೆತ್ತಿತು. ಅದೇ ಮೇರೆಗೆ ಮಾನವನ ಮೂಲ ಅಧಿಕಾರಗಳನ್ನು ಬಹಿರಂಗವಾಗಿ ಸಾರುವ, ಸಾಮಾಜಿಕ ಪ್ರಗತಿ ಮತ್ತು ಆರ್ಥಿಕ ಉನ್ನತಿಯನ್ನೂ ಸಾಮಾಜಿಕ ಉತ್ಕರ್ಷವನ್ನೂ ಸಾಧಿಸುವದಕ್ಕಾಗಿ ಅಂತ-ರ್ರಾಷ್ಟ್ರೀಯ ಸಂಘಟನೆಯ ಸಹಾಯವನ್ನು ಪಡೆಯುವ ತಮ್ಮ ಧ್ಯೇಯವನ್ನು ಅಧಿಲೇಖನದಲ್ಲಿ ಘೋಷಿಸಿ ಸಂಯುಕ್ತ ರಾಷ್ಟ್ರಸಂಘದ ಈ ಅಯ್ದನೆಯ ವಿಭಾಗವನ್ನು ನಿರ್ಮಿಸಿದರು.

ಅದರಂತೆಯೇ ರೂಪಗೊಂಡ ೬ನೇ ಅಂಗಸಂಸ್ಥೆಯು ವಿಶ್ವಸ್ಥ ಮಂಡಲ (Trustee-ship Council). ಇದಕ್ಕೂ ತಳಹದಿಯಾಗಿ ರಾಷ್ಟ್ರಸಂಗಮದಲ್ಲಿ ಇದ್ದ ವ್ಯವಸ್ಥೆಯು ಎಲ್ಲ ಅಂತರಾಷ್ಟ್ರೀಯ ಸಂಘಟನೆಯ ವ್ಯಾಸಂಗಿಗಳಿಗೆ ತಿಳಿದ ಮಾತಾಗಿದೆ. ಯುದ್ಧದಲ್ಲಿ ಸೋತ ಸಾಮಾಜಿಕವಾಗಿ ಹಣ್ಣಾದ ಮತ್ತು ಆರ್ಥಿಕ-ರಾಜಕೀಯ ಅರಾಜಕತೆಯಲ್ಲಿದ್ದ ರಾಷ್ಟ್ರಗಳನ್ನು ವಿಜಯದ ಉತ್ಸಾಹ ಮತ್ತು ಮದಗಳಲ್ಲಿ ತಮ್ಮ ತಮ್ಮೊಳಗೆ ಹಂಚಿಕೊಳ್ಳದೆ, ಅವುಗಳನ್ನು ಒಂದು ವಿಶ್ವಸ್ತ ರಾಜ್ಯದ ಆಡಳಿತದಲ್ಲಿಟ್ಟು ಆ ರಾಷ್ಟ್ರಗಳು ರಾಜಕೀಯ ಸ್ಥಿರತೆ ಮತ್ತು ಆರ್ಥಿಕ-ಸಾಮಾಜಿಕ ಪುನರ್ರಚನೆಯನ್ನುಪಡೆದುಕೊಂಡಕೂಡಲೇ ಅಂತರ್ರಾಷ್ಟ್ರೀಯ ಅಧಿಕಾರದಿಂದ ಅವುಗಳ ಸ್ವತಂತ್ರ ಅಸ್ತಿತ್ವವನ್ನು ಒಪ್ಪಬೇಕು.

ಎಂಬ ವಿಚಾರವನ್ನು ಕೂಡ ರಾಷ್ಟ್ರಸಂಗಮವು ಕಂಡಿದ್ದು, ಅದರ ನೇರಿಗೆ ವಿಶ್ವಸ್ತ ಪದ್ಧತಿಯನ್ನು ಆಚರಣೆಯಲ್ಲಿ ತಂದ ಶ್ರೇಯಸ್ಸು ಅದರದೇ ಆಗಿದೆಯಷ್ಟೆ! ಈ ಪರಿಸ್ಥಿತಿಯು ಪ್ರಪಂಚದಲ್ಲಿ ಮತ್ತೊಂದು ಮಹಾಯುದ್ಧವು ಜರುಗಿದರೂ ಅದರ ಪರಿಣಾಮವು ಹಾಗೆಯೆ ಉಳಿದಿತ್ತು. ಅಂತೆಯೆ ಪ್ರಾರಂಭಿಕವಾಗಿ ಈ ತತ್ವದ ಆನುಷಂಗಿಕ ಚರ್ಚೆಯು ಮೊದಲುನಡೆದು, ಕೊನೆಗೆ ಸಾನ್-ಫ್ರಾನ್ಸಿಸ್ಕೋದ ಸಮ್ಮೇಲನದಲ್ಲಿ ಅದನ್ನು ಸರ್ವಾನುಮತದಿಂದ ಸ್ವೀಕರಿಸಿ, ಸಂಯುಕ್ತ ರಾಷ್ಟ್ರಸಂಘದ ಆರನೆಯ ಅಂಗಸಂಸ್ಥೆಯೆಂದು ವಿಶ್ವಸ್ತ ಮಂಡಲದ ಸ್ಥಾಪನೆಯಾಯಿತು. ರಾಷ್ಟ್ರಸಂಗಮದಲ್ಲಿ ಸೇರ್ಪಡೆಯಾಗಿದ್ದ ಈ ಸಂಸ್ಥೆಯ ಪೂರ್ವಜನ್ಮವು ಸಾಕಷ್ಟು ಜೀವನ ಸತ್ವವುಳ್ಳದ್ದು ಆಗಿರಲಿಲ್ಲ. ತನ್ನ ಆಯುಷ್ಯದಲ್ಲಿ ಅದು ತಕ್ಕ ಪ್ರಕಾಶವನ್ನು ಬೀರಲಿಲ್ಲ. ಅಂತಹ ಬರಡು ಬುಡದ ಮೇಲೆ ಈ ಹೊಸ ಕಟ್ಟಡವನ್ನು ಕಟ್ಟಬೇಕಾಯಿತು. ಅದು ಕೂಡ ಅಲ್ಪ ಅವಧಿಯಲ್ಲಿ, ಈ ವಿಷಯಕ್ಕೆ ಸಂಬಂಧಿಸಿದ ಎಲ್ಲ ವಿವರಗಳನ್ನು ತೀಕ್ಷ್ಣವಾಗಿ ಚರ್ಚಿಸಿ, ನಿರ್ಧಾರವು ಕೈಕೊಳ್ಳಲಾಯಿತು.

ಈ ರೀತಿಯಾಗಿ ಪ್ರಪಂಚದಲ್ಲಿ ವಿಶ್ವಶಾಂತಿಯನ್ನು ಪ್ರಯತ್ನಪೂರ್ವಕವಾಗಿ ನೆಲಸಲು ಮಾಡುತ್ತಿರುವ ಅಂತರ್‌ರಾಷ್ಟ್ರೀಯ ಸಂಘಟನೆಗಳಲ್ಲಿ ರಾಷ್ಟ್ರ-ಸಂಗಮವು ಸಾಕಷ್ಟು ಫಲಪ್ರದವಾಗಲಿಲ್ಲ. ಈ ನೋವು ಜಗತ್ತಿನ ಜನ-ತೆಯ ಮನಸ್ಸಿನಲ್ಲಿ ಅಳುಕುತ್ತಿದ್ದರುಕೂಡ ಈ ಎರಡನೆಯ ಸಂಸ್ಥೆಯು ತಲೆ ಎತ್ತಿರುವದು ಅದರ ಆಶಾವಾದದ ಮತ್ತು ಸತತ ಪ್ರಯತ್ನಗಳ ದ್ಯೋತಕವಾಗಿದೆ. ೧೯೪೬ರ ಎಪ್ರಿಲ ೮ನೆಯ ದಿನಾಂಕ, ರಾಷ್ಟ್ರಸಂಗಮವು ವಿಧಿವತ್ತಾಗಿ ತನ್ನ ಎಲ್ಲ ಸೊತ್ತು-ಸದಿಚ್ಛೆಗಳನ್ನು, ಸಂಯುಕ್ತರಾಷ್ಟ್ರ ಸಂಘಕ್ಕೆ ಹಸ್ತಾಂತರಿಸಿ ತಾನು ಪರಿಸಮಾಪ್ತಿಯನ್ನು ಹೊಂದಿತು. ಮನುಷ್ಯನ ಆಕಾಂಕ್ಷೆಗಳನ್ನು ಕಾಲಕ್ಕೆ ತಕ್ಕ ರೂಪ-ರಂಗಗಳಲ್ಲಿ ಕೈಗೂಡಿಸಿಕೊಳ್ಳಲಿಕ್ಕೆ ಇದಕ್ಕಿಂತ ಹೆಚ್ಚಿನ ಉದಾತ್ತ ಉದಾಹರಣೆಗಳು ದೊರೆಯಬಹುದೆ?

ಈ ಆರು ವಿಭಾಗಗಳು ಸಂಯುಕ್ತ ರಾಷ್ಟ್ರಸಂಘದ ಪ್ರಮುಖ ಅಂಗ ಸಂಸ್ಥೆಗಳಾಗಿವೆ. ಇದಲ್ಲದೆ ಸಂಯುಕ್ತ ರಾಷ್ಟ್ರಸಂಘವು ತನ್ನ ಧ್ಯೇಯ ಧೋರಣೆಗಳನ್ನು ಸಾಧಿಸಲು, ಹನ್ನೆರಡು ಉಪಾಂಗಗಳನ್ನು ರಚಿಸಿಕೊಂಡು

ಸಾಧಿಸಲು ವಿವಿಧ ರೀತಿಯಿಂದ ಕಾರ್ಯೋನ್ಮುಖವಾಗಿದೆ. ಅವುಗಳ ವಿಷಯ ವಾಗಿ ವಿವರಗಳನ್ನು ತಿಳಿಯುವ ಮೊದಲು ಈ ಷಟ್ ಸ್ಥಳಗಳ ಪರಿಚಯ ವನ್ನು ಹೆಚ್ಚಾಗಿ ಮಾಡಿಕೊಳ್ಳುವದು ಅಗತ್ಯವಾಗಿದೆ.

**ಸಾಮಾನ್ಯ ಸಭೆಯು**

ಸಾಮಾನ್ಯಸಭೆಯು ಸಂಯುಕ್ತರಾಷ್ಟ್ರಸಂಘದ ಹಿರಿಯ ವಿಭಾಗ ವಷ್ಟೇ ! ಇದು ಪ್ರಪಂಚದಲ್ಲಿ ಪ್ರಜಾಪ್ರಭುತ್ವವು ಗೌರವದಿಂದಲೂ ಪ್ರಯೋಜಕವಾಗಿಯೂ ನೆಲಗೊಳ್ಳುವ ಆಶ್ವಾಸನೆಯನ್ನು ಹುಟ್ಟಿಸುವಂತಹ ಸಂಸ್ಥೆಯಾಗಿದೆ. ವಿಶ್ವದ, ಅರುವತ್ತಕ್ಕೆ ಮೇಲ್ಪಟ್ಟ ರಾಷ್ಟ್ರಗಳ ಪ್ರತಿನಿಧಿಗಳಿರುವ ಈ ಸಾಮಾನ್ಯಸಭೆಯು ತನ್ನ ರಚನೆಯಲ್ಲಿಯೂ ಕಾರ್ಯಾಚರಣೆಯಲ್ಲಿಯೂ ಅನುಪಮವಾದುದಾಗಿದೆ. ಇಂದು ಸಂಯುಕ್ತರಾಷ್ಟ್ರಸಂಘದ ಕೇಂದ್ರ ಬಿಂದುವಾಗಿದೆ. ಪ್ರತಿಯೊಂದು ಸದಸ್ಯ ರಾಷ್ಟ್ರವು ಈ ಸಾಮಾನ್ಯ ಸಭೆಗೆ ಐದು ಜನ ಪ್ರತಿನಿಧಿಗಳನ್ನು ಕಳಿಸಬಹುದಾದರೂ ಅದಕ್ಕೆ ಒಂದೇ ಮತದ ಅಧಿಕಾರ ವಿರುತ್ತದೆ. ಸಂಯುಕ್ತ ರಾಷ್ಟ್ರಸಂಘದ ಮಿಕ್ಕ ಎಲ್ಲ ಅಂಗಸಂಸ್ಥೆಗಳ ಮತ್ತು ಉಪಾಂಗಗಳ ಮೇಲೆ ಸಾಮಾನ್ಯಸಭೆಗೆ ಅಧಿಕಾರವಿರುತ್ತದೆ. ಮತ್ತು ಇವು ಗಳ ಕಾರ್ಯ ಸಂಪರ್ಕವಿರುತ್ತದೆ. ಅಂಗಸಂಸ್ಥೆಗಳ ಸದಸ್ಯರನ್ನು ತಾನೇ ಆಗಲಿ, ಕ್ಷೇಮಮಂಡಲದ ಸಹಕಾರದಿಂದಾಗಲಿ ಈ ಸಭೆಯು ನಿಯುಕ್ತ ಮಾಡುತ್ತಿದ್ದು, ಅಧಿಲೇಖನದ ನಿಬಂಧನೆಗಳ ಮೇರೆಗೆ, ಎಲ್ಲ ವಿಷಯಗಳನ್ನು ಪರ್ಯಾಲೋಚಿಸುವ ಅಧಿಕಾರವೂ ಈ ಸಭೆಗಿರುತ್ತದೆ. ಸಂಯುಕ್ತ ರಾಷ್ಟ್ರಸಂಘದ ಮಿಕ್ಕ ಅಯ್ದು ಪ್ರಮುಖ ಅಂಗಸಂಸ್ಥೆಗಳು ಈ ಸಭೆಗೆ ವಾರ್ಷಿಕ ಮತ್ತು ವಿಶಿಷ್ಟಕಾರ್ಯದ ವರದಿಗಳನ್ನು ಸಲ್ಲಿಸುತ್ತವೆ. ಈ ಅಂಶಗಳನ್ನು ಮತ್ತು ಅವುಗಳಲ್ಲಿ ಅಡಕವಾಗಿರುವ ವಿಷಯಗಳನ್ನು ಸಾಮಾನ್ಯಸಭೆಯು ವಿಮರ್ಶಿಸಿ ಪ್ರತಿಯೊಂದು ಸಂದರ್ಭದಲ್ಲಿಯೂ ತಕ್ಕ ಕಾರ್ಯವನ್ನು ಕೈಕೊಳ್ಳುವಂತೆ ವಿಧಿಸುತ್ತದೆ. ಮತ್ತು ಆ ಪ್ರಕಾರ ಪ್ರತ್ಯಕ್ಷ ಕಾರ್ಯಾಚರಣೆಯಲ್ಲಿ ಮಾರ್ಗದರ್ಶನ ಮಾಡುತ್ತದೆ. ಇಡಿಯ ಸಂಘದ ಆಯವ್ಯಯಪತ್ರಿಕೆಯನ್ನು ಸಿದ್ಧಗೊಳಿಸಿ, ಪ್ರತಿಯೊಂದು ರಾಷ್ಟ್ರದಿಂದ ಬರುವ ವಂತಿಗೆಗಳನ್ನು ಈ ಸಭೆಯು ತನ್ನ ಆಧೀನದಲ್ಲಿರಿಸಿಕೊಂಡು ಅದರ ವಿನಿಯೋಗವು ಸರಿಯಾಗಿ ನಡೆಯುವಂತೆ ನೋಡಿಕೊಳ್ಳುತ್ತದೆ. ಸಾಮಾನ್ಯ

ಸಭೆಯ ಎಲ್ಲ ನಿರ್ಣಯಗಳು ಸಂಯುಕ್ತ ರಾಷ್ಟ್ರಸಂಘದ ಇತರ ಅಂಗಸಂಸ್ಥೆಗಳಿಗೆ ಮತ್ತು ಉಪಾಂಗಗಳಿಗೆ ಕಾರ್ಯರೂಪದ ದೃಷ್ಟಿಯಿಂದ ಶಿಫಾರಿಸಿನ ರೂಪದಿಂದ ಕಳಿಸಲಾಗುತ್ತವೆ.

ಸಾಮಾನ್ಯಸಭೆಯಲ್ಲಿ ಇಂತಹ ಬಗೆಯ ವಿಷಯಗಳನ್ನಷ್ಟೇ ಚರ್ಚೆಗೆ ತರಬೇಕು, ಎಂಬ ಯಾವ ನಿರ್ಬಂಧವೂ ಇಲ್ಲ. ಈ ಅಂಶವು ಸಂಯುಕ್ತ ರಾಷ್ಟ್ರಸಂಘದ ನಿರ್ಮಾಣವಾಗುವ ಮೊದಲು ಹೆಚ್ಚಿನ ವಾದವಿವಾದಕ್ಕೆ ಕಾರಣವಾಯಿತು. ಅಂತರ್ರಾಷ್ಟ್ರೀಯ ರಕ್ಷಣೆ, ಮತ್ತು ಭದ್ರತೆಯ ವಿಷಯಗಳು ಕೇವಲ ಕ್ಷೇಮಮಂಡಲದಲ್ಲಿ ಚರ್ಚೆಗೆ ಬರಬೇಕು ಎಂಬುದು ಒಂದು ವರ್ಗದ ವಾದವಾಗಿತ್ತು. ಆದರೆ ಕ್ಷೇಮಮಂಡಲದ ನಿರ್ಮಾಣ ಮತ್ತು ನಿಬಂಧನೆಗಳ ವಿಚಾರವು ಸದಸ್ಯರ ಲಕ್ಷ್ಯವನ್ನು ಹೆಚ್ಚುಹೆಚ್ಚಾಗಿ ಸೆಳೆದಂತೆ ಅದರ ಮಿತಿ ಮತ್ತು ಮೇರೆಗಳು ಸ್ಪಷ್ಟವಾದುವು; ಅಂತೆಯೆ ಸಾಮಾನ್ಯ ಸಭೆಯಾದ ಸಾರ್ವಭೌಮ ಸಭೆಗೆ ಅನಿಯಂತ್ರಿತ ಮತ್ತು ಅಮಿತವಾದ ಅಧಿಕಾರ ಕ್ಷೇತ್ರವು ನಿರ್ಧರಿಸಲಾಯಿತು.

ಕ್ಷೇಮಮಂಡಲವು ಪ್ರಾಮುಖ್ಯವಾಗಿ ಪ್ರಾಪಂಚಿಕ ಭದ್ರತೆ ಮತ್ತು ಶಾಂತಿಸ್ಥಾಪನೆಯ ಹೊಣೆಯನ್ನು ವಹಿಸಿಕೊಂಡಿದ್ದರೂ, ಪ್ರಸಂಗಗಳಲ್ಲಿ ಸಾಮಾನ್ಯ ಸಭೆಯು ಆ ವಿಷಯಗಳನ್ನು ಸಮಾಲೋಚಿಸಿ ತನ್ನ ಅನುಮೋದನೆಯನ್ನೂ ಅಭಿಪ್ರಾಯವನ್ನೂ ಮತ್ತು ಮಾರ್ಗದರ್ಶನವನ್ನೂ ತಿಳಿಸುವ ಸ್ವಾತಂತ್ರ್ಯವುಳ್ಳದ್ದಾಗಿದೆ. ಅದರಲ್ಲಿಯೂ ವಿಶೇಷವಾಗಿ ಶಸ್ತ್ರಾಸ್ತ್ರಗಳ ಪ್ರಮಾಣವನ್ನು ನಿಯಂತ್ರಿಸುವ, ಮತ್ತು ನಿಶ್ಶಸ್ತ್ರೀಕರಣದ ಧೋರಣೆಯನ್ನು ಖಚಿತಗೊಳಿಸುವ ಬಗೆಯಲ್ಲಿ ಸಾಮಾನ್ಯ ಸಭೆಯು ಅಧಿಕಾರವನ್ನು ಪಡೆದಿದೆ. ಈ ಸಾಮಾನ್ಯ ಸಭೆಯು ಇಂತಹ ಪ್ರಶ್ನೆಗಳನ್ನು ತನ್ನ ಸದಸ್ಯರಿಂದ ಮಂಡಿಸಲ್ಪಟ್ಟಾಗ, ಇಲ್ಲವೆ ಕ್ಷೇಮಮಂಡಲದಿಂದ ಸೂಚಿತವಾದಾಗ, ಮತ್ತು ಸದಸ್ಯೇತರರಾದರೂ ಸಂಯುಕ್ತ ರಾಷ್ಟ್ರಸಂಘದ ಅಧಿಲೇಖನದಲ್ಲಿ ಘೋಷಿಸಿದ ಶಾಂತಿಸ್ಥಾಪನೆಯ ನಿಬಂಧನೆಗಳಿಗೆ ಅನುಸಾರವಾಗಿ ತಿಳಿಸಿದ ಮೇರೆಗೆ ವಿಮರ್ಶಿಸಬಹುದು, ನಿರ್ಣಯಗಳನ್ನು ಅಂಗೀಕರಿಸಿ ಸಂಬಂಧಪಟ್ಟ ಸಂಸ್ಥೆ ಇಲ್ಲವೆ ರಾಷ್ಟ್ರಗಳಿಗೆ ಅವುಗಳನ್ನು ಕಾರ್ಯಗತ ಮಾಡಲಿಕ್ಕೆಂದು ಕಳಿಸಿಕೊಡಬಹುದು. ಇತ್ತ ರಕ್ಷಣೆಯ ವಿಷಯವಾಗಿ ಕ್ಷೇಮಮಂಡಲವು ಚರ್ಚೆಯನ್ನು

ನಡೆಯಿಸಿದಾಗ ಆ ಬಗ್ಗೆ ಸಾಮಾನ್ಯ ಸಭೆಯು ಹೆಚ್ಚಿನ ಆಸಕ್ತಿಯನ್ನು ತೋರಿಸುವದು ಅನಾವಶ್ಯಕವೆಂದು ನಿರ್ಣಿತವಾಗಿದ್ದರೂ, ಅವಲೋಕನಕ್ಕೆಂದು ಕೈಕೊಂಡ ಒಂದು ಸಂರಕ್ಷಣೆಯ ಅಂಶವನ್ನು ಕ್ಷೇಮಮಂಡಲವು ಅನಿಯಮಿತ ಕಾಲಪರ್ಯಂತ ಹಾಗೆಯೇ ಇಟ್ಟುಕೊಂಡರೆ, ಅದರ ಚಾಲನಕ್ಕಾಗಿ ಮತ್ತು ಶೀಘ್ರ ನಿರ್ಣಯಕ್ಕಾಗಿ ಸಾಮಾನ್ಯಸಭೆಯು ಆಸ್ಥೆಯಿಂದ ಮುಂದೆ ಬರಬಹುದು.

ಇಂತು ಪ್ರಪಂಚದ ಶಾಂತಿಗೆ ಸಂಬಂಧಪಟ್ಟ, ಮತ್ತು ಪರಸ್ಪರ ಸೌಹಾರ್ದ್ರವು ಬೆಳೆಯಬಹುದಾದ ಯಾವುದೆ ವಿಚಾರವಿರಲಿ, ಸಾಮಾನ್ಯಸಭೆಯು ತನ್ನ ಕಾರ್ಯ ವ್ಯಾಪ್ತಿಯಲ್ಲಿ, ತನ್ನ ಪ್ರೇರಣೆಯಿಂದ ಆಗಲಿ ಇಲ್ಲವೆ ಅನ್ಯಸದಸ್ಯರ ಅಥವಾ ಪರಕೀಯರ ಬಿನ್ನಹದ ಮೇರೆಗೆ ಆಗಲಿ, ಚರ್ಚೆಗೆ ತೆಗೆದುಕೊಂಡು ಆ ಬಗ್ಗೆ ನಿರ್ಣಯವನ್ನು ಕೈಕೊಳ್ಳುವ ಅಧಿಕಾರವು ಸಾಮಾನ್ಯ ಸಭೆಗೆ ಇರುತ್ತದೆ. ಇದರಿಂದ ಪ್ರಜಾಪ್ರಭುತ್ವದ ಪ್ರತ್ಯಕ್ಷ ಸ್ವರೂಪವನ್ನು ಕಾರ್ಯತಃ ಕಾಣುವ ಒಂದು ಪದ್ಧತಿಯನ್ನು ನಾವು ಇಲ್ಲಿ ನೋಡಬಹುದಾಗಿದೆ. ಕೇವಲ ಘಟಿಸಿದ ಸಂಗತಿಯು ಅಪಾಯವನ್ನು ಅಥವಾ ಯುದ್ಧ ಪರಿಸ್ಥಿತಿಯುನ್ನು ಹರಡಬಹುದು ಎಂದಿಷ್ಟೆ ಆಗಲಿ, ಸಂಭವಿಸಬಹುದಾದ ಘಟನೆಯ ವಿಷಯವಾಗಿಯಾಗಲಿ ಸಾಮಾನ್ಯಸಭೆಯು ತನ್ನ ಅಭಿಮತವನ್ನು ಪ್ರಕಟಗೊಳಿಸಿ ಆ ಮೇರೆಗೆ ಮುಂಜಾಗ್ರತೆಯ ಕಾರ್ಯವನ್ನು ಕೈಕೊಳ್ಳುವಂತೆ ಕ್ಷೇಮಮಂಡಲಕ್ಕೆ ತಿಳಿಸುವ ಕರ್ತವ್ಯವುಳ್ಳದ್ದಾಗಿದೆ.

ಸಾಮಾನ್ಯಸಭೆಯ ಪ್ರತಿಯೊಬ್ಬ ಸದಸ್ಯನಿಗೆ ಒಂದೇ ಮತದ ಅಧಿಕಾರವಿರುತ್ತದೆ; ಮತ್ತು ಅತ್ಯಂತ ಮಹತ್ವದ ವಿಷಯಗಳಿಗೆ ಸಂಬಂಧಪಟ್ಟ ನಿರ್ಣಯಗಳನ್ನು ೨/೩ ಬಹುಮತದಿಂದ ಸ್ವೀಕರಿಸಬೇಕೆಂಬ ನಿರ್ಬಂಧವಿದೆ; ಇತ್ತ ಅನ್ಯ ವಿಷಯಗಳನ್ನು ಸಾಮಾನ್ಯ ಬಹುಮತದಿಂದ ಅಂಗೀಕರಿಸಬಹುದಾದರೂ ಸಂಯುಕ್ತ ರಾಷ್ಟ್ರಸಂಘಕ್ಕೆ ಕೊಡಬೇಕಾದ ಆರ್ಥಿಕ ವಂತಿಗೆಯು ಎರಡು ವರ್ಷಗಳ ವರೆಗೆ ಬಾರದಿದ್ದಲ್ಲಿ ಅಂತಹ ರಾಷ್ಟ್ರದ ಸದಸ್ಯರಿಗೆ ಮತವನ್ನು ಕೊಡುವ ಅಧಿಕಾರವು, ಆ ಹಣವು ಬರುವ ವರೆಗೆ ಪ್ರಾಪ್ತವಾಗುವದಿಲ್ಲ. ಯಾವದೊಂದು ರಾಷ್ಟ್ರವು ತನ್ನ ಶಕ್ತಿಮೀರಿ ಪ್ರಯತ್ನಿಸಿದರೂ ತೊಂದರೆಗಳ ಮೂಲಕ ವಂತಿಗೆಯನ್ನು ಸಲ್ಲಿಸಲು ಅಸಮರ್ಥ

ವಾಗಿದೆ, ಎಂದು ಸಂಯುಕ್ತರಾಷ್ಟ್ರಸಂಘಕ್ಕೆ ನಿಸ್ಸಂಶಯವಾಗಿ ತಿಳದುಬಂದಲ್ಲಿ ಅದನ್ನು ಅಲಕ್ಷ್ಯಮಾಡಿ, ಮತಾಧಿಕಾರವನ್ನು ಕೊಡುವ ಅಧಿಕಾರವೂ ಈ ಸಾಮಾನ್ಯಸಭೆಗೆ ಇರುತ್ತದೆ.

ಸಾಮಾನ್ಯ ಸಭೆಯು ಸಂಯುಕ್ತ ರಾಷ್ಟ್ರಸಂಘದ ಮಾತೃಸ್ಥಾನದಲ್ಲಿದ್ದ ಅಂಗಸಂಸ್ಥೆಯಷ್ಟೆ; ಅಂತೆಯೆ ಇನ್ನೊಂದು ಅಂಗಸಂಸ್ಥೆಯಾಗಿದ್ದ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯ ಕಾರ್ಯಕ್ಕೆಕೂಡ ಸಾಮಾನ್ಯಸಭೆಯೆ ಅಧಿಕೃತವಾಗಿ ಮನ್ನಣೆಯನ್ನು ಕೊಡುತ್ತದೆ. ಇದರರ್ಥ ಪ್ರತ್ಯಕ್ಷವಾಗಿ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯು ತತ್ಸಂಬಂಧದ ಎಲ್ಲ ಕಾರ್ಯವನ್ನು ಜರುಗಿಸುತ್ತಿದ್ದರೂ, ಅದು ಸಾಮಾನ್ಯಸಭೆಯಮುಖಾಂತರ ಮಾತ್ರ. ಪ್ರಪಂಚದ ಯಾವುದೊಂದು ರಾಷ್ಟ್ರದಲ್ಲಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಸ್ವಾಸ್ಥ್ಯ ವಿಷಯಕ ಕಾರ್ಯಕ್ರಮವನ್ನು ಕೈಕೊಳ್ಳಲಿಕ್ಕೆಂದು ಈ ಸಮಿತಿಯು ಒಪ್ಪಂದವನ್ನು ಮಾಡಿಕೊಳುವ್ವದಿದ್ದರೆ ಅದು ಸಂಯುಕ್ತರಾಷ್ಟ್ರದ ಸಂಗಡ, ಮತ್ತು ಸಾಮಾನ್ಯ ಸಭೆಯ ಮುಖಾಂತರ, ಈ ಸಮಿತಿಯು ಹೇಗೆ ಅಸ್ತಿತ್ವದಲ್ಲಿ ಬಂದಿತು ಎಂಬುದನ್ನು ನಾವು ಲಕ್ಷ್ಯದಲ್ಲಿ ತಂದುಕೊಂಡರೆ ಈ ಬಗೆಯ ದ್ವಿತಪ್ರಾಧಿಕಾರವು ಏಕೆ ಆವಶ್ಯವಾಗಿರುವದು ಎಂಬುದು ಸ್ಪಷ್ಟ ವಾಗುವದು.

ಅದೇ ಪರಿಸ್ಥಿತಿಯಲ್ಲಿದ್ದ ಇನ್ನೊಂದು ಅಂಗಸಂಸ್ಥೆಯೆಂದರೆ ವಿಶ್ವಸ್ತ ಮಂಡಲ. ವಿಶ್ವದಲ್ಲಿ ಯುದ್ಧದ ಪರಿಣಾಮವಾಗಿ ಇಲ್ಲವೆ ಅನ್ಯ ಯಾವುದೇ ಕಾರಣದ ಮೂಲಕ ಯಾವುದೊಂದು ರಾಷ್ಟ್ರ, ದೇಶ, ಇಲ್ಲವೆ ಪ್ರದೇಶವು, ವಿಶ್ವಸ್ತಮಂಡಲದ ಅಧೀನಕ್ಕೆ ಒಳಪಟ್ಟಿರುವಾಗ ಸಾಮಾನ್ಯಸಮಿತಿಯ ಮುಖಾಂತರ ಆ ಕರ್ತವ್ಯವನ್ನು ಪಾಲಿಸುವ ಅಧಿಕಾರವು ವಿಶ್ವಸ್ತ ಮಂಡಲಕ್ಕೆ ದೊರೆಯುತ್ತದೆ. ಇಂತಹ ಒಂದು ರಾಷ್ಟ್ರವು ಯುದ್ಧದ ದೃಷ್ಟಿಯಿಂದ ಮಹತ್ವದ್ದು ಎಂಬ ನಿರ್ಬಂಧವಿಲ್ಲದಾಗ್ಗೆ ಮತ್ತು ಅದನ್ನು ವಿಶ್ವಸ್ತ ಮಂಡಲದ ಆಡಳಿತಕ್ಕೆ ಕೊಡಬೇಕು, ಎಂಬ ನಿರ್ಣಯವಾದಾಗ, ಅದಕ್ಕೆ ಸಂಬಂಧಿಸಿದ ಎಲ್ಲ ಒಡಂಬಡಿಕೆಯ ವಿವರಗಳನ್ನು ಒಪ್ಪುವ ಇಲ್ಲವೆ ಸರಿಪಡಿಸುವ ಅಧಿಕಾರವು ಸಾಮಾನ್ಯ ಸಭೆಯ ಪರವಾಗಿ ವಿಶ್ವಸ್ತ ಮಂಡಲಕ್ಕೆ

ಪ್ರಾಪ್ತವಾಗುತ್ತದೆ. ಇತ್ತ ವಿಶ್ವಸ್ತ ಮಂಡಲಕ್ಕೆ ಕೊಡದಿದ್ದ, ಬೇರೆ ಸ್ವಾಯತ್ತ ವಲ್ಲದ ಪ್ರದೇಶ ಇಲ್ಲವೆ ದೇಶಗಳ ಆಡಳಿತವನ್ನು ಮಾಡುತ್ತಿರುವ ಅನ್ಯ ರಾಷ್ಟ್ರಗಳು ಆ ಬಗ್ಗೆ ಸಂಯುಕ್ತ ರಾಷ್ಟ್ರಸಂಘಕ್ಕೆ ಸಲ್ಲಿಸುವ ಎಲ್ಲ ಸಮಾಚಾರ ವನ್ನು ಆ ಕಾರಣಕ್ಕಾಗಿಯೆ ನಿಯಮಿಸಿದ ಒಂದು ಉಪಸಮಿತಿಯ ಮುಖಾಂತರ ಸಾಮಾನ್ಯ ಸಭೆಯು ಸ್ವೀಕರಿಸುತ್ತದೆ. ಮತ್ತು ಪ್ರಧಾನ ಕಾರ್ಯದರ್ಶಿಯು ಆ ವಿಷಯವಾಗಿ ಮಂಡಿಸಿದ ಎಲ್ಲ ಸಾರಾಂಶವನ್ನು ವಿಶಿಷ್ಟ ಭಾಗಗಳನ್ನು ಪರಾಮರ್ಶಿಸುತ್ತಾನೆ.

ಸಂಯುಕ್ತ ರಾಷ್ಟ್ರಸಂಘಕ್ಕೆ ವೆಚ್ಚದ ಸಲುವಾಗಿ ಪ್ರತಿಯೊಂದು ಸದಸ್ಯ ರಾಷ್ಟ್ರವು ವಂತಿಗೆಯನ್ನು ಕೊಡುತ್ತಿದೆಯಷ್ಟೆ! ಆ ಹಣದ ಆಯವ್ಯಯ ಪತ್ರಿಕೆಯನ್ನು ಸಾಮಾನ್ಯ ಸಭೆಯು ಮಂಡಿಸುತ್ತದೆ. ಮತ್ತು ತನ್ಮೂಲಕ ಪ್ರತಿ ಯೊಂದು ರಾಷ್ಟ್ರಕ್ಕೆ ಸಹಾಯಧನವೆಂದು ಕೊಡಮಾಡುವ ಮತ್ತು ವಿಶಿಷ್ಟ ಅಂಗ ಸಂಸ್ಥೆಗಳಿಗೆ ಧನವನ್ನು ಪೂರೈಸುವ ಹೊಣೆಯನ್ನು ಹೊತ್ತಿರುತ್ತದೆ. ಆ ಆ ಅಂಗೋಪಾಂಗಗಳು ನಿಯಮಗಳಿಗನುಸಾರವಾಗಿ ವೆಚ್ಚವನ್ನು ನಡೆಯಿಸಿಕೊಂಡು ಹೋಗುವಂತೆ ನೋಡುವ ಮತ್ತು ಆ ಸಂಸ್ಥೆಗಳ ಆಯ-ವ್ಯಯ ಪತ್ರಿಕೆಗಳನ್ನು ಪರಿಶೀಲಿಸುವ ಅಧಿಕಾರವು ಸಾಮಾನ್ಯ ಸಭೆಗೆ ಇರುತ್ತದೆ.

ಸಾಮಾನ್ಯ ಸಭೆಯು ಪ್ರತಿವರ್ಷದ ಸಪ್ಟಂಬರ ತಿಂಗಳ ಮೂರನೆಯ ಮಂಗಳವಾರ ವಾಡಿಕೆಯ ಅಧಿವೇಶನಕ್ಕಾಗಿ ಸೇರುತ್ತದೆ. ಅದರ ವಿಶಿಷ್ಟ ಅಧಿವೇಶನಗಳನ್ನು ಕ್ಷೇಮಮಂಡಲದ ಬಿನ್ನಹದ ಮೇರೆಗೆ, ಇಲ್ಲವೆ ಬಹು ಸಂಖ್ಯಾಕ ಸದಸ್ಯ ರಾಷ್ಟ್ರಗಳ ಅಭಿಪ್ರಾಯದಂತೆ ಅಥವಾ ಸದಸ್ಯ ರಾಷ್ಟ್ರಗಳ ಬಹುಮತವನ್ನು ಪಡೆದ ಒಂದು ರಾಷ್ಟ್ರದ ಕರೆಗೆ ಅನುಸರಿಸಿ, ಜರುಗಿಸ ಬಹುದು. ಯಾವುದೊಂದು ಅಪಾಯದ ಸಂದರ್ಭದಲ್ಲಿ, ಕ್ಷೇಮಮಂಡಲದ ಸರ್ವಾನುಮತವು ಸಾಮಾನ್ಯಸಭೆಯ ಅಧಿವೇಶನವನ್ನು ಸೇರಿಸಲಿಕ್ಕೆಂದು ದೊರೆಯದಿದ್ದಲ್ಲಿ, ಕೇವಲ ಇಪ್ಪತ್ತುನಾಲ್ಕು ಗಂಟೆಯ ಅವಧಿಯಲ್ಲಿ ಕ್ಷೇಮ ಮಂಡಲದ ಏಳು ಸದಸ್ಯರು ಸೂಚಿಸಿದರೆ ಇಲ್ಲವೆ ಸಂಯುಕ್ತ ರಾಷ್ಟ್ರಸಂಘದ ಸದಸ್ಯರಲ್ಲಿ ಬಹು ಸಂಖ್ಯಾಕರು ಬಯಸಿದರೆ, ಇಂತಹ ವಿಶಿಷ್ಟ ಅಧಿವೇಶನ

ಗಳನ್ನು ಕರೆಯಬೇಕಾಗುವದು. ಇದೊಂದು ಸಾಮಾನ್ಯಸಭೆಯ ವೈಶಿಷ್ಟ್ಯವನ್ನು ಮತ್ತು ಪ್ರಜಾಕಲ್ಯಾಣದ ದೃಷ್ಟಿ ತೀಕ್ಷ್ಣವಾಗಿರುವದನ್ನು ತೋರಿಸುವ ಅಂಶವಾಗಿದೆ.

ತನ್ನ ಅಧ್ಯಕ್ಷ ಮತ್ತು ಉಪಾಧ್ಯಕ್ಷನನ್ನು ಚುನಾಯಿಸಿಕೊಳ್ಳುವ ಅಧಿಕಾರವು ಸಾಮಾನ್ಯಸಭೆಗೆ ಇರುತ್ತದೆ. ಆ ಸಂಬಂಧವಾಗಿ ಅವಶ್ಯಕವಾಗಿದ್ದ ನಿಬಂಧನೆಗಳನ್ನು ಕೂಡ, ಸಾಮಾನ್ಯಸಭೆಯೆ ಮಾಡಿಕೊಳ್ಳಬಹುದು. ಅದರಂತೆಯೆ ಸಂಯುಕ್ತ ರಾಷ್ಟ್ರಸಂಘದ ಆದರ್ಶ ಮತ್ತು ಉದ್ದೇಶಗಳನ್ನು ಈಡೇರಿಸಿಕೊಳ್ಳುವದಕ್ಕಾಗಿ ಯಾವುದೊಂದು ಅಂಗಸಂಸ್ಥೆ ಇಲ್ಲವೆ ಉಪಾಂಗಗಳನ್ನು ಸ್ಥಾಪಿಸಿಕೊಳ್ಳಬೇಕು ಎಂದು ತೋಚಿದರೆ, ಹಾಗೆ ಮಾಡುವ ಹೊಣೆಯು ಕೂಡ ಸಾಮಾನ್ಯಸಭೆಯದೆ ಆಗಿರುತ್ತದೆ.

ಸಾಮಾನ್ಯಸಭೆಯ ಕಾರ್ಯಾಚರಣೆಯು ಸಾಧಾರಣವಾಗಿ ಉಪಸಮಿತಿಗಳ ಮುಖಾಂತರ ನಡೆಯುತ್ತದೆ.. ಇಂತಹ ಮುಖ್ಯ ಉಪಸಮಿತಿಗಳಲ್ಲಿ ನಾಲ್ಕು ವಿಧ ಇರುತ್ತವೆ. ಮೊದಲನೆಯದಾಗಿ ಪ್ರಮುಖಸಮಿತಿ, ಎರಡನೆಯದಾಗಿ ವಿಧಾನಸಮಿತಿ, ಮೂರನೆಯದಾಗಿ ಸಿದ್ಧಸಮಿತಿ ಮತ್ತು ಕಡೆಯದಾಗಿ ವಿಶಿಷ್ಟಸಮಿತಿ. ಪ್ರಮುಖಸಮಿತಿಯಲ್ಲಿ ಸಾಮಾನ್ಯಸಭೆಯಲ್ಲಿ ಚರ್ಚೆಗೆ ಬರಬಹುದಾದ ವಿಷಯಗಳ ಸಮಾಲೋಚನೆಯಾಗುತ್ತದೆ. ಮತ್ತು ಸಾಮಾನ್ಯಸಭೆಯ ಅಧಿವೇಶನಕ್ಕಾಗಿ ಪ್ರಮುಖಸಮಿತಿಗಳು ಕಾರ್ಯಸೂಚಿಯನ್ನು ಗೊತ್ತುಪಡಿಸುತ್ತವೆ. ಪ್ರಮುಖಸಮಿತಿಗಳಲ್ಲಿ ರಾಜಕೀಯ ಮತ್ತು ರಕ್ಷಣೆಯ ವಿಷಯಗಳ ವಿಚಾರಕ್ಕಾಗಿ ಮೊದಲನೆಯ ಸಮಿತಿ, ಆರ್ಥಿಕ ಮತ್ತು ವಿತ್ತೀಯ ವಿಷಯಗಳ ಸಲುವಾಗಿ ಎರಡನೆಯ ಸಮಿತಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ವಿಚಾರಕ್ಕಾಗಿ ಮೂರನೆಯ ಸಮಿತಿ, ವಿಶ್ವಸ್ತ ವಿಷಯಗಳ ಸಲುವಾಗಿ ನಾಲ್ಕನೆಯ ಸಮಿತಿ, ಆಡಳಿತ ಮತ್ತು ಆಯವ್ಯಯಪತ್ರಿಕೆಗಳಿಗಾಗಿ ಐದನೆಯ ಸಮಿತಿ ಮತ್ತು ಶಾಸನಸಂಬಂಧಕ್ಕಾಗಿ ಆರನೆಯ ಸಮಿತಿ ಹೀಗೆ ಆರು ಸಮಿತಿಗಳು, ಕಾರ್ಯ ಮಾಡುತ್ತಿವೆ.

ವಿಧಾನಸಮಿತಿಗಳು ಸಾಮಾನ್ಯಸಭೆಯ ಕಾರ್ಯವನ್ನು ನಿಯೋಜಿಸುವ ಮತ್ತು ನಡೆಯಿಸುವದಕ್ಕಾಗಿ ನಿಯುಕ್ತವಾಗಿರುತ್ತವೆ. ಇವುಗಳಲ್ಲಿ ಅಧ್ಯಕ್ಷ

ಮತ್ತು ಸಾಮಾನ್ಯ ಸಭೆಯ ಏಳು ಜನ ಉಪಾಧ್ಯಕ್ಷರನ್ನೊಳಗೊಂಡ ಒಂದು ಸಾಮಾನ್ಯಸಮಿತಿ ಮತ್ತು ಹತ್ತು ಜನ ಸದಸ್ಯರಿರುವ ಅಧಿಕಾರಸಮಿತಿ ಎಂಬುವು ಮುಖ್ಯವಾಗಿರುತ್ತವೆ. ಪ್ರತಿಯೊಂದು ಸಭೆಯ ಅಧಿವೇಶನದಲ್ಲಿ ನಡೆಯಬಹುದಾದ ಚರ್ಚೆಗೆ ವಿಧಾನವನ್ನು ಹಾಕಿಕೊಡುವಂತಹ ಹೊಣೆಗಾರಿಕೆಯು, ಮತ್ತು ವಿಶಿಷ್ಟ ಸ್ವರೂಪದ ಕಾರ್ಯವು ಈ ಸಮಿತಿಗಳದಾಗಿದೆ. ಇವಲ್ಲದೆ ಸಾಮಾನ್ಯ ಸಭೆಯ ಕಾರ್ಯದಲ್ಲಿ ಸಹಾಯವನ್ನು ಮಾಡುವದಕ್ಕೆಂದು ಮೊದಲಿಗೆ ಒಂದು ತತ್ಕಾಲ ಸಮಿತಿಯನ್ನು ನಿಯಮಿಸಲಾಗಿತ್ತು; ಅದು ಕೇವಲ ತಾತ್ಪೂರ್ತಿಕವಾಗಿ ನಿರ್ಮಿಸಲ್ಪಟ್ಟ ಅಣುಸಭೆಯಾಗಿದ್ದರೂ ಮುಂದೆ ಅನಿಯಮಿತಕಾಲ ಪರ್ಯಂತ ನಡೆದಿರುವ ಒಂದು ಅಂಗ ಸಂಸ್ಥೆಯಾಗಿರುತ್ತದೆ. ಸಾಮಾನ್ಯ ಸಭೆಗೆ ಪ್ರತಿಯೊಂದು ಸದಸ್ಯ ರಾಷ್ಟ್ರದ ಅಯ್ದುದು ಜನ ಪ್ರತಿನಿಧಿಗಳಿರುತ್ತಿದ್ದರೆ ಇದಕ್ಕೆ ಒಬ್ಬರು ಮಾತ್ರ ಇರುವದುಂಟು. ಇದರಂತೆಯೆ ಶಾಶ್ವತವಾಗಿ ಕಾರ್ಯಮಾಡುತ್ತಿರುವ ಸಾಮಾನ್ಯ ಸಭೆಯ ಇತರ ಉಪಾಂಗಗಳಲ್ಲಿ ಅಂತರ್ರಾಷ್ಟ್ರೀಯ ಶಾಸನಾಯೋಗ ಮತ್ತು ಶಾಂತಿ ಪರಿಶೀಲನ ಸಮಿತಿಯಂತಹ ವಿಭಾಗಗಳೂ ಇರುತ್ತವೆ. ಮೊದಲನೆಯದರಲ್ಲಿ ಹದಿನೈದು ಜನ ಸದಸ್ಯರು ಇರುತ್ತಿದ್ದರೆ, ಎರಡನೆಯದರಲ್ಲಿ ಹದಿನಾಲ್ಕು ಜನರು ಸದಸ್ಯರಾಗಿರುವದು ವಾಡಿಕೆಯಾಗಿದೆ.

ಸಾಮಾನ್ಯ ಸಭೆಯು ಸಂಯುಕ್ತ ರಾಷ್ಟ್ರ ಸಂಘದ ಹಿರಿಯ ಅಂಗವಾಗಿರುವದರಿಂದ ಅದಕ್ಕೆ ಸಾರ್ವಭೌಮ ಅಧಿಕಾರವಿರುವದು ಸ್ವಾಭಾವಿಕವೆ. ಕ್ಷೇಮ ಮಂಡಲದಲ್ಲಿ ನಿಯೋಜಿತರಾಗಬೇಕಾದ ಸದಸ್ಯರನ್ನು ಆರಿಸುವದು, ಆರ್ಥಿಕ ಮತ್ತು ಸಾಮಾಜಿಕ ಸಮಿತಿಯ ಸದಸ್ಯರನ್ನು ಚುನಾಯಿಸುವದು ಮತ್ತು ವಿಶ್ವಸ್ತ ಸಮಿತಿಯನ್ನು ನಿರ್ವಾಚಿಸುವದು ಸಾಮಾನ್ಯ ಸಭೆಯ ಕಾರ್ಯವಾಗಿದ್ದಂತೆಯೆ ಕ್ಷೇಮಮಂಡಲದ ಸಿಫಾರಸಿನ ಮೇರೆಗೆ ಸಂಯುಕ್ತ ರಾಷ್ಟ್ರ ಸಂಘದ ಪ್ರಧಾನ ಕಾರ್ಯದರ್ಶಿಯನ್ನು ನೇಮಿಸುವ ಅಧಿಕಾರವೂ ಅದರದೇ ಇರುತ್ತದೆ. ಸಾಮಾನ್ಯ ಸಭೆ ಮತ್ತು ಕ್ಷೇಮಮಂಡಲಗಳು ಪ್ರತ್ಯೇಕವಾಗಿ ಅಭಿಮತಗಳನ್ನು ನೀಡಿ ಅಂತರ್ರಾಷ್ಟ್ರೀಯ ನ್ಯಾಯಮಂಡಲದ ನ್ಯಾಯಮೂರ್ತಿಗಳನ್ನು ಚುನಾಯಿಸಿ, ನೇಮಿಸುತ್ತವೆ.

ಇತ್ತ ಸಾಮಾನ್ಯಸಭೆಯು ಕಾಲಕಾಲಕ್ಕೆ ಕ್ಷೇಮಮಂಡಲ ಮತ್ತು ಇತರ ವಿಭಾಗಗಳಿಂದ ಸಾದರಪೂರ್ವಕ ಸಮರ್ಪಿಸಲ್ಪಡುವ ವಾರ್ಷಿಕ ಇಲ್ಲವೆ ವಿಶಿಷ್ಟ ವರದಿಗಳನ್ನು ಪರಿಶೀಲಿಸುತ್ತದೆ. ಮತ್ತು ಪ್ರಧಾನಕಾರ್ಯದರ್ಶಿಯು ಇಡಿಯ ಸಂಯುಕ್ತ ರಾಷ್ಟ್ರಸಂಘದ, ಕಾರ್ಯಕಲಾಪಗಳ ವಿಷಯವಾಗಿ ಸಲ್ಲಿಸುವ ವರದಿಯನ್ನು ಅವಲೋಕಿಸುತ್ತದೆ. ಪ್ರತಿಯೊಂದು ನ್ಯಾಯದ, ಶಾಸನ ವಿಷಯಕ, ಇಲ್ಲವೆ ಶಾಂತಿಗೆ ಸಂಬಂಧಿಸಿದ ವಿಷಯವನ್ನು ಆ ಆ ಸಂಸ್ಥೆಯ ಸೂಚನೆ ಮತ್ತು ಬಿನ್ನಹಗಳ ಮೇರೆಗೆ ಯೋಚಿಸಿ, ತಕ್ಕ ನಿರ್ಣಯಗಳನ್ನು ಕೈಕೊಳ್ಳುವ ಹೊಣೆ ಸಾಮಾನ್ಯಸಭೆಯದೆ ಆಗಿದೆ. ಇಂತು ಸಂಯುಕ್ತ ರಾಷ್ಟ್ರಸಂಘದ ಪ್ರತಿಯೊಂದು ಅಂಗ-ಉಪಾಂಗಗಳೊಡನೆ ನಿಕಟ ಸಂಪರ್ಕವನ್ನಿಟ್ಟುಕೊಂಡ ಸಾಮಾನ್ಯಸಭೆಯು ಅದರ ಕಾರ್ಯವನ್ನೆಲ್ಲ ಸುಗಮಗೊಳಿಸುತ್ತದೆ.

## ಕ್ಷೇಮಮಂಡಳ

ಕ್ಷೇಮಮಂಡಲದ ರಚನೆ, ಕಾರ್ಯ ಮತ್ತು ಸ್ಥಾನಗಳು ವಿಶಿಷ್ಟವಾಗಿವೆ. ಸಂಯುಕ್ತ ರಾಷ್ಟ್ರಸಂಘದ ರಾಷ್ಟ್ರಗಳು ಹನ್ನೊಂದು ಜನ ತಮ್ಮ ಪ್ರತಿನಿಧಿಗಳನ್ನು ಈ ಮಂಡಲದ ಮೇಲೆ ಸದಸ್ಯರೆಂದು ಕಳಿಸುತ್ತವೆ. ಈ ಹನ್ನೊಂದು ಜನರಲ್ಲಿ ಚೀನ, ಫ್ರಾನ್ಸ್, ರಶಿಯ, ಬ್ರಿಟನ್ ಮತ್ತು ಅಮೇರಿಕೆಯ ಸಂಯುಕ್ತ ರಾಷ್ಟ್ರ, ಈ ಅಯ್ದು ಜನರು ಶಾಶ್ವತಸ್ಥಾನವನ್ನು ಪಡೆಯುತ್ತಾರೆ. ಇನ್ನಾರುಜನ ಪ್ರತಿನಿಧಿಗಳನ್ನು ಅನ್ಯ ರಾಷ್ಟ್ರಗಳ ಸಾಮರ್ಥ್ಯ, ಶಾಂತಿಯ ಸ್ಥಾಪನೆಯ ಬಗ್ಗೆ ಗೈದ ಸೇವೆ, ಮತ್ತು ಭೌಗೋಲಿಕ ಪ್ರಾತಿನಿಧ್ಯ ಮೊದಲಾದ ಅಂಶಗಳನ್ನು ಪರಿಶೀಲಿಸಿ ಆ ಮೇರೆಗೆ ಚುನಾಯಿಸುವದುಂಟು. ಹೀಗೆ ಚುನಾಯಿತರಾಗುವ ಪ್ರತಿನಿಧಿಗಳ ಕಾರ್ಯದ ಅವಧಿಯು ಎರಡು ವರ್ಷ ಇರುತ್ತದೆ. ಮತ್ತು ಆ ಅವಧಿಯು ಮುಗಿದ ಕೂಡಲೆ ಅದೇ ರಾಷ್ಟ್ರವು ತನ್ನ ಪ್ರತಿನಿಧಿಯನ್ನು ಆಗಲೆ ಸ್ಪರ್ಧೆಗೆ ನಿಲ್ಲಿಸಲಾರದು. ಆದರೂ ಸದಸ್ಯರಲ್ಲದ ರಾಷ್ಟ್ರಗಳ ಪ್ರತಿನಿಧಿಗಳು ಕೂಡ ಮತಾಧಿಕಾರವನ್ನು ಪಡೆಯದೆ ಮಂಡಲದ ಚರ್ಚೆಯಲ್ಲಿ ಭಾಗವಹಿಸಬಹುದು. ಮತ್ತು ಯಾವುದೊಂದು ಕಲಹದಲ್ಲಿ ಪಕ್ಷವನ್ನು ವಹಿಸಿದ ರಾಷ್ಟ್ರವನ್ನು ಕೂಡ ತನ್ನ ವಾದವನ್ನು ಮಂಡಿಸಲಿಕ್ಕೆಂದು ಮಂಡಲದ ಸಭೆಯಲ್ಲಿ ಆಮಂತ್ರಿಸುವ ನಿಯಮಗಳಿದ್ದ ಮೂಲಕ ಪ್ರಪಂಚದ ಶಾಂತಿಗೆ ಸಂಬಂಧಿಸಿದ

ಎಲ್ಲ ವಿಷಯಗಳ ಕೂಲಂಕಷ ವಾದವಿವಾದವು ಈ ಸಭೆಯ ಅಧಿವೇಶನದಲ್ಲಿ ಜರುಗುವದಕ್ಕೆ ಅವಕಾಶವಿರುವದೊಂದು ವೈಶಿಷ್ಟ್ಯವಾಗಿದೆ.

ಸಂಯುಕ್ತ ರಾಷ್ಟ್ರಸಂಘದ ಆದರ್ಶವನ್ನು ಸಾಧಿಸಲಿಕ್ಕೆ ಮತ್ತು ಅದರ ಪರಮಧ್ಯೇಯವೆಂದೆನಿಸಿದ ಶಾಂತಿಯನ್ನು ಕಾಪಾಡುವ ಹೊಣೆಯನ್ನು ವಹಿಸಲಿಕ್ಕೆ ಕ್ಷೇಮಮಂಡಲವೇ ಬಾಧ್ಯವಾಗಿರುತ್ತದೆ. ಮತ್ತು ಅದು ಕೈಕೊಂಡ ನಿರ್ಣಯ ಮತ್ತು ಕಾರ್ಯ ಎಲ್ಲ ರಾಷ್ಟ್ರಗಳ ಪರವಾಗಿ ನಡೆಸುವ ಅಧಿಕಾರ ಈ ಮಂಡಲಕ್ಕಿರುತ್ತದೆ. ಪ್ರತಿಯೊಂದು ಕಲಹದ, ಭಿನ್ನಾಭಿಪ್ರಾಯದ ಇಲ್ಲವೆ ಕದನದ ಪ್ರಸಂಗವನ್ನು ವಿವರವಾಗಿ ತೂಗಿನೋಡಿ, ಶಾಂತಿಪೂರ್ವಕ ಅವುಗಳ ಪರಿಹಾರವನ್ನು ಮಾಡಿಕೊಳ್ಳುವಂತೆ ಸಂಬಂಧಪಟ್ಟ ರಾಷ್ಟ್ರಗಳಿಗೆ ಮಂಡಲವು ಮಾರ್ಗವನ್ನು ತೋರಿಸುತ್ತದೆ; ಉಪಾಯವನ್ನು ಸೂಚಿಸುತ್ತದೆ; ವಿಧಾನವನ್ನು ನಿರ್ಧರಿಸುತ್ತದೆ. ಇಷ್ಟೇ ಅಲ್ಲದೆ ಸಮಯ ಬಂದಾಗ ಸೇನೆಯ ಉಪಯೋಗವನ್ನುಕೂಡ ಮಾಡಿ, ಶಾಂತತೆಯನ್ನು ಸಂರಕ್ಷಿಸುವ ಭಾರವನ್ನು ಕ್ಷೇಮಮಂಡಲವು ಹೊತ್ತುಕೊಂಡಿರುತ್ತದೆ. ಇಂತಹ ಸಂದರ್ಭಗಳಲ್ಲಿ ಆವಶ್ಯಕವಿದ್ದ ಸೇನಾಬಲ, ಇತರ ಸೌಕರ್ಯಗಳನ್ನು ಮತ್ತು ಸಕಲ ಸಲಕರಣೆಗಳನ್ನು ಒದಗಿಸಿಕೊಡಲು, ಸಂಯುಕ್ತರಾಷ್ಟ್ರ ಸಂಘದ ಅಧಿಲೇಖನದ ಮೇರೆಗೆ ಎಲ್ಲ ರಾಷ್ಟ್ರಗಳು ಒಪ್ಪಿಕೊಂಡಿರುತ್ತವೆ. ಅದೇ ಮೇರೆಗೆ ಕ್ಷೇಮಮಂಡಲವು ತನ್ನ ಸೇವಾಸಮಿತಿಯ ಸಹಾಯದಿಂದ ಆ ಆ ಕಾರ್ಯವನ್ನು ನಿರ್ಣಯಿಸುವ ಅಧಿಕಾರವನ್ನು ಪಡೆದಿರುತ್ತದೆ. ಇಂತಹ ಕಾರ್ಯ ಮತ್ತು ನಿರ್ಧಾರಗಳನ್ನು ಕೈಕೊಳ್ಳುವ ವರೆಗೆ ಶಾಶ್ವತ ಪ್ರತಿನಿಧಿಗಳುಳ್ಳ ರಾಷ್ಟ್ರಪಂಚಕವು ತಾತ್ಪೂರ್ತಿಕ ಸಲಹೆಗಳನ್ನು ನೀಡಬಹುದು.

ಆದರೆ ಪ್ರತಿಯೊಂದು ರಾಷ್ಟ್ರವು, ತನ್ನ ಮೇಲೆ ಆಕ್ರಮಣವಾದ ಪ್ರಸಂಗದಲ್ಲಿ ಆತ್ಮರಕ್ಷಣೆಯ ಉಪಾಯಗಳನ್ನು ಯೋಜಿಸಿಕೊಳ್ಳುವ ಸ್ವಾತಂತ್ರ್ಯವುಳ್ಳದ್ದಾಗಿದೆ, ಅನಂತರ ತಾನು ಕೈಕೊಂಡ ಕಾರ್ಯದ ವರದಿಯನ್ನು ಕ್ಷೇಮಮಂಡಲಕ್ಕೆ ಒಪ್ಪಿಸಿ, ಮುಂದಿನ ಸಲಹೆಯನ್ನು ಪಡೆಯುವದು ಅದರ ಕರ್ತವ್ಯವಾಗಿರುತ್ತದೆ. ಇತ್ತ ಒಂದೊಂದು ರಾಷ್ಟ್ರದಂತೆ ಶಾಂತಿಸ್ಥಾಪನೆಯ ಕಾರ್ಯವನ್ನು ಸಂಬಂಧಪಟ್ಟ ಹಲವು ರಾಷ್ಟ್ರಗಳಾಗಲಿ, ಒಂದೇ ಪ್ರದೇಶದೊಳಗಿರುವ ರಾಷ್ಟ್ರಗಳಾಗಲಿ ಮಾಡಿಕೊಳ್ಳಬಹುದೆಂಬ ಸೌಕ-

ರ್ಯವೂ ಕ್ಷೇಮಮಂಡಲದಿಂದ ದೊರೆಕಿರುತ್ತದೆ. ಆ ಮೇರೆಗೆ ಪ್ರಾದೇಶಿಕ ಪ್ರಯತ್ನಗಳು ನಡೆದಾಗ್ಗೆ ಮಂಡಲವು ಆ ಕಾರ್ಯವನ್ನು ಪರಿಶೀಲಿಸಿ ಅದಕ್ಕೆ ತನ್ನ ಅಧಿಕಾರದ ಮುದ್ರೆಯನ್ನು ಹಾಕಬಹುದು. ಅದರಂತೆಯೆ ಯಾವು-ದೊಂದು ರಾಷ್ಟ್ರ ಇಲ್ಲವೆ ಪ್ರದೇಶವು ಯುದ್ಧದ ದೃಷ್ಟಿಯಿಂದ ಮಹತ್ವದ್ದು ಎಂದು ತಿಳಿದಾಗ, ಆ ಮೇರೆಗೆ ಘೋಷಣೆಯನ್ನು ಮಾಡುವ ಮತ್ತು ಸಂಯುಕ್ತ ರಾಷ್ಟ್ರಸಂಘದ ಪ್ರತಿಯೊಂದು ಸದಸ್ಯರಾಷ್ಟ್ರವು ವಾಡಿಕೆಯೆಂದು ಇಟ್ಟುಕೊಳ್ಳಬಹುದಾದ ಸೇನಾಬಲವನ್ನು ನಿರ್ಣಯಿಸುವ ಅಧಿಕಾರವು ಮಂಡಲಕ್ಕಿರುತ್ತದೆ.

ಕ್ಷೇಮಮಂಡಲದ ಸಭೆಗಳಿಗಾಗಿ ಸ್ವೀಕೃತವಾದ ಮತದಾನ ಪದ್ಧತಿಯು ಇಡಿಯ ಸಂಯುಕ್ತರಾಷ್ಟ್ರ ಸಂಘದ ಅಸ್ತಿತ್ವವನ್ನೇ ಕದಡುವಂತಹದಾಗಿರುತ್ತದೆ. ಮಂಡಲದ ಪ್ರತಿಯೊಬ್ಬ ಸದಸ್ಯನಿಗೆ ಒಂದು ಮತವಿರುವದೇನೋ ನಿಜ; ಮತ್ತು ಸಾಮಾನ್ಯ ವಿಷಯಗಳಲ್ಲಿ ನಿರ್ಣಯಗಳು ಬಹುಮತದಿಂದ; ಮತ್ತು ಮಹತ್ವದ ವಿಷಯಗಳ ನಿರ್ಣಯಗಳು ಶಾಶ್ವತ ಪ್ರತಿನಿಧಿ ಪಂಚರಮತಗಳನ್ನು ಸೇರಿಸಿ ಏಳು ಮತಗಳಿಂದ ಅಂಗೀಕೃತವಾಗಿರಬೇಕು. ಎಂಬ ಪದ್ಧತಿಯನ್ನು ಹಾಕಿಕೊಂಡಿರುವರು. ಆದರೆ ಈ ಪದ್ಧತಿಯ ಪ್ರತ್ಯಕ್ಷ ಆಚರಣೆಯು ಮಾತ್ರ ಶಾಶ್ವತ ಪ್ರತಿನಿಧಿಗಳಲ್ಲಿ ಒಬ್ಬರ ವಿಶೇಷಾಧಿಕಾರಕ್ಕೆ ಸಂಯುಕ್ತರಾಷ್ಟ್ರ ಸಂಘದ ಪರಿಣಾಮವು ಒಳಪಟ್ಟಿರುವದು ಆಶ್ಚರ್ಯವೂ ಅನಾಹುತವೂ ಆದುದಾಗಿದೆ. ಯಾವುದೊಂದು ಮಹತ್ವದ ವಿಷಯವಾಗಿ ಶಾಶ್ವತ ಸದಸ್ಯನೊಬ್ಬನು ತನ್ನ ಮತವನ್ನು ನಿರಾಕರಿಸಿದರೆ ಆ ವಿಷಯವು ಅಸ್ವೀಕೃತವಾಗಿಯೆ ಉಳಿಯುವದು. ಸಾಮಾನ್ಯವಾಗಿ ಒಂದು ಚರ್ಚೆ ನಡೆದ ಸಭೆಯಲ್ಲಿ ಶಾಶ್ವತ ಸದಸ್ಯರಲ್ಲಿ ಒಬ್ಬರು ಹಾಜರಾಗಿರದಿದ್ದರೆ ಅವರ ಮತ ಆ ವಿಷಯವಾಗಿ ನಕಾರಾತ್ಮಕವಾದುದು ಎಂದು ಸಾಗಿಸಲ್ಪಡುವದಿಲ್ಲ. ಆದರೂ ವಿಶೇಷಾಧಿಕಾರವು ಕ್ಷೇಮಮಂಡಲದ ಮತ್ತು ತನ್ಮೂಲಕ ಸಂಯುಕ್ತ ರಾಷ್ಟ್ರ ಸಂಘದ ನಿಯಮಾವಳಿಯಲ್ಲಿ ಹೆಚ್ಚು ಚರ್ಚಾಸ್ಪದವಾದ ಸಂಗತಿಯಾಗಿದೆ.

ಕ್ಷೇಮಮಂಡಲದ ಅಧಿವೇಶನವು ನಿರಂತರವಾಗಿ ನಡೆದಿರುತ್ತದೆ. ಮತ್ತು ತಿಂಗಳಿಗೊಬ್ಬರಂತೆ, ಅಕ್ಷರಾನುಕ್ರಮದಲ್ಲಿ ಅದರ ಸದಸ್ಯರು ಅಧ್ಯಕ್ಷತೆಯನ್ನು

ವಹಿಸುತ್ತಾರೆ. ಮಂಡಲವು ಕಾಲಕಾಲಕ್ಕೆ ಉಚಿತವಾದ ಉಪಸಮಿತಿಗಳನ್ನು ರಚಿಸಿಕೊಳ್ಳುತ್ತಿದ್ದರೂ ಈಗಿರುವ ಸೇನಾಸಮಿತಿ, ನಿಶ್ಯಸ್ತ್ರೀಕರಣ ಸಮಿತಿ ಮತ್ತು ಉದ್ದಿಷ್ಟಸಮಿತಿಗಳು ಪ್ರಮುಖವಾಗಿವೆ. ನಿಶ್ಯಸ್ತ್ರಸಮಿತಿಯ ಸಹಾಯವನ್ನು ಅದರಕಾರ್ಯಕ್ಕಾಗಿ ಪಡೆಯುವ, ಅಂತರ್ರಾಷ್ಟ್ರೀಯ ನ್ಯಾಯಮಂದಿರದ ನ್ಯಾಯಮೂರ್ತಿಗಳನ್ನು ನಿಯಮಿಸುವದರಲ್ಲಿ ಸಹಕಾರವನ್ನು ನೀಡುವ, ವಿವಿಧ ಅಂತರ್ರಾಷ್ಟ್ರೀಯ ಸಂಧಿಗಳ ವಿಷಯವಾಗಿ ಅಭಿಪ್ರಾಯವನ್ನು ವ್ಯಕ್ತಗೊಳಿಸುವ, ಮತ್ತು ಕಾರ್ಯವನ್ನು ಕೈಕೊಳ್ಳುವ, ಹಾಗೂ ಸಾಮಾನ್ಯಸಭೆಯ ಸಹಕಾರದಿಂದ ಪ್ರಧಾನಕಾರ್ಯದರ್ಶಿಯನ್ನು ನೇಮಕ ಗೊಳಿಸುವ ಅಧಿಕಾರವು ಕ್ಷೇಮಮಂಡಲಕ್ಕಿರುತ್ತದೆ.

**ಆರ್ಥಿಕ–ಸಾಮಾಜಿಕ ಸಮಿತಿ**

ಆರ್ಥಿಕ ಮತ್ತು ಸಾಮಾಜಿಕ ಸಮಿತಿಯಸದಸ್ಯರು ಹದಿನೆಂಟು ಜನರು. ಪ್ರತಿವರ್ಷ ಮುವ್ವರು ಆಯ್ಕೆ ಹೊಂದಿ, ಮೂರು ವರ್ಷಗಳ ವರೆಗೆ ಸದಸ್ಯರಾಗಿರುತ್ತಾರೆ. ಈ ಆಯ್ಕೆಯು ಸಾಮಾನ್ಯಸಭೆಯ ಮೂಲಕ ಆಗುತ್ತದೆ. ಒಮ್ಮೆ ನಿವೃತ್ತ ಹೊಂದಿದ ಪ್ರತಿನಿಧಿಯು ಕೂಡಲೆ ಮತ್ತೆ ಚುನಾವಣೆಗಾಗಿ ಸ್ಪರ್ಧಿಸಬಹುದು. ಈ ಸಮಿತಿಯ ಸಭೆಯಲ್ಲಿ ಪ್ರತಿಯೊಬ್ಬರಿಗೆ ಒಂದೊಂದು ಮತವಿದ್ದು, ನಿರ್ಣಯಗಳು ಬಹುಮತದ ಆಧಾರದ ಮೇಲೆ ಸ್ವೀಕೃತವಾಗುತ್ತವೆ. ವರ್ಷವೊಂದರಲ್ಲಿ ಸಮಿತಿಯ ಅಧಿವೇಶನಗಳು ಎರಡಾದರೂ ಜರುಗುತ್ತವೆ. ತನ್ನ ಕಾರ್ಯವು ಸುಗಮವಾಗಿಯೂ ಫಲಪ್ರದವಾಗಿಯೂ ರೂಪುಗೊಳ್ಳುವದಕ್ಕಾಗಿ ಈ ಸಮಿತಿಯು ತಕ್ಕ ಉಪಸಮಿತಿ ಮತ್ತು ಆಯೋಗಗಳನ್ನು ನಿರ್ಮಿಸಿಕೊಳ್ಳುತ್ತದೆ. ಮತ್ತು ಪ್ರಾದೇಶಿಕವಾಗಿ ಇಂತಹ ಕಾರ್ಯವು ಹೆಚ್ಚು ಯಶಸ್ವಿಯಾಗುವದರಿಂದ ಆ ಮೇರೆಗೆ ಪ್ರಾದೇಶಿಕ ಆಯೋಗಗಳನ್ನು ನಿಯಮಿಸಿಕೊಳ್ಳುವದೂ ಸಮಿತಿಯ ವಾಡಿಕೆಯಾಗಿದೆ. ಇಂತಹ ಪ್ರಾದೇಶಿಕ ಆಯೋಗಗಳಲ್ಲಿ ಯುರೋಪದ ಆರ್ಥಿಕ ಆಯೋಗ, ಏಶಿಯಾ ಮತ್ತು ದೂರಪೂರ್ವದ ಆರ್ಥಿಕ ಆಯೋಗ ಇವು ಮುಖ್ಯವಾಗಿವೆ.

ಜೀವನಸ್ತರವನ್ನು ಹೆಚ್ಚಿಸುವದು, ಪೂರ್ಣ ಉದ್ಯೋಗವನ್ನು ಕಲ್ಪಿಸುವದು ಮಾನವೀಯ ಅಧಿಕಾರಗಳನ್ನು ಕಾಪಾಡುವದು, ಆರೋಗ್ಯವನ್ನು ರಕ್ಷಿಸುವದು

ಇವೇ ಮೊದಲಾದ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳು ಸಮಿತಿಯ ಧ್ಯೇಯವನ್ನೊಳಗೊಂಡಿವೆ. ಇಂತಹ ಕಾರ್ಯಕ್ಕಾಗಿ ತಕ್ಕ ಅಧ್ಯಯನ, ಸಂಶೋಧನ, ಮತ್ತು ಅವಲೋಕನವನ್ನು ಜರುಗಿಸುವದೂ ಸಮಿತಿಯ ಕಾರ್ಯಕ್ರಮದಲ್ಲಿರುವ ವಿಷಯವಾಗಿದೆ. ಆ ಮೇರೆಗೆ ಕಾರ್ಯ ಮಾಡುವ ಉಪಸಮಿತಿಗಳಲ್ಲಿ ಮಹಿಳಾವಿಭಾಗ, ಮಾನವೀಯ ಅಧಿಕಾರಸಮಿತಿ, ನಿಷಿದ್ಧ ಔಷಧಿಮಂಡಲ, ಸಂಚಾರ ಮತ್ತು ಸಂಪರ್ಕಸಮಿತಿ, ವಿತ್ತೀಯ ವಿಭಾಗ, ಸಂಖ್ಯಾಸಮಿತಿ, ಸಾಮಾಜಿಕಕ್ಷೇತ್ರ, ಜನಸಂಖ್ಯಾಮಂಡಲ ಗಳು ಗಮನಾರ್ಹವಾಗಿವೆ. ಇವಲ್ಲದೆ ಇನ್ನೂ ಎಷ್ಟೋ ಸಮಿತಿಗಳು ಕಾರ್ಯಗತ ಆಗುತ್ತಿದ್ದರೂ ಅವುಗಳಲ್ಲಿ ಪ್ರಾಮುಖ್ಯವಾಗಿ ಅಂತರ್ರಾಷ್ಟ್ರೀಯ ಶಿಶುರಕ್ಷಕ ನಿಧಿಯ ನಿರ್ದೇಶವನ್ನು ಮಾಡಬಹುದಾಗಿದೆ. ಇವುಗಳ ಹೊರ ತಾಗಿ ಸಮಿತಿಯ ಮನ್ನಣೆಯನ್ನು ಪಡೆದ ನೂರಾರು ಅಂತರ್ರಾಷ್ಟ್ರೀಯ ಸಭೆ ಗಳು ಮತ್ತು ಸಂಘಗಳು ಇದ್ದು, ಈ ಸಮಿತಿಯ ಉದ್ದೇಶಗಳನ್ನು ಸಾಧಿಸುವ ಕಾರ್ಯದಲ್ಲಿ ತೊಡಗಿರುತ್ತವೆ.

### ವಿಶ್ವಸ್ಥಮಂಡಲ

ವಿಶ್ವಸ್ಥಮಂಡಲದಲ್ಲಿ ವಿಶ್ವಸ್ತ ಪ್ರದೇಶಗಳ ಆಡಳಿತವಿದ್ದ ರಾಷ್ಟ್ರಗಳ ಪ್ರತಿನಿಧಿಗಳಷ್ಟೆ ಅಂತಹ ಆಡಳಿತವನ್ನು ನಡೆಯಿಸದಿರುವ ರಾಷ್ಟ್ರಗಳ ಪ್ರತಿನಿಧಿಗಳೂ ಸದಸ್ಯರಾಗಿರುತ್ತಾರೆ; ಮತ್ತು ಆ ಸಂಖ್ಯೆಯಲ್ಲಿ ವಿಶ್ವಸ್ತ ಆಡಳಿತವನ್ನು ನಡೆಯಿಸದೆ ಇರುವ ಕ್ಷೇಮಮಂಡಲದ ಸದಸ್ಯರು ಸ್ಥಿರಸದಸ್ಯ ರಾಗಿರುತ್ತಾರೆ. ಸಾಮಾನ್ಯಸಭೆಯ ಸಲಹೆಯ ಮೇರೆಗೆ ವಿಶ್ವಸ್ತ ಪ್ರದೇಶ ಗಳ ಆಡಳಿತದ ವಿಷಯವಾಗಿ ಕಾರ್ಯಕ್ರಮ ವರದಿಗಳೇ ಮೊದಲಾದ ವಿಷ ಯಗಳನ್ನು ಪರ್ಯಾಲೋಚಿಸುವದು ವಿಶ್ವಸ್ಥಮಂಡಲದ ಕಾರ್ಯವಾಗಿರು ತ್ತದೆ. ಈ ಸಮಿತಿಯ ಪ್ರತಿಯೊಬ್ಬ ಸದಸ್ಯನಿಗೆ ಒಂದರಂತೆ ಸಮಾನ ಮತವಿದ್ದು ಅದರ ಸಭೆಗಳು ವರ್ಷಕ್ಕೆ ಎರಡುಸಾರೆ. ಮತ್ತು ಅವಶ್ಯಕವೆನಿಸಿದರೆ ಸಾಮಾನ್ಯಸಭೆ, ಹಾಗು ಕ್ಷೇಮಮಂಡಲ ಇಲ್ಲವೆ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯ ಬಿನ್ನಹದ ಮೇರೆಗೆ ವಿಶೇಷಸಭೆ ಸೇರುತ್ತವೆ. ವರ್ಷಕ್ಕೊಬ್ಬರಂತೆ ಅಧ್ಯಕ್ಷರನ್ನು ಆರಿಸಿಕೊಂಡು ಈ ಸಮಿತಿಯು ತನ್ನದೇ ಆದ ಕಾರ್ಯವ್ಯ ವಸ್ಥೆಯನ್ನು ನಡೆಯಿಸುತ್ತದೆ.

**ಅಂತರ್‍ರಾಷ್ಟ್ರೀಯ ನ್ಯಾಯಮಂದಿರ**

ಅಂತರ್‍ರಾಷ್ಟ್ರೀಯ ನ್ಯಾಯಮಂದಿರವು ಸಂಯುಕ್ತರಾಷ್ಟ್ರ ಸಂಘದ ಪರಮೋಚ್ಚ ನ್ಯಾಯಸ್ಥಾನವಾಗಿದ್ದು ಅದರ ಅಧಿಲೇಖನದ ಮೇರೆಗೆ ಸ್ಥಾಪಿತವಾಗಿರುತ್ತದೆ. ಹದಿನೈದು ಜನ ನ್ಯಾಯಮೂರ್ತಿಗಳಿದ್ದ ಈ ನ್ಯಾಯಮಂದಿರವು ಎಲ್ಲ ಸದಸ್ಯರಾಷ್ಟ್ರಗಳಿಗೆ ನ್ಯಾಯದಾನವನ್ನು ಮಾಡುವ ವರಿಷ್ಠ ನ್ಯಾಯಾಲಯವೆನಿಸಿದೆ. ದೇಶ, ಭಾಷೆ, ಧರ್ಮಗಳ ನಿರ್ಬಂಧವಿಲ್ಲದೆ ಯಾವ ರಾಷ್ಟ್ರದ ಪ್ರಜೆಯೆ ಆಗಲಿ ಆ ಅರ್ಹತೆಯುಳ್ಳವನಾಗಿದ್ದರೆ ನ್ಯಾಯಮಂದಿರದಿಂದ ನ್ಯಾಯಮೂರ್ತಿಯೆಂದು ಸಾಮಾನ್ಯಸಭೆ ಮತ್ತು ಕ್ಷೇಮಮಂಡಲಗಳಿಂದ ಚುನಾಯಿತರಾಗಬಹುದು. ಅವರ ಕಾರ್ಯದ ಅವಧಿಯು ಒಂಭತ್ತು ವರ್ಷದ್ದಿರುತ್ತದೆ. ಅಭ್ಯರ್ಥಿಗಳ ದೂರುಗಳನ್ನಲ್ಲದೆ ಸಂಧಿವಿಗ್ರಹಗಳ ನಿರ್ಣಯ, ಅಂತರ್‍ರಾಷ್ಟ್ರೀಯ ಶಾಸನಗಳ ನಿರ್ಧಾರ, ಯುದ್ಧ ಪರಿಹಾರವನ್ನು ಗೊತ್ತು ಮಾಡುವದು ಇವೇ ಮೊದಲಾದ ವಿಷಯಗಳಲ್ಲಿ ನ್ಯಾಯಮಂದಿರವು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತದೆ. ಅದರಂತೆಯೆ ಶಾಸನಿಕ ಮತ್ತು ಸಾಂಪ್ರದಾಯಿಕ ವಿಷಯಗಳ ಬಗ್ಗೆ ಮಾರ್ಗದರ್ಶನವನ್ನು ಮಾಡುತ್ತದೆ. ಬಿಡುವಿನ ದಿನಗಳನ್ನು ಹೊರತುಪಡಿಸಿ ನಿರಂತರವಾಗಿ ಸೇರುವ ನ್ಯಾಯಮಂದಿರದ ಕಾರ್ಯವು ಇಡಿಯ ಪ್ರಪಂಚಕ್ಕೆ ಮಹತ್ವಪೂರ್ಣವಾಗಿದೆ.

**ಸ್ಥಿರಕಾರ್ಯಾಲಯ**

ಸಂಯುಕ್ತ ರಾಷ್ಟ್ರಸಂಘದ ಅತ್ಯಂತ ಪ್ರಭಾವಿಯಾದ ಅಂಗಸಂಸ್ಥೆಯೆಂದರೆ ಅದರ ಪ್ರಧಾನ ಕಾರ್ಯಾಲಯ. ರಾಷ್ಟ್ರಸಂಗಮದ ಕಾಲದಿಂದಲೂ ಅಂತರಾಷ್ಟ್ರೀಯ ಸಂಘಟನೆಯಲ್ಲಿ ಕೀಲದ ಸ್ಥಾನವನ್ನು ಗಳಿಸಿಕೊಂಡಿರುವದು ಈ ಸಂಸ್ಥೆ. ಸಂಯುಕ್ತ ರಾಷ್ಟ್ರಸಂಘವು ಪ್ರಧಾನ ಕಾರ್ಯದರ್ಶಿ ಮತ್ತು ಅವನಿಗೆ ಸಹಾಯಕವಾಗಬಹುದಾದ ಅನ್ಯ ಅಧಿಕಾರಿಗಳನ್ನೊಳಗೊಂಡ ಕಾರ್ಯಾಲಯವನ್ನು ನಿರ್ಮಿಸಿಕೊಂಡಿದೆ. ಕ್ಷೇಮಮಂಡಲದ ಸೂಚನೆಯ ಮೇರೆಗೆ ಸಾಮಾನ್ಯಸಭೆಯು ಪ್ರಧಾನಕಾರ್ಯದರ್ಶಿಯನ್ನು ನೇಮಿಸಿಕೊಳ್ಳುತ್ತದೆ. ಅವನ ಕಾರ್ಯದ ಅವಧಿಯು ಐದು ವರ್ಷ, ಆತನು ಸಂಯುಕ್ತ ರಾಷ್ಟ್ರಸಂಘದ ಮತ್ತು ಅದರ ಅಂಗಸಂಸ್ಥೆಗಳ ಪ್ರಧಾನಕಾರ್ಯದರ್ಶಿಯಾಗಿದ್ದುದರಿಂದ ಆ ಸಂಸ್ಥೆಗಳ ಮುಖಾಂತರ ಬಂದ ಎಲ್ಲ ಕಾರ್ಯವನ್ನು ಕೈಕೊಳ್ಳುವದು ಅವನ

ಕರ್ತವ್ಯವಾಗಿರುತ್ತದೆ. ವರ್ಷಕ್ಕೊಮ್ಮೆ ಆತನು ಇಡಿಯ ಸಂಘಟನೆಯ ಕಾರ್ಯದ ಬಗ್ಗೆ ವರದಿಯನ್ನು ಒಪ್ಪಿಸುವನಲ್ಲದೆ, ಅಂತರ್ರಾಷ್ಟ್ರೀಯ ಶಾಂತಿ ಭಂಗದ ಸಮಯವು ಸನ್ನಿಹಿತವಾದಾಗ ಕ್ಷೇಮಮಂಡಲಕ್ಕೆ ಸೂಚನೆಯನ್ನೂ ಕೊಡುತ್ತಾನೆ. ಆತನ ಕಾರ್ಯಾಲಯದಲ್ಲಿ ಒಂದೊಂದು ವಿಷಯಕ್ಕೆ ಒಂದೊಂದು ವಿಭಾಗವಿದ್ದು ಎಲ್ಲ ವಿಭಾಗಗಳನ್ನು ಸುಗಮಗೊಳಿಸುವ ಮತ್ತು ಎಲ್ಲಕ್ಕೂ ಸಮಾಚಾರವನ್ನು ಒದಗಿಸುವ ವಿಭಾಗಗಳೂ ಇರುತ್ತವೆ. ಅಲ್ಲಿ ವಿಶ್ವದ ಎಲ್ಲ ಭಾಗಗಳಿಂದ ಚುನಾಯಿತರಾದ ಕಾರ್ಯವಾಹಕರೂ ದುಡಿಯುತ್ತಾರೆ; ಅವರ ಆಯ್ಕೆಯು ಮಾತ್ರ ಕೇವಲ ಅವರ ಕಾರ್ಯಕ್ಷಮತೆ ಮತ್ತು ವಿಶ್ವಾಸ ಪಾತ್ರತೆಯ ಮೇಲೆ ಆಗುತ್ತದೆ. ಇಷ್ಟೇ ಅಲ್ಲದೆ ಅವರು ತಮ್ಮ ಕಾರ್ಯಾಚರಣೆಯಲ್ಲಿ ಯಾವ ವ್ಯಕ್ತಿಯ ಇಲ್ಲವೆ ರಾಷ್ಟ್ರದ ಸಂಕೋಚ-ಪ್ರಭಾವಗಳಿಗೆ ಒಳಗಾಗದೆ, ನಿಸ್ಪೃಹ ಮತ್ತು ನಿಸ್ವಾರ್ಥ ದೃಷ್ಟಿಯಿಂದ ಕೆಲಸ ಮಾಡುತ್ತಾರೆ.

ವಿಶ್ವಶಾಂತಿಯ ಕಾರ್ಯವನ್ನು ಮಾಡುವದಕ್ಕಾಗಿ ಸಂಯುಕ್ತ ರಾಷ್ಟ್ರ ಸಂಘದ ಈ ಆರು ವಿಭಾಗಗಳು ಇದ್ದರೂ, ಆ ಶಾಂತಿಯು ಸ್ಥಿರವಾಗಿ ಮತ್ತು ಚಿರವಾಗಿ ನಿಲ್ಲುವದು ಪ್ರಪಂಚದ ಆರ್ಥಿಕ ವಿಕಾಸ ಮತ್ತು ಸಾಮಾಜಿಕ ಉತ್ಕರ್ಷ ಇವುಗಳ ಮೇಲೆಯೆ ಅವಲಂಬಿಸಿದೆ. ಅಂತೆಯೆ ಸಂಯುಕ್ತ ರಾಷ್ಟ್ರಸಂಘವು ಸ್ಥಾಪಿತವಾದಂದಿನಿಂದ ಈ ವಿಷಯದತ್ತ ವಿಶಿಷ್ಟ ಗಮನವನ್ನು ಕೊಟ್ಟಿದೆ. ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ವ್ಯಾಪಾರ ವಿಷಯಕ, ಸ್ವಾಸ್ಥ್ಯವಿಚಾರ, ಇವೇ ಮೊದಲಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿ ಪ್ರಪಂಚದಲ್ಲಿ ಸುಭಿಕ್ಷ ಮತ್ತು ಸುಭದ್ರವಾದ ವಾತಾವರಣವು ವಿರಾಜಿಸುವಂತೆ ಸಂಯುಕ್ತರಾಷ್ಟ್ರಸಂಘವು ಪ್ರಯತ್ನಿಸುತ್ತಲಿದೆ. ಈ ಬಗೆಯ ಪ್ರಯತ್ನವನ್ನು ಅದರ ಸಂಪರ್ಕವುಳ್ಳ ಹತ್ತು ವಿಶಿಷ್ಟ ಸಂಸ್ಥೆಗಳ ಮುಖಾಂತರ ಈ ಸಂಘವು ಮುಂದುವರಿಸಿದೆ. ಯಾವುದೊಂದು ವಿಷಯದ ಕಾರ್ಯವನ್ನು ಜರುಗಿಸಬೇಕು ಎಂಬ ನಿರ್ಣಯವಾದ ಕೂಡಲೆ ಅದಕ್ಕಾಗಿ ಅಂತರ್ರಾಷ್ಟ್ರೀಯ ಸಂಸ್ಥೆಯೊಂದನ್ನು ನಿರ್ಮಿಸಿ, ಅದರ ಮೂಲಕ ಆ ಕಾರ್ಯವನ್ನು ನಡೆಯಿಸುವದು ಸಂಘದ ಕಾರ್ಯಪದ್ಧತಿಯಾಗಿದೆ. ತನ್ನ ತನ್ನ ಕ್ಷೇತ್ರದಲ್ಲಿ ಉತ್ಕಟವಾದ ಅಭಿಮಾನದಿಂದ ಮತ್ತು ಉತ್ತಮವಾದ ಅರ್ಹತೆಯಿಂದ

ಈ ಸಂಸ್ಥೆಗಳು ಪ್ರಗತಿಯನ್ನು ಸಾಧಿಸಿ, ಸಂಯುಕ್ತ ರಾಷ್ಟ್ರಸಂಘದ ಧ್ಯೇಯವನ್ನು ಈಡೇರಿಸಲಿಕ್ಕೆ ಸಹಾಯವಾಗುತ್ತವೆ. ತಮ್ಮ ಕಾರ್ಯದ ವರದಿಯನ್ನು ವರ್ಷಕ್ಕೊಮ್ಮೆ ಸಾಮಾನ್ಯ ಸಭೆಗೆ ಒಪ್ಪಿಸಿ, ನಿರ್ಧಾರವಾದ ವೆಚ್ಚದಲ್ಲಿ ನಿರ್ದಿಷ್ಟವಾದ ಕಾರ್ಯವನ್ನು ಅತ್ಯಂತ ಫಲಕಾರಿಯಾಗುವಂತೆ ಮಾಡುವದೇ ಈ ಸಂಸ್ಥೆಗಳ ವೈಶಿಷ್ಟ್ಯವಾಗಿದೆ.

## ೧. ಅಂತರರಾಷ್ಟ್ರೀಯ ಶ್ರಮಿಕಸಂಘಟನೆ

ಇಂತಹ ಹತ್ತು ಸಂಸ್ಥೆಗಳಲ್ಲಿ ಮೊದಲನೆಯದು ಅಂತರ್ರಾಷ್ಟ್ರೀಯ ಶ್ರಮಿಕ ಸಂಘಟನೆಯಾಗಿದೆ. ೧೯೧೯ರಲ್ಲಿ ರಾಷ್ಟ್ರಸಂಗಮದ ಸಹಾಯ ಸಂಸ್ಥೆಯಾಗಿ ಆರಂಭವಾದ ಈ ಸಂಘಟನೆಯು ೧೯೪೬ರಲ್ಲಿ ಸಂಯುಕ್ತ ರಾಷ್ಟ್ರಸಂಘದ ಒಂದು ವಿಶಿಷ್ಟ ಸಂಸ್ಥೆಯಾಗಿ ಪರಿಣಮಿಸಿದೆ. ಶ್ರಮವೆಂದರೆ ಅದು ಮಾರಾಟದ ಒಂದು ಪದಾರ್ಥವಲ್ಲ, ಶ್ರಮಿಕರಿಗೆ ಸಂಘ ಜೀವನದ ಸ್ವಾತಂತ್ರ್ಯವಿರಬೇಕು, ದಾರಿದ್ರ್ಯವು ಉತ್ಕರ್ಷದ ಪರಮಶತ್ರು, ವಿಶ್ವಕಲ್ಯಾಣದ ದೃಷ್ಟಿಯಿಂದ ಶ್ರಮಿಕರು, ಉದ್ಯಮಪತಿಗಳು, ಮತ್ತು ಸರಕಾರಗಳು ಸಮಾನಾಧಿಕಾರದಿಂದ ಹೆಣಗಬೇಕು ಎಂಬಿವೇ ಮೊದಲಾದ ಅಂಶಗಳು ಈ ಸಂಘಟನೆಯ ಮೂಲಸೂತ್ರವಾಗಿವೆ. ಈ ಸಂಘಟನೆಯ ಕಾರ್ಯಸಮಿತಿಯಲ್ಲಿ ೩೨ ಜನ ಸದಸ್ಯರಿರುವರು. ಅವರ ಸಭೆಯು ವರ್ಷಕ್ಕೊಮ್ಮೆಯಾದರೂ ಜರುಗುತ್ತದೆ. ಇದರ ಪ್ರಮುಖ ಕಾರ್ಯಾಲಯವು ಸ್ವಿಟ್ಸರ್ಲಂಡ ದೇಶದ ಜಿನಿವಾ ನಗರದಲ್ಲಿದೆ. ಅಂತರ್ರಾಷ್ಟ್ರೀಯಶ್ರಮಿಕಸಮ್ಮೇಳನ, ಕಾರ್ಯಮಂಡಲ ಮತ್ತು ಕಾರ್ಯಾಧಿಕಾರಿ ಹೀಗೆ ಈ ಸಂಘಟನೆಗೆ ಮೂರು ಅಂಗಗಳಿವೆ. ಇದರ ಒಂದು ಶಾಖಾಕಾರ್ಯಾಲಯವು ನಮ್ಮ ದೇಶದ ರಾಜಧಾನಿಯಾದ ನವದೇಹಲಿಯಲ್ಲಿಯೂ ಇದೆಯೆಂಬುದೊಂದು ನಮಗೆ ಹೆಮ್ಮೆಯ ಮಾತಾಗಿದೆ.

ಈ ಸಂಘಟನೆಯ ಸದಸ್ಯತ್ವವು ಮೊದಲು ರಾಷ್ಟ್ರಸಂಗಮದ ಎಲ್ಲ ಸದಸ್ಯರಾಷ್ಟ್ರಗಳಿಗೂ ಅನಾಯಾಸವಾಗಿ ದೊರಕಿತ್ತು. ಆದರೆ ಇದು ಸಂಯುಕ್ತ ರಾಷ್ಟ್ರಸಂಘಕ್ಕೆ ಸಂಬಂಧಿಸಿದ ಕೂಡಲೆ ಪ್ರತಿಯೊಂದು ಸದಸ್ಯರಾಷ್ಟ್ರ

ಸ್ವತಂತ್ರವಾಗಿ ಸಂಘಟನೆಯ ಸದಸ್ಯತ್ವವನ್ನು ಪಡೆಯಬೇಕು ಎಂಬುದಾಗಿ ನಿರ್ಣಯಿಸಲ್ಪಟ್ಟಿತು. ಅದಲ್ಲದೆ ಸಂಯುಕ್ತ ರಾಷ್ಟ್ರಸಂಘದ ಸದಸ್ಯರಲ್ಲದವರಿಗೂ ಈ ಸಂಘಟನೆಯಲ್ಲಿ ಅವಕಾಶವಿದೆ. ಶ್ರಮಜೀವಿಗಳ ಜೀವನವನ್ನು ಉತ್ತಮಗೊಳಿಸುವ ಧ್ಯೇಯವನ್ನಿಟ್ಟುಕೊಂಡ ಈ ಸಂಘಟನೆಯು ಸೂಚನೆಗಳು, ಉಪದೇಶ, ಮತ್ತು ಮಾರ್ಗದರ್ಶನದ ಮೂಲಕವಲ್ಲದೆ ಅನೇಕ ನಿಯಮವಾದಿಗಳ ಮೂಲಕ ಕೂಡ ಪ್ರತಿಯೊಂದುರಾಷ್ಟ್ರದ ಶ್ರಮಿಕಜನರ ಹಿತವನ್ನು ಸಾಧಿಸುತ್ತಿದೆ. ಇತ್ತ ಪ್ರಾದೇಶಿಕ ತಾಂತ್ರಿಕಸಹಾಯ ಮತ್ತು ಅಸಂಖ್ಯ ಉಪಯುಕ್ತ ಪ್ರಕಟನೆಗಳು ಈ ಸಂಘಟನೆಯ ಸೇವೆಯನ್ನು ಹೆಚ್ಚು ಆಕರ್ಷಕ ಮಾಡುವದರಲ್ಲಿ ಸಹಾಯಕ ಆಗಿವೆ. ಶ್ರಮಿಕರಿಗೆ ಸಂಬಂಧಪಟ್ಟ ಅಂಕಿ, ಅಂಶಗಳನ್ನು ಈ ಸಂಘಟನೆಯು ಸಂಗ್ರಹಿಸುತ್ತದೆ, ಪ್ರಚಾರಗೊಳಿಸುತ್ತದೆ.

**೨. ಅಂತರ್ರಾಷ್ಟ್ರೀಯ ಆಹಾರ ಮತ್ತು ಕೃಷಿಸಂಘಟನೆ**

ಇಂತಹ ಎರಡನೆಯ ಸಂಸ್ಥೆಯು ಆಹಾರ ಮತ್ತು ಕೃಷಿಸಂಘಟನೆಯಾಗಿದೆ. ಸಂಯುಕ್ತ ರಾಷ್ಟ್ರಸಂಘಕ್ಕಿಂತ ಮುಂಚೆಯೆ ಜನ್ಮವೆತ್ತಿದ ಈ ವಿಶಿಷ್ಟ ಸಂಸ್ಥೆಯು ಪ್ರಪಂಚದ ಆಹಾರ, ಪೋಷಣೆ, ಕೃಷಿ, ಅರಣ್ಯಶಾಸ್ತ್ರ, ಮೀನುಗಾರಿಕೆಯೆ ಮೊದಲಾದ ವಿಷಯಗಳ ವಿಕಾಸಕ್ಕಾಗಿ ಸ್ಥಾಪಿತವಾಗಿದೆ. ಆಹಾರದ ಉತ್ಪಾದನ, ಸಂಶೋಧನ, ಸಂರಕ್ಷಣ ಮತ್ತು ವಿತರಣಗಳಿಗೆ ಸಂಬಂಧಪಟ್ಟ ಶಾಸ್ತ್ರೀಯ ಜ್ಞಾನವು ಬೆಳೆಯುವಂತೆ ಪ್ರಯತ್ನಿಸುವದು ಮತ್ತು ಆ ವಿಷಯದ ಅಂಕೆ-ಅಂಶಗಳು ಪ್ರಪಂಚದ ಎಲ್ಲ ರಾಷ್ಟ್ರಗಳಿಗೆ ದೊರೆಯುವಂತೆ ಮಾಡುವದು ಈ ಸಂಘಟನೆಯ ಕರ್ತವ್ಯವಾಗಿದೆ; ಧ್ಯೇಯವೆನಿಸಿದೆ. ಈ ಸಂಘಟನೆಯು ವ್ಯವಸ್ಥೆಯಲ್ಲಿ ಸಮ್ಮೇಳನ, ಕಾರ್ಯಮಂಡಲ ಮತ್ತು ನಿರ್ದೇಶಕ ಎಂಬ ಮೂರು ವಿಭಾಗಗಳಿವೆ. ಮತ್ತು ಇದರ ಸಭೆಗಳು ವರ್ಷಕ್ಕೆ ಎರಡುಸಾರೆ ಜರುಗುತ್ತವೆ. ಸಭೆಗಳ ನಡುವಿನ ಸಮಯದಲ್ಲಿ ಈ ಸಂಘಟನೆಯು ಆರಂಭಿಸಿದ ಕಾರ್ಯಕ್ರಮದ ಅವಲೋಕನವನ್ನು ವಿವಿಧ ರಾಷ್ಟ್ರಗಳಲ್ಲಿ ನಡೆದ ಕಾರ್ಯದ ನಿರೀಕ್ಷೆಯನ್ನು ಮಾಡುತ್ತದೆ. ಈ ಸಂಘಟನೆಯ ಕಾರ್ಯಮಂಡಲದಲ್ಲಿ ಹದಿನಾರು ಜನ ಸದಸ್ಯರಿರುತ್ತಾರೆ; ಇದರ ಪ್ರಾದೇಶಿಕ ಶಾಖೆಗಳೂ ಇರುತ್ತವೆ.

**೩. ಅ.ರಾ. ಶೈಕ್ಷಣಿಕ-ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆ.**

ಈ ಸಂಘದ ಮೂರನೆಯ ಸಂಸ್ಥೆಯಾದ ಶೈಕ್ಷಣಿಕ-ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆಯು ಪ್ರತಿಯೊಂದು ದೃಷ್ಟಿಯಿಂದಲೂ ಸಂಯುಕ್ತ ರಾಷ್ಟ್ರ ಸಂಘದ ಆದರ್ಶದಲ್ಲಿ ವಿಧಾಯಕ ಕಾರ್ಯವನ್ನು, ಅಲ್ಪ ಪ್ರಮಾಣದಲ್ಲಿಯೆ ಆಗಲಿ ಮಾಡುತ್ತಿರುವ ಹಿರಿಯ ಕೇಂದ್ರವಾಗಿದೆ. ಪರಸ್ಪರ ಪರಿಚಯವು ಬೆಳೆಯಬೇಕು, ಪ್ರಪಂಚದ ರಾಷ್ಟ್ರಗಳಲ್ಲಿ ಶಾಂತಿ ಮತ್ತು ಸೌಹಾರ್ದಗಳು ನೆಲೆಸುವಂತೆ ಜ್ಞಾನ ಪ್ರಸಾರವಾಗಬೇಕು, ಈ ಕಾರ್ಯವು ಸುಲಭವಾಗಿ ಜರುಗುವಂತೆ ಸಂಪರ್ಕ-ಸಾಧನಗಳು ಮತ್ತು ಸಂಚಾರ ಸೌಕರ್ಯಗಳು ಹೆಚ್ಚಾಗಬೇಕು ಎಂದು ಗುರಿಯನ್ನಿಟ್ಟುಕೊಂಡು ಸಂಸ್ಕೃತಿ ಸಂವರ್ಧನಕ್ಕಾಗಿ ಈ ಸಂಘಟನೆಯು ಹೋರಾಡುತ್ತಿದೆ. ಈ ಸಂಘಟನೆಯ ಅಂಗರಚನೆಯಲ್ಲಿಯೂ ಸಮ್ಮೇಳನ, ಕಾರ್ಯಮಂಡಲ ಮತ್ತು ಕಾರ್ಯಾಲಯ ಎಂಬ ಮೂರು ಭಾಗಗಳುಂಟು. ಇದು ೧೯೪೬ ರಲ್ಲಿ ಸ್ಥಾಪಿತವಾಗಿದೆ. ಈ ಸಂಘಟನೆಯ ಸಮ್ಮೇಳನ ವಿಭಾಗದಲ್ಲಿ ಪ್ರತಿಯೊಂದು ರಾಷ್ಟ್ರದ ಓರ್ವ ಪ್ರತಿನಿಧಿಯಿರುತ್ತಾನೆ ಮತ್ತು ಈ ಸಮ್ಮೇಳನದ ಅಧಿವೇಶನಗಳು ೧೯೫೪ ರ ವರೆಗೆ ಪ್ರತಿವರ್ಷ ಜರುಗುತ್ತಿದ್ದವು. ಈಗ ಅವು ಎರಡು ವರ್ಷಕ್ಕೊಮ್ಮೆ ಸೇರುತ್ತವೆ. ಇತ್ತ ಕಾರ್ಯಮಂಡಲದಲ್ಲಿ ಸಮ್ಮೆಳನದ ಅಧಿವೇಶನದಲ್ಲಿ ಚುನಾಯಿತರಾದ ಇಪ್ಪತ್ತು ಜನ ಸದಸ್ಯರಿರುತ್ತಾರೆ. ಮತ್ತು ಅದರ ಸಭೆಗಳು ವರ್ಷವೊಂದಕ್ಕೆ ಎರಡು ಬಾರಿಯಾದರೂ ಜರುಗುತ್ತವೆ. ಈ ಸಂಘಟನೆಯು ಹಾಕಿಕೊಟ್ಟ ಕಾರ್ಯಕ್ರಮವನ್ನು ಈಡೇರಿಸಲಿಕ್ಕೆ ಪ್ರತಿಯೊಂದು ದೇಶದಲ್ಲಿ ರಾಷ್ಟ್ರೀಯ ಸಂಘಗಳಿರುತ್ತವೆ. ಮತ್ತು ಈ ಸಂಘಗಳ ಸದಸ್ಯರು ಸರಕಾರೇತರರಾಗಿರುತ್ತಾರೆ. ಈ ಸಂಘಟನೆಯ ಕಾರ್ಯದ ವೈಶಿಷ್ಟ್ಯವೆಂದರೆ ಯಾವ ಸದಸ್ಯರಾಷ್ಟ್ರದ ಸಮ್ಮತಿ ಇಲ್ಲವೆ ವಿನಂತಿಯಿಲ್ಲದೆ ಇದು ಯಾವ ಕಾರ್ಯವನ್ನೂ ಕೈಕೊಳ್ಳಲಾರದು ಎಂಬುದು. ಮತ್ತು ಯಾವುದೇ ರಾಷ್ಟ್ರದ ಆಂತರಿಕ ಆಡಳಿತ ಮತ್ತು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಈ ಸಂಘಟನೆಯು ಹಸ್ತಕ್ಷೇಪ ಮಾಡುವದಿಲ್ಲ.

ಈ ಸಂಘಟನೆಯ ಮುಖ್ಯ ಕಾರ್ಯಾಲಯವು ಪ್ಯಾರಿಸದಲ್ಲಿದೆ. ಜ್ಞಾನ ಪ್ರಸಾರದ ಕಾರ್ಯಕ್ರಮವನ್ನು ರಂಗಭೂಮಿ, ವಾಕ್ಪಟ, ಗ್ರಂಥಾಲಯ,

ವೃತ್ತ, ಟೆಲಿವಿಜನ್ ಮೊದಲಾದ ಸಾಧನಗಳ ಮೂಲಕ ಕೈಕೊಳ್ಳುತ್ತಿದೆ. ಈ ಸಂಸ್ಥೆಯು ಸಾಧ್ಯವಿದ್ದ ಸಂದರ್ಭಗಳಲ್ಲಿ ಮೊದಲೇ ಸ್ಥಾಪಿತವಾಗಿ ಕಾರ್ಯ ಸಕ್ತ ಆಗಿರುವ ಇಂತಹ ಅಂತರ್ರಾಷ್ಟ್ರೀಯ ಸಂಘಗಳ ಮುಖಾಂತರ ಈ ಸಂಘಟನೆಯ ಕಾರ್ಯವು ಹೆಚ್ಚಾಗಿ ಮುಂದುವರಿಯುತ್ತಿದ್ದರೂ ಅವಶ್ಯಕ ವೆಂದು ಕಂಡಲ್ಲಿ ಆ ಕಾರಣಕ್ಕಾಗಿ ಹೊಸ ಸಂಸ್ಥೆಗಳನ್ನು ಕಟ್ಟಿಕೊಳ್ಳುವದೂ ವಾಡಿಕೆಯಾಗಿದೆ. ಮೂಲ ಶಿಕ್ಷಣ, ಮಳಲು ಕಾಡಿನ ಸಮಸ್ಯೆಯ ಸಂಶೋ ಧನ, ಸಾಮಾಜಿಕ ವಿಜ್ಞಾನದ ಅಧ್ಯಯನ ಮತ್ತು ಅಧ್ಯಾಪನ, ಅಣುಶಕ್ತಿ ಮತ್ತು ಭೌತ ಶಾಸ್ತ್ರಗಳ ಪ್ರಯೋಗಗಳು, ಚಿತ್ರ-ಶಿಲ್ಪ-ಸಾಹಿತ್ಯ-ಸಂಗೀತ ಮೊದಲಾದ ಲಲಿತ ಕಲೆಗಳ ಪ್ರೋತ್ಸಾಹನ ಇವೇ ಮೊದಲಾದವು ಸಂಘಟ ನೆಯ ಕಾರ್ಯ ಕ್ಷೇತ್ರಗಳಾಗಿವೆ. ಇದಕ್ಕೆ ಅನುರೂಪ ಮತ್ತು ಅನುಕೂಲ ಎನಿಸುವಂತಹ ಎಷ್ಟೋ ಪುಸ್ತಕ ಮತ್ತು ಪತ್ರಿಕೆಗಳನ್ನು ಕೂಡ ಈ ಸಂಘಟ ನೆಯು ಪ್ರಕಟಿಸುತ್ತದೆ.

## ೪. ಅಂತರ್ರಾಷ್ಟ್ರೀಯ ವಿಮಾನಸಂಘಟನೆ

ಅನಂತರ ಬಂದುದು ಅಂತರ್ರಾಷ್ಟ್ರೀಯ ವಿಮಾನಸಂಘಟನೆ. ಪ್ರತಿ ಯೊಂದು ರಾಷ್ಟ್ರದಲ್ಲಿಯೂ ಸರಿಯಾದ ಮತ್ತು ಸುರಕ್ಷಿತ ವಿಮಾನ ಸೌಕರ್ಯ ಗಳು ದೊರೆಯುವಂತೆ ಮಾಡುವದು ಮತ್ತು ಕೇವಲ ಶಾಂತಿ ಸ್ಥಾಪನೆಯ ಕಾರಣಕ್ಕಾಗಿ ಮಾತ್ರ ವಿಮಾನಗಳನ್ನು ಉಪಯೋಗಿಸುವಂತೆ ನೋಡುವದು ಈ ಸಂಘಟನೆಯ ಮುಖ್ಯ ಕರ್ತವ್ಯವಾಗಿರುತ್ತದೆ. ಅಂತಹ ಉದ್ದೇಶದಿಂದ ಹೆಚ್ಚು ಸುಲಭ ಮತ್ತು ಶಾಸ್ತ್ರಶುದ್ಧ ವಿಮಾನಗಳು, ವಿಮಾನಮಾರ್ಗಗಳು, ವಿಮಾನ ಸಲಕರಣೆಗಳು ಮತ್ತು ವಿಮಾನತಲಗಳು ನಿರ್ಮಾಣವಾಗುವಂತೆ ಮಾಡುವದೂ ಅಷ್ಟೇ ಮಹತ್ವದ ಕಾರ್ಯವೆನಿಸಿದೆ. ೧೯೪೭ರಲ್ಲಿ ತಲೆಯೆತ್ತಿದ ಈ ಸಂಘಟನೆಯ ಕಾರ್ಯವು ಸಮಿತಿ, ಕಾರ್ಯಮಂಡಲ ಮತ್ತು ಕಾರ್ಯಾ ಲಯ ಈ ಮೂರು ವಿಭಾಗಗಳ ಮುಖಾಂತರ ಸಾಗುತ್ತದೆ.

ವಿಮಾನಸಂಘಟನೆಯ ಕೇಂದ್ರಕಚೇರಿಯು ಕಾನಡಾ ದೇಶದ ಮಾಂಟ್‌ರಿಯಲ್‌ದಲ್ಲಿದೆಯಾದರೂ ಇದಕ್ಕೆ ಬೇರೆ ನಾಲ್ಕು ಪ್ರಾದೇಶಿಕ ಶಾಖೆ ಗಳಿರುತ್ತವೆ. ಸಮಿತಿಯಲ್ಲಿ ಪ್ರತಿಯೊಂದು ರಾಷ್ಟ್ರದ ಒಬ್ಬ ಪ್ರತಿನಿಧಿ ಇರು-

ತ್ತಾನೆ ಮತ್ತು ಅದರ ಸಭೆಯು ವರ್ಷಕ್ಕೊಮ್ಮೆ ಸೇರುತ್ತದೆ. ಆದರೆ ಕಾರ್ಯಮಂಡಲದಲ್ಲಿ ಮಾತ್ರ ಇಪ್ಪತ್ತೊಂದು ಜನ ಸದಸ್ಯರಿದ್ದು, ಅವರ ಆಯ್ಕೆಯು ಸಮಿತಿಯ ವಾರ್ಷಿಕ ಸಭೆಯಲ್ಲಿ ಜರುಗುತ್ತದೆ, ಮತ್ತು ಕಾರ್ಯ ಮಂಡಲವು ಅವಿರತವಾಗಿ ಕೆಲಸವನ್ನು ಸಾಗಿಸುತ್ತಿರುವದು. ವಿಮಾನ ಗಳ ಭದ್ರತೆ, ವೈಮಾನಿಕರ ಅರ್ಹತೆ, ವಿಮಾನ ಮಾರ್ಗಗಳ ಪಟಗಳು, ವಿಮಾನೋಡ್ಡಾಣದ ನಿಯಮಗಳು, ನಷ್ಟ ಇಲ್ಲವೆ ಅಪಘಾತಕ್ಕೀಡಾದ ವಿಮಾನಗಳನ್ನು ಹುಡುಕುವದು, ಅಪಘಾತಗಳ ವಿಚಾರಣೆ, ವಿಮಾನ ಸಮಾ ಚಾರದ ಪ್ರಸಾರ, ಇವೇ ಮೊದಲಾದ ಹದಿನಾಲ್ಕು ವಿವರಗಳುಳ್ಳ ಕಾರ್ಯ ಕ್ರಮವನ್ನು ಈ ಸಂಘಟನೆಯು ಇಟ್ಟುಕೊಂಡಿರುತ್ತದೆ. ಆ ಉದ್ದೇಶವನ್ನು ಸಾಧಿಸಿ, ಕೈಕೊಂಡ ಕಾರ್ಯದ ಉಚಿತ ಪ್ರಚಾರಕ್ಕೆಂದು ಪತ್ರಿಕೆಗಳನ್ನು ಇದು ಪ್ರಕಟಿಸುತ್ತದೆ.

## ೫. ಅಂತರ್ರಾಷ್ಟ್ರೀಯ ಬ್ಯಾಂಕ

ಇವುಗಳಂತೆಯೆ ಆರ್ಥಿಕ ಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸುವವು ಈ ಮುಂದಿನ ಎರಡು ಸಂಸ್ಥೆಗಳು. ಅವುಗಳಲ್ಲಿ ಮೊದಲನೆಯದು ಪುನರ್ರಚನೆ ಮತ್ತು ಅಭಿವೃದ್ಧಿಯ ಅಂತರ್ರಾಷ್ಟ್ರೀಯ ಬ್ಯಾಂಕು. ವಿಧಾಯಕ ಕಾರ್ಯ ಕ್ಕಾಗಿ ವಿವಿಧ ರಾಷ್ಟ್ರಗಳಲ್ಲಿ ಬಂಡವಲು ದೊರೆಯುವಂತೆ ಮಾಡುವದೇ ಈ ಬ್ಯಾಂಕಿನ ಕೆಲಸವಾಗಿದೆ. ಅದರಿಂದ ವಿದೇಶ ವ್ಯಾಪಾರವು ಬೆಳೆದು ಆರ್ಥಿಕ ಜೀವನವು ಉತ್ತಮಗೊಳ್ಳುವಂತೆ ಮಾಡಬೇಕಾದುದು ಮೂಲ ವಿಚಾರ ವಾಗಿದೆ. ಸಾಧ್ಯವಿದ್ದಲ್ಲಿ ಖಾಸಗೀ ಬಂಡವಲು ಆ ಆ ರಾಷ್ಟ್ರಕ್ಕೆ ದೊರೆಯು ವಂತೆ ಪರಿಸ್ಥಿತಿಯ ನಿರ್ಮಾಣ ಮಾಡುವದು ಮತ್ತು ಪ್ರಸಂಗ ಬಂದಲ್ಲಿ ತನ್ನ ನಿಧಿಯ ಮೂಲಕ ಸಾಲಗಳನ್ನು ನೀಡುವದು ಈ ಬ್ಯಾಂಕಿನ ಧ್ಯೇಯವನ್ನು ಈಡೇರಿಸುವ ಸಾಧನವಾಗಿದೆ.

೧೯೪೫ರಲ್ಲಿ ಈ ಬ್ಯಾಂಕು ಅಸ್ತಿತ್ವದಲ್ಲಿ ಬಂದಿದೆ; ಇದರ ಕಾರ್ಯಾ ಲಯವು ವಾಶಿಂಗ್‌ಟನ್ನಿನಲ್ಲಿದೆ. ಈ ಬ್ಯಾಂಕಿನ ಕಾರ್ಯವಿಧಾನವು ಶಾಸಕ ಮಂಡಲ, ನಿರ್ದೇಶಕ ಸಮಿತಿ ಮತ್ತು ಕಾರ್ಯಾಲಯಗಳ ಮುಖಾಂತರ ನಡೆಯುತ್ತದೆ. ಶಾಸಕ ಮಂಡಲದ ಸಭೆಯು ವರ್ಷಕ್ಕೊಮ್ಮೆ ಜರುಗುತ್ತಿ

ದ್ವಾರೆ, ನಿರ್ದೇಶಕ ಸಮಿತಿಯ ಸಭೆಗಳು ತಿಂಗಳಿಗೊಮ್ಮೆ ಸೇರುತ್ತವೆ. ನಿರ್ದೇಶಕ ಸಮಿತಿಯಲ್ಲಿ ಇಪ್ಪತ್ತೊಂದು ಜನ ಸದಸ್ಯರಿದ್ದು ಎಲ್ಲ ಕಾರ್ಯದ ಹೊಣೆಯನ್ನು ಇವರೇ ಹೊತ್ತುಕೊಂಡಿರುತ್ತಾರೆ. ಪ್ರಪಂಚದ ಬೇರೆ ಬೇರೆ ಧನಿಕ ಕೇಂದ್ರಗಳಿಂದ ಋಣ ಪತ್ರಗಳ ಮಾರಾಟದ ಮೂಲಕ ಧನವನ್ನು ಸಂಗ್ರಹಿಸಿ, ತನ್ನದೇ ಆದ ವಿಧಾನ ಮತ್ತು ನಿಯಮಾವಳಿಯ ಪ್ರಕಾರ ಅಗತ್ಯವಿದ್ದ ರಾಷ್ಟ್ರಗಳಿಗೆ ಸಹಾಯಧನವನ್ನು ಪೂರೈಸುತ್ತದೆ; ಮಾರ್ಗದರ್ಶನವನ್ನು ಮಾಡುತ್ತದೆ.

## ೬. ಅಂತರ್ರಾಷ್ಟ್ರೀಯ ಧನನಿಧಿ

ಈ ಗುಂಪಿನ ಇನ್ನೊಂದು ಸಂಸ್ಥೆಯೆಂದರೆ ಅಂತರ್ರಾಷ್ಟ್ರೀಯ ಧನನಿಧಿ. ಮೇಲಿನ ಸಂಸ್ಥೆಯು ಸಂಯುಕ್ತ ರಾಷ್ಟ್ರಸಂಘದ ಸದಸ್ಯರಾಷ್ಟ್ರಗಳಿಗೆ ಬಂಡವಲನ್ನು ಒದಗಿಸುತ್ತಿದ್ದರೆ ಇದು ಆ ರಾಷ್ಟ್ರಗಳಲ್ಲಿ ಜರುಗುವ ಪರಸ್ಪರ ವ್ಯಾಪಾರವು ಸುಗಮವಾಗಿ ಸಾಗುವಂತೆ ವಿನಿಮಯಸೌಕರ್ಯಗಳನ್ನು ಒದಗಿಸಿಕೊಡುತ್ತದೆ. ಒಂದು ರಾಷ್ಟ್ರದ ನಾಣ್ಯಪದ್ಧತಿ, ಅಲ್ಲಿಯ ಚಲನಗಳು ಮತ್ತು ಅಲ್ಲಿಯ ಹುಂಡಿ ಮೊದಲಾದ ವಿತ್ತಪತ್ರಗಳು ಭಿನ್ನವಾಗಿರುವದರಿಂದ ಕೇಂದ್ರವಾಗಿ ಒಂದು ಸಂಸ್ಥೆಯು ವಿನಿಮಯ ವ್ಯವಸ್ಥೆಯನ್ನು ವಹಿಸಿಕೊಂಡು ಆ ಆ ರಾಷ್ಟ್ರಗಳ ಹಣವು ಸುಲಭವಾಗಿ ಅನ್ಯರಾಷ್ಟ್ರಗಳಿಗೆ ದೊರೆಯುವಂತೆ ಮಾಡುವದು ಅಗತ್ಯವಾಗಿದೆ. ಪ್ರಪಂಚದ ಪೇಟೆಗಳಲ್ಲಿ ಸರಕುಗಳ ಬೆಲೆಗಳು ಸಮಾನವಾದ ಮಟ್ಟದಲ್ಲಿರುವಂತೆ ಮತ್ತು ಯಾವುದೊಂದು ರಾಷ್ಟ್ರದಲ್ಲಿ ನಾಣ್ಯ-ನೋಟುಗಳ ಅತಿಪ್ರಸರಣವಾಗಿದ್ದರೆ ಅವುಗಳ ಸಂಗಡ ಅನ್ಯದೇಶಗಳ ಆರ್ಥಿಕ ಸಂಬಂಧವು ಸೂತ್ರಬದ್ಧವಾಗಿ ಸಾಗುವಂತೆ ಮಾಡುವದು ಈ ನಿಧಿಯ ಹೊಣೆಯಾಗಿರುತ್ತದೆ. ಆರ್ಥಿಕ ವ್ಯವಹಾರದಲ್ಲಿ ವಿಶ್ವಾಸ ಹುಟ್ಟುವಂತೆ ಮಾಡುವದೇ ಈ ಎಲ್ಲ ಕಾರ್ಯದ ರಹಸ್ಯವಾಗಿದೆ.

ಈ ಧನನಿಧಿಯ ಸ್ಥಾಪನೆಯು ೧೯೪೬ರಲ್ಲಿ ಆಗಿದೆ; ಮತ್ತು ಮುಖ್ಯ ಕಾರ್ಯಾಲಯವು ವಾಶಿಂಗ್‌ಟನ್ನಿನಲ್ಲಿದೆ. ಇದರ ಆಡಳಿತವು ಶಾಸಕ ಮಂಡಲ, ನಿರ್ದೇಶಕ ಸಮಿತಿ ಮತ್ತು ಮುಖ್ಯ ನಿರ್ದೇಶಕರ ಮುಖಾಂತರ ಜರುಗುತ್ತದೆ. ಶಾಸಕ ಮಂಡಲದಲ್ಲಿ ಪ್ರತಿಯೊಂದು ಸದಸ್ಯರಾಷ್ಟ್ರದ ಒಬ್ಬ

ಪ್ರತಿನಿಧಿ ಮತ್ತು ಒಬ್ಬ ಸಹಾಯಕ ಹೀಗೆ ಸದಸ್ಯರಿರುತ್ತಾರೆ. ಮತ್ತು ಅವರ ಮತಾಧಿಕಾರವು ನಿಧಿಗೆ ಅವರವರು ನೀಡಿದ ಹಣದ ಮೇಲೆ ಅವಲಂಬಿಸಿರುತ್ತದೆ. ಈ ನಿಧಿಯ ಬಳಿಯಲ್ಲಿ ಪ್ರತಿಯೊಂದು ರಾಷ್ಟ್ರದ ಸಲುವಾಗಿ ಗೊತ್ತು ಪಡಿಸಿದ ವಂತಿಗೆಯು ಚಿನ್ನ ಮತ್ತು ಸ್ಥಳಿಕ ಚಲನದ ರೂಪದಲ್ಲಿರುತ್ತದೆ. ಇದರ ಮೂಲಕ ಪ್ರಪಂಚದ ಧನವಿನಿಮಯವು ಸುಲಭವಾಗಿ ಸಾಗುವಂತೆ ಈ ಸಂಸ್ಥೆಯು ವ್ಯವಸ್ಥೆಯನ್ನು ಮಾಡುತ್ತದೆ. ಕೇವಲ ವಿನಿಮಯವನ್ನು ಸುಗಮಗೊಳಿಸುವ ಕಾರ್ಯವಷ್ಟೆ ಅಲ್ಲದೆ ಸದಸ್ಯರಾಷ್ಟ್ರಗಳಿಗೆ ಆರ್ಥಿಕ ವಿಷಯಗಳಲ್ಲಿ ಸಲಹೆಗಳನ್ನು ನೀಡುವದು, ಅವುಗಳಿಗೆ ಅಗತ್ಯವಿದ್ದ ತಾಂತ್ರಿಕ ತಜ್ಞರನ್ನು ಆ ರಾಷ್ಟ್ರಗಳಲ್ಲಿ ಕೆಲಸಕ್ಕೆಂದು ಕಳಿಸುವದು ಮತ್ತು ಅಂಕಿ-ಅಂಶ ಗಳಿದ್ದ ಪುಸ್ತಕ-ಪತ್ರಿಕೆಗಳ ಮೂಲಕ ಕಾರ್ಯಪ್ರಚಾರ ಮತ್ತು ಜ್ಞಾನ ಪ್ರಸಾರ ಮಾಡುವದು ಈ ನಿಧಿಯ ಚಟುವಟಿಕೆಗಳಾಗಿವೆ.

**೭. ಪ್ರಪಂಚ ಸ್ವಾಸ್ಥ್ಯಸಂಘಟನೆ**

ಪ್ರಪಂಚ ಸ್ವಾಸ್ಥ್ಯಸಂಘಟನೆಯು ಈ ಬಗೆಯ ಇನ್ನೊಂದು ಪ್ರಮುಖ ಸಂಸ್ಥೆಯಾಗಿದೆ. ಅಶಕ್ತಿ ಮತ್ತು ರೋಗಗಳನ್ನು ಕಡಿಮೆಮಾಡುವದಷ್ಟೇ ಅಲ್ಲದೆ ವಿಶ್ವದ ಎಲ್ಲ ಪ್ರಜೆಗಳ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಕ್ಷೇಮವನ್ನು ಸಾಧಿಸುವದೂ ಈ ಸಂಘಟನೆಯ ಪರಮಧ್ಯೇಯವಾಗಿದೆ. ಈ ಗುರಿಯನ್ನು ಸಾಧಿಸುವದಕ್ಕಾಗಿ ನಿಪುಣರನ್ನು ಒದಗಿಸುವದು, ಸಾಧನಗಳನ್ನು ಪೂರೈಸುವದು, ಸಮಾಚಾರವನ್ನು ಸಲ್ಲಿಸುವದು, ಸಾಂಕ್ರಾಮಿಕ ರೋಗ ಗಳನ್ನು ತಡೆಗಟ್ಟುವದು, ಸಂಶೋಧನವನ್ನು ಪ್ರೋತ್ಸಾಹಿಸುವದು, ನೈರ್ಮಲ್ಯ ಗ್ರಹನಿರ್ಮಾಣ, ಪೋಷಕ ಆಹಾರದ ಪ್ರಚಾರ, ವಿಶ್ರಾಂತಿಯ ಅವಶ್ಯಕತೆ ಮೊದಲಾದ ಕಾರ್ಯವನ್ನು ಈ ಸಂಸ್ಥೆಯು ಕೈಕೊಂಡಿದೆ. ಇದು ೧೯೪೮ರಲ್ಲಿ ಸ್ಥಾಪಿತವಾಗಿದೆ. ಈ ಸಂಘಟನೆಯ ಆಡಳಿತವು ಪ್ರಪಂಚ ಸ್ವಾಸ್ಥ್ಯ ಸಮಿತಿ, ನಿರ್ದೇಶಕ ಮಂಡಲ ಮತ್ತು ಕಾರ್ಯಾಲಯ ಇವುಗಳ ಮೂಲಕ ನಡೆಯುತ್ತದೆ. ಆದರೆ ಈ ಸಂಸ್ಥೆಯ ವೈಶಿಷ್ಟ್ಯವು ತಜ್ಞಸಮಿತಿಗಳಲ್ಲಿ ಮತ್ತು ಅದರ ಆರು ಪ್ರಾದೇಶಿಕ ಕಾರ್ಯಾಲಯಗಳಲ್ಲಿ ಕಂಡುಬರುತ್ತದೆ.

ಡಿ. ಡಿ. ಟಿ. ಮತ್ತು ಬಿ. ಸಿ. ಜಿ. ಔಷಧಿಗಳ ಮೂಲಕ ಪ್ರಾಮುಖ್ಯ ವಾಗಿ ಈ ಸಂಘಟನೆಯು ತನ್ನ ಸೇವೆಯನ್ನು ಸಲ್ಲಿಸುತ್ತಿದೆ. ಇನ್ನೊಂದು

ದಿವ್ಯೌಷಧಿಯೆಂದರೆ ಸಂಜೀವಿನಿ ಎಂಬ ಹೆಸರನ್ನು ಗಳಿಸಿದ ಪೆನ್ಸಿಲಿನ್ ಎಂಬುದು. ಈ ಸಾಧನಗಳ ಮೂಲಕ ಪ್ರಪಂಚದ ವಿವಿಧರಾಷ್ಟ್ರಗಳಲ್ಲಿ ಕ್ಷಯ, ಬಾಲರೋಗ, ಕುಷ್ಟರೋಗ, ವಿಷಮಜ್ವರ, ಮಲೇರಿಯಾಗಳೇ ಮೊದಲಾದ ಎಷ್ಟೋ ಬೇನೆಗಳನ್ನು ಸದೆಬಡೆಯಲಿಕ್ಕೆ ಈ ಸಂಘಟನೆಯು ಪ್ರಯತ್ನಿಸುತ್ತಿದೆ.

ವಿಶಿಷ್ಟ ವಿಷಯಗಳಲ್ಲಿ ಮಾರ್ಗದರ್ಶನ ಮಾಡುವದಲ್ಲದೆ ಈ ಸಂಘಟನೆಯು ಸಾರ್ವಜನಿಕ ಸ್ವಾಸ್ಥ್ಯ, ಶಿಶು ಮತ್ತು ಮಾತೃಸಾಸ್ಥ್ಯ, ದಾಯಿತನ, ಔದ್ಯೋಗಿಕ ಆರೋಗ್ಯ, ಮಾನಸಿಕ ಸ್ವಾಸ್ಥ್ಯ, ಪೋಷಣೆ, ನೈರ್ಮಲ್ಯ ಮೊದಲಾದವುಗಳಲ್ಲಿ ಕೂಡ ಸಹಾಯ, ಸಂಶೋಧನಫಲ, ಮತ್ತು ಸಹಕಾರಗಳನ್ನು ನೀಡುತ್ತದೆ.

## ೮. ಅಂತರ್ರಾಷ್ಟ್ರೀಯ ಅಂಚೆಯಸಂಘ

ಅಂತರ್ರಾಷ್ಟ್ರೀಯ ಅಂಚೆಯಸಂಘವು ಸಂಯುಕ್ತ ರಾಷ್ಟ್ರಸಂಘದ ಒಂದು ವಿಶಿಷ್ಟ ಸಂಸ್ಥೆಯಾಗಿದ್ದರೂ ಅದರ ಸ್ಥಾಪನೆಯಾಗಿ ಮುಕ್ಕಾಲು ಶತಮಾನವಾಗಿದೆ. ಮುಂದೆ ೧೯೪೮ರಲ್ಲಿ ಇದು ಸಂಯುಕ್ತರಾಷ್ಟ್ರಸಂಘದ ಪರಿವಾರದಲ್ಲಿ ಬಂದು ಸೇರಿತು. ಅಂಚೆಯ ಮಾರ್ಗವನ್ನು ಗೊತ್ತುಪಡಿಸುವದು, ದರಗಳನ್ನು ನಿರ್ಧರಿಸುವದು, ಅಂತರ್ರಾಷ್ಟ್ರೀಯ ಅಂಚೆಯು ವ್ಯವಸ್ಥಿತವಾದ ರೀತಿಯಲ್ಲಿ ನಡೆಯುವದು ಈ ಸಂಘದ ಕರ್ತವ್ಯಗಳಲ್ಲಿ ಬರುತ್ತವೆ. ಇದೊಂದು ಸ್ವತಂತ್ರವಾದ ಸಂಸ್ಥೆಯಾದರೂ ಸಂಯುಕ್ತರಾಷ್ಟ್ರದ ಅಂಚೆಯ ಆಡಳಿತ ಎಂಬ ಶಾಖೆಯ ಮೂಲಕ ತನ್ನ ಸಂಬಂಧವನ್ನು ಸಂಯುಕ್ತರಾಷ್ಟ್ರಸಂಘದ ಸಂಗಡ ಇಟ್ಟುಕೊಂಡಿದೆ. ಎಲ್ಲ ಕಾರ್ಯವನ್ನು ಅಂತರ್ರಾಷ್ಟ್ರೀಯ ಕಾರ್ಯಮಂಡಲದ ಮೂಲಕ ಕೈಕೊಳ್ಳುತ್ತದೆ. ಇದರ ವಾರ್ಷಿಕ ವೆಚ್ಚವು ವಾರ್ಷಿಕ ಅಧಿವೇಶನದಲ್ಲಿ ನಿಶ್ಚಯಗೊಂಡು, ಪ್ರತಿಯೊಂದು ಸದಸ್ಯ ರಾಷ್ಟ್ರದಿಂದ ಅದನ್ನು ವಂತಿಗೆಯ ರೂಪದಲ್ಲಿ ಪಡೆಯುತ್ತಿದೆ.

ಅಂತರ್ರಾಷ್ಟ್ರೀಯ ಅಂಚೆಯಸಂಘದ ಮುಖ್ಯ ಕಾರ್ಯಾಲಯವು ಸ್ವಿತ್ಸರ್ಲಂಡ್ ದೇಶದ ಬರ್ನ್ ನಗರದಲ್ಲಿ ಇರುತ್ತದೆ.

### ೯. ಅಂತರಾಷ್ಟ್ರೀಯ ತಂತಿಸಂಪರ್ಕಸಂಘ

ಆ ಮೇಲೆ ಬರುವದು ಅಂತರ್‍ರಾಷ್ಟ್ರೀಯ ತಂತೀಸಂಪರ್ಕಸಂಘ. ಸ್ವಾಭಾವಿಕವಾಗಿಯೆ ಈ ಸಂಸ್ಥೆಯ ಕಾರ್ಯಕ್ಷೇತ್ರವು ಅಂಚೆಯ ಸಂಘಕ್ಕೆ ಸಂಬಂಧಿಸಿರುತ್ತದೆ. ತಂತಿಯ ದರಗಳನ್ನು ಗೊತ್ತುಪಡಿಸುವದು, ರೇಡಿಯೊ ಕ್ಷೇತ್ರ ಮತ್ತು ಮಾಧ್ಯಮಗಳನ್ನು ನಿರ್ಧರಿಸುವದು, ತಾಂತ್ರಿಕ ತಜ್ಞರನ್ನು ಕಳಿಸುವದು, ಮತ್ತು ಈ ಎಲ್ಲ ವಿಷಯಗಳಿಗೆ ಸಂಬಂಧಪಟ್ಟ ಪ್ರಯೋಗಗಳನ್ನು ನಡೆಯಿಸಿ, ಸಮಾಚಾರವನ್ನು ಹರಡುವದು ಈ ಸಂಘದ ಕಾರ್ಯಕಲಾಪಗಳಾಗಿವೆ. ಇದು ಕೂಡ ಅಂಚೆಯ ಸಂಘಕ್ಕಿಂತ ಮೊದಲು ಅಂದರೆ ೧೮೬೫ ರಲ್ಲಿಯೆ ಸ್ಥಾಪಿತವಾಗಿದ್ದರೂ ೧೯೪೭ರಲ್ಲಿ ಸಂಯುಕ್ತ ರಾಷ್ಟ್ರಸಂಘದ ವಿಶಿಷ್ಟ ಸಂಸ್ಥೆಯೊಂದಾಗಿದೆ. ಈ ಸಂಘದ ಆಡಳಿತ ಮತ್ತು ಕಾರ್ಯರಚನೆಯು ಪ್ರತಿನಿಧಿ ಸಮ್ಮೇಳನ, ಆಡಳಿತ ಸಭೆ ಮತ್ತು ಕಾರ್ಯಾಲಯಗಳಲ್ಲದೆ ಇನ್ನು ಕೆಲವು ವಿಶಿಷ್ಟ ಸಭೆಗಳ ಮೂಲಕ ನಡೆಯುತ್ತದೆ. ಇದರ ಮುಖ್ಯ ಕಾರ್ಯಕ್ರಮವೆಂದರೆ ತಂತಿಗಳು, ದೂರವಾಣಿ, ಆಕಾಶವಾಣಿ, ಕೇಬಲ್ ಮೊದಲಾದ ಸಂಪರ್ಕ ಸಾಧನಗಳ ಪ್ರಚಾರ ಮತ್ತು ಉಪಯೋಗಗಳು ಪ್ರಪಂಚದಲ್ಲಿ ಸರಿಯಾಗಿಯೂ, ಸುಲಭದಲ್ಲಿಯೂ ಜರುಗುವಂತೆ ಮಾಡುವದೇ ಆಗಿದೆ. ಈ ಉದ್ದೇಶದ ಸಾಧನೆಗೆಂದು ಅಂತರ್‍ರಾಷ್ಟ್ರೀಯ ತಂತೀಸಂಪರ್ಕಸಂಘವು ಕೆಲವು ಪ್ರತ್ಯಕ್ಷ ಪ್ರಯೋಗಗಳನ್ನು ಕೈಕೊಳ್ಳುತ್ತದೆ.

### ೧೦. ಪ್ರಪಂಚ ಅಂತರಿಕ್ಷ ವಿಜ್ಞಾನಸಂಘಟನೆ

ಪ್ರಪಂಚ ಅಂತರಿಕ್ಷ ವಿಜ್ಞಾನಸಂಘಟನೆಯು ಸಂಯುಕ್ತರಾಷ್ಟ್ರ ಸಂಘದ ವಿಶಿಷ್ಟ ಸಂಸ್ಥೆಗಳಲ್ಲಿ ಇನ್ನೊಂದಾಗಿದೆ. ಖಗೋಲ ಶಾಸ್ತ್ರದ ವ್ಯವಸ್ಥಿತ ಅಧ್ಯಯನ ಮತ್ತು ಆ ವಿಷಯವಾಗಿ ಕೈಕೊಂಡ ಸಂಶೋಧನ ಈ ಸಂಘಟನೆಯ ಕಾಣಿಕೆಗಳಾಗಿವೆ. ಮನುಷ್ಯನಿಗೆ ಸಂಬಂಧಿಸಿದಂತೆ ಅಂತರಿಕ್ಷದ ಜ್ಞಾನವನ್ನು ಅಭಿವೃದ್ಧಿಗೊಳಿಸಿ, ಅದರ ಲಾಭವು ಎಲ್ಲ ರಾಷ್ಟ್ರಗಳ ಪ್ರಜೆಗಳಿಗೆ ಸಲ್ಲುವಂತೆ ಈ ಸಂಘಟನೆಯು ಪ್ರಯತ್ನಿಸುತ್ತದೆ. ಹವಾಮಾನದ ವಿಷಯವಾಗಿ ಸಮಾಚಾರವನ್ನು ಸಂಗ್ರಹಿಸಿ, ಅವನ್ನು ಚಿತ್ರಿಸುವದು. ಅದರ ಉಪಯೋಗವು ವಿಮಾನಗಳು, ಹಡಗಗಳು ಮತ್ತು ಕೃಷಿಗಳಿಗೆ ದೊರೆಯುವಂತೆ ಮಾಡುವದು, ಅಲ್ಲಲ್ಲಿ ಹವಾಮಾನ ಕೇಂದ್ರಗಳನ್ನು

ಸ್ಥಾಪಿಸುವದೇ ಮೊದಲಾದ ಕಾರ್ಯವು ಈ ಸಂಘಟನೆಯ ಮುಖಾಂತರ ಜರುಗುತ್ತದೆ.

ಈ ಸಂಘಟನೆಯು ೧೯೬೪ರಲ್ಲಿ ರೂಪುಗೊಂಡಿದೆ. ಒಬ್ಬ ಅಧ್ಯಕ್ಷ ಮತ್ತು ಇಬ್ಬರು ಉಪಾಧ್ಯಕ್ಷರ ನೇತೃತ್ವದಲ್ಲಿ ನಡೆಯುವ ಈ ಸಂಸ್ಥೆಯಲ್ಲಿ ಪ್ರಪಂಚ ಅಂತರಿಕ್ಷ ವಿಜ್ಞಾನ ಸಮ್ಮೇಳನ, ಕಾರ್ಯಮಂಡಲ, ಪ್ರಾದೇಶಿಕ ಸಮಿತಿಗಳು ಮತ್ತು ಕಾರ್ಯಾಲಯ ಎಂಬ ನಾಲ್ಕು ವಿಭಾಗಗಳಿರುತ್ತವೆ. ಸಮ್ಮೇಳನವೇ ಈ ಸಂಘಟನೆಯ ಮೂಲ ವಿಭಾಗವಾಗಿದ್ದು, ಎಲ್ಲ ಸದಸ್ಯ ರಾಷ್ಟ್ರಗಳ ಪ್ರತಿನಿಧಿಗಳಿರುವ ಇದು, ನಾಲ್ಕು ವರ್ಷಗಳಿಗೊಮ್ಮೆಯಾದರೂ ಸೇರುತ್ತದೆ. ಇದೇ ಸಕಲ ಕಾರ್ಯವಿಧಾನವನ್ನು ನೀತಿಯನ್ನು ನಿರ್ಧರಿಸುವ ಮುಖ್ಯ ವಿಭಾಗ. ಆ ಮೇಲೆ ಅದರ ಕಾರ್ಯವು ಕಾರ್ಯಮಂಡಲ, ಪ್ರಾದೇಶಿಕ ಸಮಿತಿಗಳು ಮತ್ತು ಕಾರ್ಯಾಲಯಗಳ ಮುಖಾಂತರ ಪ್ರತ್ಯಕ್ಷವಾಗಿ ಜರುಗುತ್ತದೆ. ಈ ಸಂಘಟನೆಯ ಪ್ರಧಾನ ಕಾರ್ಯಾಲಯವು ಜಿನೀವಾದಲ್ಲಿರುತ್ತದೆ.

ಪ್ರಪಂಚ ಅಂತರಿಕ್ಷ ವಿಜ್ಞಾನಸಂಘಟನೆಯ ಆಶ್ರಯದಲ್ಲಿ ಸಿದ್ಧಗೊಳಿಸಿದ ಅಂತರಾಷ್ಟ್ರೀಯ ಮೇಘ ಚಿತ್ರಮಾಲೆಯು ವಿಜ್ಞಾನ ಪ್ರಪಂಚದಲ್ಲಿ ರೂಪುಗೊಂಡ ಒಂದು ಅದ್ಭುತ ಕಾರ್ಯವೆನಿಸಿದೆ. ಇಷ್ಟರಲ್ಲಿಯೆ ಇದರ ಲಾಭವು ಪ್ರತಿಯೊಂದು ರಾಷ್ಟ್ರಕ್ಕೆ ದೊರೆಯಲಿದೆ. ಈ ಮುಂಚೆ ಖಗೋಲ ಶಾಸ್ತ್ರದಲ್ಲಿ ಕೈಕೊಂಡ ಅನೇಕ ಪ್ರಯೋಗಗಳ ಪ್ರಯೋಜನವು ಎಷ್ಟೋ ರಾಷ್ಟ್ರಗಳಿಗೆ ಆಗುತ್ತಲಿದೆ. ಈ ಸಂಘಟನೆಯ ಪರವಾಗಿ ಸಿದ್ಧವಾದ ಜಲಕೋಶದ ಅಧ್ಯಯನ ಮತ್ತು ರಕ್ಷ ಪ್ರದೇಶದ ಸಂಶೋಧನಗಳು ಮಾನವಕುಲಕ್ಕೆ ಅಮೊಲ್ಯವಾದ ಕಾಣಿಕೆಗಳಾಗಿ ದೊರೆಯಲಿವೆ. ಅವುಗಳಂತೆಯೆ ಬಿರುಗಾಳಿಯ ಅವಲೋಕನ, ಹಿಮ ಪ್ರದೇಶದ ವರ್ಗೀಕರಣಗಳೆ ಮೊದಲಾದ ವಿಷಯಗಳತ್ತ ಈ ಸಂಘಟನೆಯು ಆಗಾಗ್ಗೆ ಗಮನವನ್ನು ಕೊಡುತ್ತಲಿದೆ. ಈ ಬಗೆಯ ವಾಯು ವಿಷಯಕ, ಭೂಗೋಲ, ಖಗೋಲಗಳ ಬಗ್ಗೆ ಮತ್ತು ಅಂತರಿಕ್ಷದ ವಿಷಯವಾಗಿ ಈ ಸಂಘಟನೆಯು ನಡೆಯಿಸಿದ ಜ್ಞಾನ ಪ್ರಸಾರ ಕಾರ್ಯವು ಮಾನವನ ಪ್ರಗತಿಗೆ ಪ್ರಮುಖವಾದ ಸಹಾಯವಾಗಬಹುದಾಗಿದೆ.

ಆರು ಅಂಗಸಂಸ್ಥೆಗಳು ಮತ್ತು ಹತ್ತು ವಿಶಿಷ್ಟ ಸಂಸ್ಥೆಗಳ ಮುಖಾಂತರ ಸಂಯುಕ್ತರಾಷ್ಟ್ರಸಂಘವು ತನ್ನ ಧ್ಯೇಯವನ್ನು ಸಾಧಿಸುವವಕ್ಕೆಂದು ಕಾರ್ಯ ದಲ್ಲಿ ತೊಡಗಿದ್ದರೂ ಮಾನವ ಸಮಾಜದ ಇನ್ನೂ ಎಷ್ಟೋ ಅಂಗ-ಪ್ರತ್ಯಂಗ ಗಳು ಉಳಿದಿರುವವೇನು ಆಶ್ಚರ್ಯದ ವಿಷಯವಲ್ಲ. ಕಳೆದ ಎಷ್ಟೋ ಸಾವಿರ ವರ್ಷಗಳಿಂದ ಮಾನವಕುಲವು ತನ್ನ ಸಮಾಜ ರಚನೆಯನ್ನು ಕೇವಲ ತನ್ನ ಅನುಕೂಲಕ್ಕೆಂದು ಬೆಳೆಯಿಸಿಕೊಳ್ಳುತ್ತ, ಇಂದು ಅವನ್ನು ಅತ್ಯಂತ ತೊಡಕಿ ನಿಂದ ತುಂಬಿದುದನ್ನಾಗಿ ಮಾಡಿದವೇನೊ ಎಂಬಂತೆ ಕ್ಲಿಷ್ಟಗೊಳಿಸಿದೆ. ಒಂದು ರೀತಿಯಿಂದ ಈ ಬಗೆಯ ರಚನೆಯು ಕ್ಲಿಷ್ಟವಾಗಿ ತೋರುತ್ತಿದ್ದರೂ ಅದೇ ಅವನ ವೈಶಿಷ್ಟ್ಯವೂ ಆಗಿರುವದು ಇನ್ನೊಂದು ಮಾತು. ತನ್ನ ಸೌಕರ್ಯ ಗಳನ್ನು ಬೆಳೆಯಿಸಿಕೊಂಡು ಮುಂದುವರಿಯುವ ಅವನ ಪ್ರಯತ್ನದಲ್ಲಿ ಆತನು ಸುಖ-ಶಾಂತಿಗಳನ್ನೆ ಧ್ಯೇಯವಾಗಿರಿಸಿಕೊಂಡ ಸಂಗತಿಯನ್ನು ಮರೆಯ ದಿದ್ದರೆ ಅವನು ನಿಜವಾಗಿ ಪ್ರಗತಿಯನ್ನು ಸಾಧಿಸುವನು. ತನ್ನ ಸೃಷ್ಟಿಗೆ ತಾನು ದಾಸನಾಗದೆ ಅದನ್ನು ಎಷ್ಟೇ ಸಾಧನಗಳಿಂದ ಸಿಂಗರಿಸಿದರೂ ಆ ಸಾಧನಗಳು ಅವನ ಸಾಂಸ್ಕೃತಿಕ ಜೀವನದ ಪ್ರತಿನಿಧಿಗಳಾಗಿಯೆ ಕಂಗೊಳಿಸು ವವಷ್ಟೆ! ಅಂತೆಯೆ ಮೇಲೆ ಕಾಣಿಸಿದ ಹತ್ತು ವಿಶಿಷ್ಟ ಸಂಸ್ಥೆಗಳಿಗೆ ಅಸಂಖ್ಯ ಉಪಸಮಿತಿಗಳು ಮತ್ತು ಶಾಖಾ ಕಾರ್ಯಾಲಯಗಳಿರುವದು ಸ್ವಾಭಾವಿಕ ವಾಗಿಯೆ ತೋರುವದು.

ಆದರೆ ಈ ಹತ್ತು ಸಂಸ್ಥೆಗಳ ಜೊತೆಯಲ್ಲಿ ಇನ್ನೂ ಎರಡು ಇಷ್ಟರ ಲ್ಲಿಯೆ ಸಂಯುಕ್ತರಾಷ್ಟ್ರಸಂಘದ ಮುದ್ರೆಯನ್ನು ಪಡೆದು ಕಾರ್ಯರಂಗಕ್ಕೆ ಇಳಿಯುತ್ತಲಿವೆ. ಅವುಗಳಲ್ಲಿ ಮೊದಲನೆಯದು ಅಂತರ್ರಾಷ್ಟ್ರೀಯ ಸಾಗರ ಸಂಪರ್ಕ ಸಂಘಟನೆಯಾಗಿದ್ದರೆ ಎರಡನೆಯದು ಅಂತರ್ರಾಷ್ಟ್ರೀಯ ವ್ಯಾಪಾರ ಸಂಘಟನೆಯಾಗಿದೆ. ಹಡಗುಗಳ ಸಂಚಾರವು ಅನಿರ್ಬಂಧವಾಗಿ ಸಾಗು ವಂತೆ ಮಾಡುವದು, ನೌಕಾಪಡೆಯ ವಾಹನಗಳು ಸುರಕ್ಷಿತ ಮತ್ತು ಸುಕರ ವಾಗುವಂತೆ ಎಲ್ಲ ರಾಷ್ಟ್ರಗಳಿಗೂ ಸಮಾನವೆನಿಸುವ ನಿಯಮಗಳನ್ನು ಗೊತ್ತು ಪಡಿಸುವದು, ಪ್ರಪಂಚದಲ್ಲಿ ಉಪಲಬ್ಧವಿರುವ ಹಡಗುಗಳ ಸಹಾಯದಿಂದ ಯಾವ ಭೇದಭಾವವೂ ಇಲ್ಲದೆ ವಿದೇಶ ವ್ಯಾಪಾರವನ್ನು ಜರುಗಿಸುವದು ಮತ್ತು ವಿವಿಧ ರಾಷ್ಟ್ರಗಳು ಮಾಡಿಕೊಂಡ ತಮ್ಮವೇ ಆದ ನಿಯಂತ್ರಣಾದಿ

ಗಳು ಅನುಚಿತ ಕಂಡಲ್ಲಿ ಅವುಗಳನ್ನು ಬದಲಿಸುವದು ಇವೇ ಮೊದಲಾದ ವಿಷಯಗಳ ಕಾರ್ಯವು ಸಾಗರ-ಸಂಪರ್ಕಸಂಘಟನೆಯ ಪರವಾಗಿ ಜರುಗುತ್ತದೆ.

## ೧೧. ಅಂತರ್ರಾಷ್ಟ್ರೀಯ ಸಾಗರ-ಸಂಪರ್ಕಸಂಘಟನೆ

ಈ ಸಂಘಟನೆಯು ಪ್ರಪಂಚದ ಇಪ್ಪತ್ತೊಂದು ರಾಷ್ಟ್ರಗಳು—ಒಂದು ದಶಲಕ್ಷ ಟನ್ ಯಾತ್ರೆಯ ಹಡಗುಪಡೆಯ ಸ್ವಾಮಿತ್ವವಿದ್ದ ಇಪ್ಪತ್ತೊಂದು ರಾಷ್ಟ್ರಗಳು-ಒಪ್ಪಂದಕ್ಕೆ ಅಂಕಿತವನ್ನು ಹಾಕಿದೊಡನೆ ಅಸ್ತಿತ್ವದಲ್ಲಿ ಬರುತ್ತದೆ. ಈಗಾಗಲೆ ಅಷ್ಟು ಪ್ರಮಾಣದ ಹಡಗುಗಳಿದ್ದ ಏಳು ರಾಷ್ಟ್ರಗಳು ತಮ್ಮ ಸಮ್ಮತಿಯನ್ನು ಸೂಚಿಸಿವೆ; ಆದರೆ ಸಂಖ್ಯೆಯಲ್ಲಿ ಇಪ್ಪತ್ತೊಂದು ರಾಷ್ಟ್ರಗಳು ಮುಂಬಂದ ಮೇಲೆಯೆ ಅದಕ್ಕೆ ಅಧಿಕೃತ ಸ್ಥಾನವು ಪ್ರಾಪ್ತವಾಗುವದು. ಅಲ್ಲಿಯ ವರೆಗೆ ಕೆಲವು ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ ಪ್ರಾರಂಭಿಕ ಸಮಿತಿಯು ಕಾರ್ಯ ಮಾಡುತ್ತಲಿದೆ.

ವಾಡಿಕೆಯಂತೆ ಈ ಸಂಘಟನೆಯ ಕಾರ್ಯವೂ ಸಮಿತಿ, ಕಾರ್ಯ ಮಂಡಲ, ಸಾಗರ-ಸಂರಕ್ಷಣ ಸಮಿತಿ ಮತ್ತು ಕಾರ್ಯಾಲಯಗಳ ಮೂಲಕ ನಡೆಯುತ್ತದೆ. ಸಂಚಾರದ ನೀತಿಯನ್ನು ನಿರ್ಧರಿಸುವ ಮತ್ತು ನಿಯಮ ಗಳನ್ನು ನಿಶ್ಚಯಗೊಳಿಸುವದು ಸಮಿತಿಯ ಪ್ರಮುಖ ವಿಭಾಗವಾಗಿದ್ದು ಅದರ ಸಭೆಗಳು ಎರಡು ವರ್ಷಗಳಿಗೆ ಒಂದಾವರ್ತಿ ಸೇರುತ್ತವೆ. ಈ ಸಮಿತಿಯಲ್ಲಿ ಎಲ್ಲ ಸದಸ್ಯ ರಾಷ್ಟ್ರಗಳ ಪ್ರತಿನಿಧಿಗಳು ಸದಸ್ಯರಾಗಿರುತ್ತಾರೆ. ಇತ್ತ ಕಾರ್ಯಮಂಡಲಕ್ಕೆ ಹದಿನಾರು ಜನರು ಸದಸ್ಯರಿದ್ದು ಅವರಲ್ಲಿ ಎಂಟು ಜನರು ನೌಕಾಪಡೆಗಳಿದ್ದ ರಾಷ್ಟ್ರಗಳ ಪ್ರತಿನಿಧಿಗಳೂ ಇನ್ನೆಂಟು ಜನರು ವಿದೇಶ ವ್ಯಾಪಾರದಲ್ಲಿ ಮುಂದುವರಿದ ರಾಷ್ಟ್ರಗಳ ಪ್ರತಿನಿಧಿಗಳೂ ಇರುತ್ತಾರೆ. ಸಾಗರ ಸಂರಕ್ಷಣಸಮಿತಿಯ ಕಾರ್ಯವು ಸಾಗರ ಸಂಚಾರವು ಕ್ಷೇಮವಾಗಿ ಜರುಗುವಂತೆ ಮಾಡುವದಾಗಿದ್ದರೆ, ಕಾರ್ಯಮಂಡಲ ಮತ್ತು ಕಾರ್ಯಾಲಯಗಳು ಮಿಕ್ಕ ಎರಡು ವಿಭಾಗಗಳು ಸಿದ್ಧಗೊಳಿಸಿದ ಕಾರ್ಯಕ್ರಮ ವನ್ನು ಜಾರಿಯಲ್ಲಿತರುವ ಹೊಣೆಯನ್ನು ಹೊತ್ತುಕೊಂಡಿರುತ್ತವೆ.

## ೧೨. ಅಂತರ್ರಾಷ್ಟ್ರೀಯ ವ್ಯಾಪಾರಸಂಘಟನೆ

ಅಂತರ್ರಾಷ್ಟ್ರೀಯ ವ್ಯಾಪಾರ ಸಂಘಟನೆಯು ಸಂಯುಕ್ತರಾಷ್ಟ್ರಸಂಘದ ಹನ್ನೆರಡನೆಯ ವಿಶಿಷ್ಟ ಸಂಸ್ಥೆಯಾದಂತೆಯೆ ಅತ್ಯಂತ ಮಹತ್ವಪೂರ್ಣ ಸಂಸ್ಥೆಯೂ ಆಗಿದೆ. ಹದಿನೆಂಟನೆಯ ಶತಮಾನದಲ್ಲಿ ಧರ್ಮದ ಕಾರಣವಾಗಿ ಪ್ರಪಂಚದ ರಾಷ್ಟ್ರಗಳಲ್ಲಿ ಅಂತಃಕಲಹಗಳು ಜರುಗುತ್ತಿದ್ದಂತೆಯೆ ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಪಂಚದ ಭೂಭಾಗದ ಮೇಲೆ ಸ್ವಾಮಿತ್ವವನ್ನು ಪಡೆಯುವದಕ್ಕಾಗಿ ಮಹಾಯುದ್ಧಗಳು ನಡೆಯುತ್ತಿದ್ದುವು. ಆದರೆ ಈ ಇಪ್ಪತ್ತನೆಯ ಶತಮಾನದಲ್ಲಿ ಧಾರ್ಮಿಕ ಪ್ರಭುತ್ವವಾಗಲಿ, ರಾಜಕೀಯ ಒಡೆತನವಾಗಲಿ ಆಕರ್ಷಣೆಯಾಗಿಲ್ಲ; ಈಗ ಪ್ರಬಲ ರಾಷ್ಟ್ರಗಳಲ್ಲಿ ವ್ಯಾಪಾರದ ಮೂಲಕ ವರ್ಚಸ್ಸನ್ನು ಪಡೆದುಕೊಳ್ಳುವ ಪ್ರಯತ್ನಗಳು ತಲೆದೋರುವುದು ಈ ಶತಮಾನದ ವೈಶಿಷ್ಟ್ಯವೆಂದೆನ್ನಬಹುದು. ವ್ಯಾಪಾರದ ಮೂಲಕ ಲಾಭವನ್ನು ಪಡೆದು, ಬಂದ ಹಣದ ಸಾಮರ್ಥ್ಯದಿಂದ ಅನ್ಯರ ಮೇಲೆ ಅಧಿಕಾರವನ್ನು ನಡೆಯಿಸುವ ಇಲ್ಲವೆ ಅವರ ವಿಷಯವಾಗಿ ಅನುಕಂಪೆಯನ್ನು ತಳೆಯುವದು ಇಂದಿನ ಮಾರ್ಗವಾಗಿದೆ. ಅಂತೆಯೆ ಅದೇ, ಈ ಶತಕದಲ್ಲಿ ಜರುಗಿದ ಪ್ರಪಂಚ ಯುದ್ಧಗಳ ಮೂಲಕಾರಣವೂ ಆಗಿದೆ. ಪರಸ್ಪರ ಆರ್ಥಿಕ ವಿನಿಮಯವೇನೊ ಜಗತ್ತಿನ ಪ್ರಗತಿಗೆ ಅತ್ಯಗತ್ಯವಾದ ವಿಷಯ. ಆದರೆ ಅದರ ಮೂಲಕ ಅನ್ಯರ ಅವಹೇಳನವನ್ನು ಮಾಡುವದಾಗಲಿ, ಕೆಲವರ ದೌರ್ಬಲ್ಯದ ದುರ್ಲಾಭವನ್ನು ಪಡೆಯಬೇಕೆಂದು ಹಂಬಲಿಸುವದಾಗಲಿ ಸಮ್ಮತವಾದುದಲ್ಲ. ಅಂತೆಯೆ ಆ ಬಗೆಯ ಶೋಷಣೆಯ ಇಲ್ಲವೆ ಸ್ವಾಮಿತ್ವದ ಕಲ್ಪನೆಯ ಕಿಲ್ಬಿಷವು ವ್ಯಾಪಾರಕ್ಕೆ ತಗಲದಂತೆ ಮಾನವಕುಲದ ಉನ್ನತಿಯೆ ಒಂದು ವ್ಯಾಪಾರದ ಧ್ಯೇಯ-ಎಂಬ ಭಾವನೆಯು ನೆಲೆಸುವಂತೆ ಮಾಡುವದೇ ಈ ಅಂತರ್ರಾಷ್ಟ್ರೀಯ ವ್ಯಾಪಾರಸಂಘಟನೆಯ ಉದಾತ್ತ ಉದ್ದೇಶವಾಗಿದೆ.

ಅಂತರ್ರಾಷ್ಟ್ರೀಯ ವ್ಯಾಪಾರಕ್ಕೆ ಸಂಬಂಧಪಟ್ಟ ವಿಷಯಗಳನ್ನು ಮೊದಲು ಹವಾನಾದಲ್ಲಿ ಸೇರಿದ ಒಂದು ಅಂತರ್ರಾಷ್ಟ್ರೀಯ ಸಮ್ಮೇಳನದಲ್ಲಿ ಚರ್ಚಿಸಲಾಯಿತು. ಆ ಮೇರೆಗೆ ವ್ಯಾಪಾರ ಸಮ್ಮೇಳನ, ಕಾರ್ಯಮಂಡಲ ಮತ್ತು ಪ್ರಧಾನ ನಿರ್ದೇಶಕರ ಮುಖಾಂತರ ಈ ಸಂಘಟನೆಯ ಕಾರ್ಯವು

ನಡೆಯಬೇಕೆಂದು ಗೊತ್ತುಪಡಿಸಲಾಗಿದೆ. ಆ ಪ್ರಾಥಮಿಕ ಸಮ್ಮೇಳನದ ನಂತರ ಸ್ವಿಟ್ಸರ್ಲಂಡದ ಜಿನೀವಾದಲ್ಲಿ ಒಂದು, ಇಂಗ್ಲಂಡದ ಟೋರ್ಕೆಯಲ್ಲಿ ಒಂದು, ಮತ್ತು ಫ್ರಾನ್ಸದ ಅನೇಸಿಯದಲ್ಲಿ ಒಂದು ಹೀಗೆ ಮತ್ತೆ ಮೂರು ಸಮ್ಮೇಳನಗಳು ಕಾಲಕಾಲಕ್ಕೆ ಜರುಗಿ, ಈ ಪ್ರಪಂಚದ ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುವಂತೆ, ವ್ಯಾಪಾರ ಮತ್ತು ತೆರಿಗೆಗಳ ಸಾಮಾನ್ಯಸಂಧಿ, ಎಂಬ ಹೆಸರಿನ ಒಂದು ಸಂಧಿಪತ್ರವನ್ನು ಸಿದ್ಧಗೊಳಿಸಿದೆ. ಆ ಒಪ್ಪಂದಕ್ಕೆ ಅಂಕಿತ ಹಾಕಿದ ಎಲ್ಲ ರಾಷ್ಟ್ರಗಳು ವಿದೇಶ ವ್ಯಾಪಾರವು ಸುಗಮವಾಗಿ ಸಾಗುವಂತೆ ಮಾಡಿದ ಕೆಲವು ನಿಯಮ-ನಿರ್ಬಂಧಗಳನ್ನು ಪಾಲಿಸಬೇಕಾಗುತ್ತದೆ. ಈ ಒಪ್ಪಂದದ ಮುಖ್ಯ ಅಂಶಗಳಲ್ಲಿ ಆಯಾತ, ನಿರ್ಯಾತಗಳ ನಿರ್ಬಂಧಗಳ ಪ್ರಶ್ನೆ, ತೆರಿಗೆಗಳನ್ನು ಕಡಿಮೆಮಾಡುವ ಸಮಸ್ಯೆ, ಕೆಲವು ರಾಷ್ಟ್ರಗಳಲ್ಲಿ ಮಾತ್ರ ವ್ಯಾಪಾರಕ್ಕಾಗಿ ಮಾಡಿಕೊಳ್ಳುವ ಸಂಧಿಗಳ ವಿಷಯ, ವ್ಯಾಪಾರದ ಹಣವನ್ನು ಸುಗಮವಾಗಿ ದೇಶದಿಂದ ದೇಶಕ್ಕೆ ಸಾಗಿಸುವ ವಿಚಾರ, ಹಲವು ರಾಷ್ಟ್ರಗಳ ವ್ಯಾಪಾರಕ್ಕೆ ಹಾಕುತ್ತಿರುವ ಆತಂಕಗಳು ಇವೇ ಮೊದಲಾದುವು ಇರುತ್ತವೆ. ವಿದೇಶ ವ್ಯಾಪಾರದ ಪ್ರಮಾಣವು ಬೆಳೆಯುವಂತೆ ಮತ್ತು ಅದರ ಮಾರ್ಗವು ಸುಲಭವಾಗುವಂತೆ ಮಾಡುವ ಈ ಸಂಘಟನೆಯ ಪ್ರಯತ್ನವು ಶ್ಲಾಘನೀಯವಾಗಿದೆ.

ಯುದ್ಧವು ಅತ್ಯಂತ ವಿಘಾತಕವಾದ ವಿಷಯ. ಆದರೆ ಸಾಮಾಜಿಕ ಇಲ್ಲವೆ ಆರ್ಥಿಕ ಕಾರಣಗಳಿಂದ ಕ್ರಾಂತಿಯಾಗಿ ಯಾವುದೊಂದು ರಾಷ್ಟ್ರದಲ್ಲಿಯೆ ಆಗಲಿ, ಪ್ರದೇಶದಲ್ಲಿಯೆ ಆಗಲಿ, ಹಿಂಸಾತ್ಮಕ ಕೃತ್ಯಗಳು ಜರುಗಿದರೆ ಆ ಪ್ರಸಂಗದ ಪರಿಣಾಮಗಳೂ ಅಷ್ಟೆ ಭಯಂಕರವಾಗಿರುತ್ತವೆ. ಇಂತಹ ಯಾವುದೊಂದು ಸಾಮಾಜಿಕ ದುರ್ಘಟನೆಯು ಸಂಭವಿಸಿದರೆ ಅದರ ದುರ್ಧರ ಫಲಗಳು ಎಷ್ಟೋ ವರ್ಷಗಳ ವರೆಗೆ ಆ ಸಮಾಜವನ್ನು ಕಾಡುತ್ತವೆ. ಯಾವುದೊಂದು ಕಾರಣದಿಂದ ಒಂದು ಸಂಸಾರವೆ ಆಗಲಿ, ಒಂದು ಸಮಾಜವೆ ಆಗಲಿ, ಒಡೆದು, ಕೆಟ್ಟು, ಶಿಥಿಲವಾಯಿತೆಂದರೆ ಅದನ್ನು ಮತ್ತೆ ಬಂಧುರವಾಗಿ ಕಟ್ಟಲಿಕ್ಕೆ ಹೆಚ್ಚು ಕಾಲ ಮತ್ತು ಶ್ರಮಗಳು ಹಿಡಿಯುತ್ತವೆ. ಇಂತಹ ಪ್ರಸಂಗಗಳಲ್ಲಿ ಸಾಮಾನ್ಯವಾಗಿ ನಿರ್ದೋಷಿಗಳಾದ ಸ್ತ್ರೀಯರು, ಮಕ್ಕಳು ಮತ್ತು ಮುದುಕರ ಸ್ಥಿತಿಯು ಅತ್ಯಂತ ಶೋಚನೀಯವಾಗಿರುತ್ತದೆ. ಮೊದಲೇ

ಅಶಕ್ತರು ಮತ್ತು ದುರ್ಬಲರು ಆದ ಅವರನ್ನು ಕ್ರಾಂತಿಯ ಒಂದು ಆವೇಶದಲ್ಲಿ ಬಲಿಷ್ಠರಾದವರು ಮತ್ತು ಸಂಘಟಿತರಾದವರು ಪ್ರತಿಯೊಂದು ಬಗೆಯ ಹಿಂಸಾಚಾರ ಮತ್ತು ಅನ್ಯಾಯಗಳಿಗೆ ಈಡು ಮಾಡುತ್ತಾರೆ. ಈ ಬಗೆಯ ಆಚರಣೆಯಲ್ಲಿ ಆಹುತಿಯಾಗಿ ಸಾಯುವವರೆಷ್ಟೋ ಜನರಾದರೂ, ಕ್ರೂರ ಮತ್ತು ನೀಚ ಜನರ ಹೀನ ಕೃತ್ಯಗಳಿಗೆ ಬಲಿಯಾಗಿ ಬಳಲುತ್ತ, ನಿರ್ಗತಿಕರಾಗುವ ಜನರ ಸಂಖ್ಯೆಯೂ ದೊಡ್ಡದಾಗಿರುತ್ತದೆ. ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಇಲ್ಲವೆ ಮತ್ತೆ ಯಾವುದೇ ಕಾರಣದಿಂದ ಸಮಾಜದಲ್ಲಿ ಅಶಾಂತಿಯು ತಲೆದೋರಲಿ, ಅದರ ಫಲವಾಗಿ ಅಸಂಖ್ಯ ಶರಣಾರ್ಥಿಗಳು ಗತಿಗೆಡುವದು ಇಂತಹ ಸನ್ನಿವೇಶಗಳಲ್ಲಿ ಕಂಡುಬರುತ್ತದೆ.

ಈ ಶತಮಾನದಲ್ಲಿ ಸಂಭವಿಸಿದ ಎರಡು ಮಹಾಯುದ್ಧಗಳು ಮತ್ತು ಭಾರತೀಯ ಸ್ವಾತಂತ್ರ್ಯದ ಪರ್ವಕಾಲದಲ್ಲಿ ಜರುಗಿದ ಭಾರತ-ಪಾಕಿಸ್ತಾನ ವಿಭಜನೆಗಳ ಸಮಯದಲ್ಲಿಯೂ ಇಂತಹ ನಿಷ್ಕ್ರಾಂತದ. ನಿರ್ಗತಿಕರ ಮತ್ತು ನಿಸ್ಸಹಾಯಕರ ಸಮಸ್ಯೆಯೂ ಬೃಹದಾಕಾರವನ್ನು ಪಡೆದ ಸಂಗತಿಯು ಸಾಮಾನ್ಯವಾಗಿ ಎಲ್ಲರಿಗೂ ತಿಳಿದುದಾಗಿದೆ. ಇಂತಹ ಶರಣಾರ್ಥಿಗಳ ಶೋಧ, ಸೇವೆ ಮತ್ತು ಸಂರಕ್ಷಣದ ದೃಷ್ಟಿಯಿಂದ ಸಂಯುಕ್ತ ರಾಷ್ಟ್ರಸಂಘದ ಇನ್ನೊಂದು ವಿಶಿಷ್ಟ ಸಂಸ್ಥೆಯಾಗಿ ಅಂತರ್‌ರಾಷ್ಟ್ರೀಯ ಶರಣಾರ್ಥಿ ಸಂಘಟನೆ ಯೆಂಬುದೊಂದು ೧೯೫೨ರ ವರೆಗೆ ಅಸ್ತಿತ್ವದಲ್ಲಿದ್ದು, ಈಗ ಅದು ತನ್ನ ಕಾರ್ಯದ ಬಹುಭಾಗವನ್ನು ಈಡೇರಿಸಿದ್ದುದರಿಂದ ಕಾರ್ಯನಿವೃತ್ತ ಆಗಿದೆ. ಈ ಸಂಘಟನೆಯು ಕಾರ್ಯ ಮಾಡುತ್ತಿದ್ದ ಐದಾರು ವರ್ಷಗಳಲ್ಲಿ ಅದು ಲಕ್ಷಗಟ್ಟಲೆ ಜನರನ್ನು ಹುಡುಕಿ, ಪೋಷಣೆಯನ್ನು ನೀಡಿ, ರಕ್ಷಿಸಿ, ಅವರಿಗೆ ಸಾಮಾಜಿಕ ಸ್ಥಾನಮಾನಗಳೂ, ಆರ್ಥಿಕ ಸಹಾಯ-ಸಾಮರ್ಥ್ಯಗಳೂ ದೊರೆಯುವಂತೆ ಮಾಡಿತು. ಈಗ ಇನ್ನೂ ಅನೇಕ ಜನ ಬಾಲಕ-ಬಾಲಕಿಯರು ಸ್ತ್ರೀಯರು, ವೃದ್ಧರು ಅದರ ರಕ್ಷಣೆಯನ್ನು ಬಯಸುತ್ತಿದ್ದುದರಿಂದ ಸಂಯುಕ್ತ ರಾಷ್ಟ್ರಸಂಘದ ಸಾಮಾನ್ಯಸಭೆಯು ಶರಣಾರ್ಥಿಗಳ ಪ್ರಧಾನಿ ನಿರ್ದೇಶಕ ಎಂಬ ಒಂದು ಸ್ಥಾನವನ್ನು ನಿರ್ಮಿಸಿ, ಆತನ ಕಾರ್ಯಾಲಯದ ಮುಖಾಂತರ ಈ ಮಹತ್ತರವಾದ ಸೇವೆಯು ಮುಂದುವರಿಯುವಂತೆ ನಿರ್ಧರಿಸಿದೆ.

ಇಂತು ಸಮಾಜದ ಸಕಲ ಕ್ಷೇತ್ರಗಳಲ್ಲಿಯೂ ಪುನರ್ರಚನೆಯ ಕಾರ್ಯವು ಆರಂಭವಾಗುವಂತೆ ಸಂಯುಕ್ತ ರಾಷ್ಟ್ರಸಂಘವು ತನ್ನ ಪ್ರಯತ್ನ ವನ್ನು ಕೈಕೊಂಡಿದೆ. ಮೊದಲು ಕೇವಲ ಯುದ್ಧದ ದುಷ್ಪರಿಣಾಮಗಳನ್ನು ಪರಿಹರಿಸಲಿಕ್ಕೆಂದು, ಆ ಮೇಲೆ ಅಂತಹ ವಿಘಾತಕವಾದ ಯುದ್ಧಗಳು ಜರುಗಲೇಬಾರದು ಎಂಬಂತಹ ಪರಿಸ್ಥಿತಿಯನ್ನು ನಿರ್ಮಿಸಬೇಕೆಂದು ವಿಶ್ವ ಪ್ರಯತ್ನವನ್ನು ಆರಂಭಮಾಡಿ ಇಂದು ಯುದ್ಧಗಳು ಎಸಗಲಿಕ್ಕೆ ಕಾರಣ ವಾದ ಮೂಲ ವಿಷಯಗಳನ್ನೆ ಕಂಡುಹಿಡಿದು, ಅಂತಹ ಸನ್ನಿವೇಶಗಳಲ್ಲಿ ಸುಧಾರಣೆಯನ್ನು ಮಾಡಿ, ಸಮಾಜದ ಇಡಿಯ ವಾತಾವರಣವನ್ನೆ ಪರಿ-ವರ್ತಿಸಬೇಕು ಎಂಬುದು ಇಂದಿನ ಅಂತರ್ರಾಷ್ಟ್ರೀಯ ಸಂಘಟನೆಯ ಉದ್ದೇಶವಾಗಿದೆ. ಯುದ್ಧವನ್ನಾಡುವ ಮನೋವೃತ್ತಿಯನ್ನೆ ಬದಲಿಸಿ ವಿಧಾಯಕ ಕಾರ್ಯದತ್ತ ಮಾನವನ ಮನಸ್ಸನ್ನು ತಿರುವಬೇಕು ಎಂಬುದು ಇಂದಿನ ಹೋರಾಟದ ರಹಸ್ಯವಾಗಿದೆ. ಕೇವಲ ಶಕ್ತಿಯ ಪ್ರಯೋಗದಿಂದ ಪ್ರಬಲವಾದ ಎದುರು ಪಕ್ಷಗಳನ್ನು ಕಟ್ಟಿಕೊಂಡು ಭಯವನ್ನು ಉಂಟು ಮಾಡುವವರ ಸಮ್ಮುಖದಲ್ಲಿ ನಿರ್ಭಯ ಮನೋಭಾವದಿಂದ ತಿರುಗಾಡುವದ ರಿಂದ ಅಥವಾ ಯುದ್ಧಕ್ಕೆ ನೆವವೆಂದು ದೊರೆಯುವ ಕಾರಣಗಳನ್ನು ತಿಳಿದು ಕೊಂಡು ಅವುಗಳನ್ನು ನಿರ್ಮೂಲ ಮಾಡಲೆಳಸುವದರಿಂದ ಯುದ್ಧವು ಎಂದೂ ಪ್ರಪಂಚದಲ್ಲಿ ತಲೆಯೆತ್ತದಂತೆ ಮಾಡುವದು ದುಸ್ತರವಾಗಿ ಕಂಡು ಬಂದಿತು. ಅಂತೆಯೆ ಈ ಎಲ್ಲ ಉಪಾಯಗಳ ಜೊತೆಯಲ್ಲಿಯೆ ಮಾನವನ ಸ್ವಭಾವವನ್ನು ಬದಲಿಸುವದು ಅತ್ಯಂತ ಆವಶ್ಯಕವಾದ ಮಾತು ಎಂಬುದು ಇತ್ತೀಚೆಗೆ ಗೊತ್ತಾದ ರಹಸ್ಯವಾಗಿದೆ.

ಅಂತೆಯೆ ರಾಷ್ಟ್ರಸಂಗಮದ ಸ್ಥಾಪನೆಯ ಕಾಲಕ್ಕೆ ಇಂತಹ ಸಂಸ್ಥೆಯ ಬಗೆಯಲ್ಲಿ ಸ್ವೀಕೃತವಾದ ಉದ್ದೇಶ ಮತ್ತು ಆದರ್ಶಗಳ ವಿಚಾರಗಳಿಗಿಂತ ಸಂಯುಕ್ತರಾಷ್ಟ್ರಸಂಘದ ಅಂಶಗಳು ತೀರ ಭಿನ್ನವಾಗಿವೆ; ವ್ಯಾಪಕವಾಗಿವೆ ಮತ್ತು ರಚನಾತ್ಮಕವಾಗಿವೆ ಎಂಬ ಸಂಗತಿಯು ನಮ್ಮ ಗಮನಕ್ಕೆ ಬರಬೇಕಾದುದಾಗಿದೆ. ಅಂತಹದೊಂದು ಸಂಸ್ಥೆಯನ್ನು ಕಟ್ಟಿಕೊಳ್ಳಬೇಕು ಎಂಬ ವಿಚಾರವು ರಾಷ್ಟ್ರಗಳ ನಾಯಕ ರಿದುರು ಮುಂದಿಸಲ್ಪಟ್ಟ ಕೂಡಲೆ, ಹಿಂದಿನ ಸಾರೆ ಅದನ್ನು ಯುದ್ಧ ಸಂಧಿಯ

ಒಂದು ಭಾಗವನ್ನೆಂದೇ ಸ್ವೀಕರಿಸಿದರೆ ಈ ಸಾರೆ ಸ್ವತಂತ್ರವಾಗಿಯೆ ಯೋಚಿಸಿ ಸ್ವತಂತ್ರವಾಗಿಯೆ ಅದರ ಸ್ಥಾಪನೆಯನ್ನು ಮಾಡಲಾಯಿತು. ಈ ಬಾರಿಯ ಸಂವಿಧಾನವೆಂದು ಪ್ರಸಿದ್ಧವಾದ ಅಧಿಲೇಖನದಲ್ಲಿ, ಸಂಯುಕ್ತ ರಾಷ್ಟ್ರಗಳ ಪ್ರಜೆಗಳಾದ ನಾವು, ಒಂದೇ ಜೀವಮಾನದಲ್ಲಿ ಎರಡು ಬಾರಿ ವಿಧ್ವಂಸಕವಾದ ಯುದ್ಧಗಳಲ್ಲಿ ದುಃಸಹವಾದ ಕಷ್ಟಗಳನ್ನು ಅನುಭವಿಸಿ, ಅಂತಹ ದಾರುಣ ವಾದ ದುಃಖದಿಂದ ಮಾನವಕುಲವನ್ನು ರಕ್ಷಿಸಬೇಕು, ಮಾನವನ ಮೂಲ ಅಧಿಕಾರಗಳನ್ನು ಒಪ್ಪಿ, ಆತನ ಅರ್ಹತೆ ಮತ್ತು ಔದಾರ್ಯ-ಗೌರವಗಳನ್ನು ಸ್ತ್ರೀಪುರುಷರು ಸಮಾನಾಧಿಕಾರವುಳ್ಳವರು, ಚಿಕ್ಕ-ದೊಡ್ಡ ರಾಷ್ಟ್ರಗಳು ಸಮ ವಾದ ಅಧಿಕಾರಗಳಿಗೆ ಪಾತ್ರವಾಗಿರುವವು, ಈ ವಿಷಯಗಳನ್ನು ಎತ್ತಿ-ಹಿಡಿಯಲು ಅಂತರ್ರಾಷ್ಟ್ರೀಯ ಶಾಸನ ಮತ್ತು ಸಂಧಿಗಳನ್ನು ಆದರಿಸುವಂತಹ ವಾತಾವರಣವನ್ನು ಕಲ್ಪಿಸಬೇಕು, ಮತ್ತು ಸಾಮಾಜಿಕ ವಿಕಾಸ ಹಾಗೂ ವಿಶಾಲ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ಉತ್ತಮವಾದ ಜೀವನ ಕ್ರಮವನ್ನು ಪಡೆಯಬೇಕು, ಎಂಬ ಆಶಯದ ಧ್ಯೇಯವಾದವನ್ನು ಅಂಗೀಕರಿಸಿದ್ದೇವೆ. ಇದೊಂದು ಮಹತ್ತರವಾದ ಸ್ಥಿತ್ಯಂತರವೆಂದು ನಿಶ್ಚಯವಾಗಿ ಹೇಳಬೇಕು.

ಈ ಬಗೆಯ ಭವ್ಯವಾದ ಆದರ್ಶವನ್ನು ಪಡೆಯುವದಕ್ಕಾಗಿ ನೆರೆಹೊರೆ ಯಲ್ಲಿ ಇರುವ ಪ್ರತಿಯೊಂದು ರಾಷ್ಟ್ರದ ಪ್ರಜೆಗಳು ಅತ್ಯಂತ ಸಹಿಷ್ಣುತೆಯಿಂದ ಬಾಳನ್ನು ಸಾಗಿಸಬೇಕು, ಪೂರ್ಣ ಶಾಂತಿಯಿಂದ ವರ್ತಿಸಬೇಕು; ಅಂತ-ರ್ರಾಷ್ಟ್ರೀಯ ಕ್ಷೇಮ ಮತ್ತು ಶಾಂತಿಗಳು ನೆಲಗೊಳ್ಳುವಂತೆ ತತ್ವಗಳನ್ನು ಪಾಲಿಸಿ ಪದ್ಧತಿಗನುಸರಿಸಿ ಕಾರ್ಯವನ್ನು ಕೈಕೊಂಡು ಎಲ್ಲರ ಹಿತವನ್ನು ಸಾಧಿಸ ಲಿಕ್ಕೆಂದು ಮಾತ್ರ, ಬಲಪ್ರಯೋಗಕ್ಕೆ ತೊಡಗಬೇಕು; ಮತ್ತು ಮಾನವನ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗಾಗಿ ಅಂತರ್ರಾಷ್ಟ್ರೀಯ ಸಂಘಟ ನೆಯ ಮುಖಾಂತರ ಹೆಣಗಬೇಕು ಎಂಬ ಧೋರಣೆಯನ್ನು ಸಾರಲಾಗಿದೆ. ಈ ಬಗೆಯ ಧ್ಯೇಯವನ್ನು ಈಡೇರಿಸಲಿಕ್ಕೆಂದು ಇಂತಹ ಸರ್ವಸಮ್ಮತವಾದ ಕಾರ್ಯಧೋರಣೆಯನ್ನು ನಿಶ್ಚಯಿಸಿದುದು ಅಪೂರ್ವವೆಂದೇ ತಿಳಿಯಬೇಕು.

ಐತಿಹಾಸಿಕವಾಗಿ ಈ ಬೆಳವಣಿಗೆಯನ್ನು ಅಭ್ಯಸಿಸಿದರೆ ಉದ್ದೇಶಗಳನ್ನು ಘೋಷಿಸುವದರಲ್ಲಿ ಪ್ರಗತಿಯಾದಂತೆಯೇ, ಆ ಉದ್ದೇಶಗಳಿಗೆ ತಳಹದಿ

ಯಾಗಿದ್ದ ತತ್ವಗಳಲ್ಲಿಯೂ ಪರಿವರ್ತನೆಯಾಗಿರುವದೊಂದು ಕೌತುಕ ವಿಷಯ ವೇಂದೇ ನಮಗೆ ಕಾಣದಿರದು. ಈ ವಿಚಾರಪ್ರಣಾಲಿಯ ಹಿನ್ನೆಲೆಯಲ್ಲಿ ಸಂಘಟನೆಯ ಪ್ರತಿಯೊಬ್ಬ ಸದಸ್ಯನು ಸಮಾನ ಅಧಿಕಾರವುಳ್ಳವನು. ಸಂಯುಕ್ತವಾಗಿ ಸದಸ್ಯರು ಸ್ವೀಕರಿಸಿದ ಅಧಿಲೇಖನದ ಮೇರೆಗೆ ಅವರವರಿಗೆ ಸಹಾಯವಾಗುವ ಸಕಲ ಕರ್ತವ್ಯಗಳನ್ನು ಪಾಲಿಸಲಿಕ್ಕೆ ಅವರು ಬಾಧ್ಯರು. ಅಂತರ್ರಾಷ್ಟ್ರೀಯ ಭಿನ್ನಾಭಿಪ್ರಾಯಗಳನ್ನು ಶಾಂತಿಯುತವಾಗಿ ಪರಿಹರಿಸಿ-ಕೊಳ್ಳಬೇಕು, ವಿಶ್ವಶಾಂತಿಯನ್ನು ಸ್ಥಾಪಿಸುವ ಪ್ರಯತ್ನದಲ್ಲಿ ಸದಸ್ಯ ರಾಷ್ಟ್ರ-ಗಳಿಗೆ ಅಧಿಲೇಖನದ ಮೇರೆಗೆ ನೆರವಾಗುವಂತೆಯೆ, ಸದಸ್ಯರಲ್ಲದ ರಾಷ್ಟ್ರಗಳಿಗೆ ಕೂಡ ಅದೇ ಶಾಸನದ ಮೇರೆಗೆ ಆಶ್ವಾಸನಗಳನ್ನು ಕೊಡಬೇಕು ಮತ್ತು ಸದಸ್ಯರಾಷ್ಟ್ರಗಳ ಆಂತರಿಕ ಆಡಳಿತದಲ್ಲಿ ಸಂಘಟನೆಯು ಎಂದೂ ಯಾವ ರೀತಿಯಿಂದಲೂ ಕೈಹಾಕಬಾರದು ಎಂಬ ವಿಶಾಲವಾದ ತತ್ವಗಳಿರುವದು ವಿಶೇಷವಾಗಿ ಗಮನಾರ್ಹವಾಗಿದೆ.

ಕೊನೆಯದಾಗಿ ಮಾನವನ ಪುನರುತ್ಥಾನದ ಭವ್ಯಸ್ವಪ್ನವಾದ ಈ ಸಂಘಟನೆಯಲ್ಲಿ ಪರಸ್ಪರ ಸಂಪರ್ಕದ ಸಾಧನವಾವುದು ಎಂಬುದನ್ನು ತಿಳಿದುಕೊಳ್ಳುವದು ಅಗತ್ಯವಾಗಿದೆ. ನ್ಯಾಯಮಂದಿರವನ್ನುಳಿದ ಸಂಘದ ಎಲ್ಲ ಅಂಗಸಂಸ್ಥೆಗಳಲ್ಲಿ ಚೀನೀ, ಫ್ರೆಂಚ್, ಇಂಗ್ಲಿಶ್, ರಶಿಯನ್ ಮತ್ತು ಸ್ಪಾನಿಶ್ ಭಾಷೆಗಳು ಅಧಿಕೃತ ಭಾಷೆಗಳಾಗಿರುತ್ತವೆಯಾದರೂ ಪ್ರಚಲಿತ ಭಾಷೆಗಳು ಇಂಗ್ಲಿಶ್ ಮತ್ತು ಫ್ರೆಂಚ್ ಆಗಿವೆ. ಇತ್ತ ಸಾಮಾನ್ಯ ಸಮಿತಿ ಮತ್ತು ಆರ್ಥಿಕ ಹಾಗೂ ಸಾಮಾಜಿಕ ಸಮಿತಿಗಳಲ್ಲಿ ಸ್ಪಾನಿಶ್ ಭಾಷೆಯೂ ಪ್ರಚಲಿತವಾಗಿದೆ. ಅಧಿಕೃತ ಭಾಷೆಗಳಲ್ಲಿ ಮತ್ತು ಪ್ರಪಂಚ ಭಾಷೆಗಳಲ್ಲಿ ಮಾಡಿದ ಭಾಷಣಗಳನ್ನು ಇತರ ಪ್ರಪಂಚ ಭಾಷೆಗಳಿಗೆ ಅನುವಾದಿಸಿ ಹೇಳುವ ವ್ಯವಸ್ಥೆಯೂ ಇರುತ್ತದೆ. ಮಿಕ್ಕ ಮಾತೃಭಾಷೆಗಳಲ್ಲಿ ಜರುಗಿದ ಭಾಷಣಗಳಿಗೆ ಭಾಷಣಕಾರರೇ ಅನುವಾದಗಳನ್ನು ಸಲ್ಲಿಸುತ್ತಾರೆ. ನ್ಯಾಯ ಮಂದಿರದಲ್ಲಿ ಮಾತ್ರ ಇಂಗ್ಲಿಶ್ ಮತ್ತು ಫ್ರೆಂಚ್ ಎರಡೇ ಭಾಷೆಗಳು ನಡೆಯುತ್ತವೆ.

# ೩. ಮುಖಭಂಗ

ಯಾವುದೊಂದು ಸಂಸ್ಥೆಯ ಸಫಲತೆಯು ಅದರ ಉದ್ದೇಶ ಮತ್ತು ಅಂಗರಚನೆಯಂತೆಯೆ, ಅದೇಕೆ ಅದನ್ನು ಹೆಚ್ಚಾಗಿ ಅದರ ಕಾರ್ಯದ ಮೇಲೆಯೆ ನಿರ್ಧರಿಸಲಾಗುವದು. ಸಂಯುಕ್ತ ರಾಷ್ಟ್ರಸಂಘದಂತಹ ಪ್ರಪಂಚದ ಪರಮೋಚ್ಚ ಸಂಸ್ಥೆಯಾಗಲಿ, ಆರ್ಥಿಕ. ಸಾಮಾಜಿಕ ಮತ್ತು ರಾಜಕೀಯ ಪುನರ್‌ರಚನೆಯ ದೃಷ್ಟಿಯಿಂದ ಕಟ್ಟಿಕೊಂಡ ಬೇರೆ ಚಿಕ್ಕದೊಡ್ಡ ಸಂಘಗಳೇ ಆಗಲಿ ಅವುಗಳ ಅಸ್ತಿತ್ವವನ್ನು ತಮ್ಮ ವಿಧಾನಕ್ಕನುಗುಣವಾಗಿ ತಾವು ಪ್ರತ್ಯಕ್ಷದಲ್ಲಿ ಸಿದ್ಧಿಸಿದ ಕಾರ್ಯದ ಮೇಲಿಂದ ಮಾತ್ರ ಸಾರ್ಥಕಗೊಳಿಸಿ-ಕೊಳ್ಳಬಹುದು. ಈ ಅಳತೆಗೋಲಿನಿಂದ ತಿಳಿದು ನೋಡಲಾಗಿ ಸಂಯುಕ್ತ ರಾಷ್ಟ್ರಸಂಘದ ಉದ್ದೇಶವು ಎಷ್ಟುಮಟ್ಟಿಗೆ ಸಾಧಿಸಿರುವದೆಂಬುದನ್ನು ಹೇಳುವದು ಬಿಗಿಯಾದರೂ ಕೆಲವು ಅಂಶಗಳಲ್ಲಿ ನಾವು ಈ ಸಂಸ್ಥೆಯ ಲಾಭಹಾನಿಗಳ ಪಟ್ಟಿಯನ್ನು ಸಿದ್ಧಗೊಳಿಸಬಹುದು.

ಮೊದಲನೆಯದಾಗಿ ಸಂಯುಕ್ತ ರಾಷ್ಟ್ರಸಂಘದ ವ್ಯಾಪಕವಾದ ರಚನೆ, ಅದರ ಭವ್ಯವಾದ ಆದರ್ಶಗಳು ಮತ್ತು ಅದನ್ನು ಸಿದ್ಧಿಸಿಕೊಳ್ಳುವದಕ್ಕೆಂದು ಸಂಘವು ಕೈಕೊಳ್ಳುತ್ತಿರುವ ವಿಶ್ವಾದ್ಯಂತ ಕಾರ್ಯಕ್ರಮ ಇವುಗಳನ್ನು ನಾವು ಲಕ್ಷ್ಯದಲ್ಲಿಟ್ಟು, ಕೇವಲ ಧ್ಯೇಯ-ಧೋರಣಗಳನ್ನು ಆ ಪ್ರಮಾಣದಲ್ಲಿ ನಿರ್ದಿಷ್ಟಗೊಳಿಸಿ ಸಾರುವದು, ಅವುಗಳನ್ನು ಕಾರ್ಯರೂಪಕ್ಕೆ ತರಲಿಕ್ಕೆಂದು ಆವಶ್ಯಕವಾದ ವಿಧಾನವನ್ನು ಗೊತ್ತುಪಡಿಸುವದು ಮತ್ತು ಆ ಕಾರ್ಯವನ್ನು ಪ್ರತ್ಯಕ್ಷವಾಗಿ ಅಂತಹ ದೊಡ್ಡ ಮಾತ್ರೆಯಲ್ಲಿ ಜರುಗಿಸಲಿಕ್ಕೆ ವಿಶಾಲವಾದ ಕಾರ್ಯಾಲಯ ಮತ್ತು ಕಾರ್ಯವಾಹಕರ ಪಡೆಯನ್ನು ನಿರ್ಮಿಸಿಕೊಳ್ಳುವದು ಇದಕ್ಕೆ ಎಷ್ಟೋ ಸಮಯವು ಹಿಡಿಯಬಹುದು. ಇತ್ತ ಈ ರಚನೆಯ ಕೆಲಸದಲ್ಲಿ ತೊಡಗಿದಾಗ ಪ್ರಪಂಚವು ತನ್ನ ಎಲ್ಲ ಚಲನವಲನಗಳನ್ನು ನಿಲ್ಲಿಸಿಕೊಂಡೇನು ಇರುವದಿಲ್ಲವಷ್ಟೆ ! ಈ ನಿರಂತರವಾಗಿ ನಡೆಯುವ ಜಗತ್ತಿನಲ್ಲಿ ಪ್ರತಿಯೊಂದು ಕ್ಷಣಕ್ಕೆ ಹೊಸ ಹೊಸ ಪ್ರಶ್ನೆಗಳು ಉದ್ಭವಿಸುತ್ತವೆ. ಅವು

ಗಳನ್ನು ತತ್‌ಕ್ಷಣ ಸಂಯುಕ್ತ ರಾಷ್ಟ್ರಸಂಘವು ಅವಗಾಹನೆಗಾಗಿ ತೆಗೆದು ಕೊಳ್ಳಬೇಕಾಗುತ್ತದೆ. ಅತ್ತ ಮೊದಲಿನಿಂದ ಕೈಯಲ್ಲಿ ಹಿಡಿದ ವಿಷಯು ಗಳನ್ನು ದುರ್ಲಕ್ಷಿಸಲಿಕ್ಕೆ ಬರುವಂತಿರುವದಿಲ್ಲ. ಅಂತೆಯೆ ಈ ಸಂಘದ ಜೀವನದಲ್ಲಿ ಮೊದಲಿನ ಹತ್ತಾರು ವರ್ಷಗಳು ಅತ್ಯಂತ ಜೀವಾಳದ ಅವಧಿ ಯೆಂದು ಧಾರಾಳವಾಗಿ ಹೇಳಬಹುದು.

ಈ ಹಿನ್ನೆಲೆಯಲ್ಲಿ ನೋಡಲಾಗಿ ಸಂಯುಕ್ತ ರಾಷ್ಟ್ರಸಂಘವು ಅದ್ಭುತ-ವೆನ್ನಿಸುವಂತಹ ಪ್ರಗತಿಯನ್ನು ಸಾಧಿಸಿದೆ ಎಂದೇ ಹೇಳಬೇಕಾಗುತ್ತದೆ. ಒಂದೊಂದಾಗಿ ಪ್ರಚಂಡರೂಪವನ್ನು ತಾಳಿದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಪ್ರಮೇಯಗಳನ್ನು ಯೋಚಿಸುವದಕ್ಕಾಗಿ ಆಗಾಗ್ಗೆ ನಿರ್ಮಿಸಿ-ಕೊಂಡ ವಿವಿಧ ಅಂಗಸಂಸ್ಥೆಗಳು, ವಿಶಿಷ್ಟ ಸಂಸ್ಥೆಗಳು ಮತ್ತು ಇತರ ವಿಭಾಗಗಳು ನಿರಾತಂಕವಾಗಿ ತಮಗೊಪ್ಪಿಸಿದ ಕಾರ್ಯವನ್ನು ನೋಡಿ-ಕೊಳ್ಳುವಂತೆ ಇವುಗಳಿಗೆ ನಿಯಮ-ನಿಬಂಧನಗಳು, ಕಾರ್ಯವಾಹಕರ ಸಹಾಯ ಮತ್ತು ಧನದ ಬೆಂಬಲಗಳನ್ನು ದೊರಕಿಸಿಕೊಟ್ಟು, ಸಂಘದ ಕಾರ್ಯವು ನ್ಯಾಯವಾಗಿಯೂ, ವೇಗವಾಗಿಯೂ ಮುಂದುವರಿಯುವಂತೆ ಮಾಡುವದು ದುಸ್ತರವಾದಂತೆಯೆ ಅಭಿನಂದನೀಯವೂ ಆಗಿರುತ್ತದೆ. ಸಂಯುಕ್ತ ರಾಷ್ಟ್ರಸಂಘವು ರೂಪುಗೊಂಡ ಕೆಲವೇ ವರ್ಷಗಳಲ್ಲಿ ಪ್ರತಿ-ಯೊಂದು ಶಾಖೋಪಶಾಖೆಯ ಕಾರ್ಯವ್ಯೂಹವನ್ನು ರಚಿಸುವದು ಆ ಸಂಘದ ಯಶಸ್ಸಿಗೆ ಮುಖ್ಯವಾಗಿ ಕಾರಣವಾಗಿದೆ.

ಒಮ್ಮೆ ಅದರ ಘಟನೆಯು ಸಿದ್ಧವಾಗಿ ಆ ಸಂಸ್ಥೆಗಳ ನಿರ್ಮಾಣವಾದ ಮೇಲೆ ಸಂಯುಕ್ತ ರಾಷ್ಟ್ರಸಂಘದ ಶ್ರೇಯಸ್ಕರವಾದ ಕಾರ್ಯವೆಂದರೆ, ಶಾಂತಿ ಸ್ಥಾಪನೆಗಾಗಿ ಉಚಿತವಾದ ವಾತಾವರಣವನ್ನು ಕಲ್ಪಿಸಿದುದು. ಯುದ್ಧದಿಂದ ಜರ್ಜರಿತವಾದ ರಾಷ್ಟ್ರಗಳು, ಅಶಾಂತಿಯಿಂದ ಅಸಹ್ಯಗೊಂಡ ರಾಷ್ಟ್ರಗಳು, ಮನೆ-ಮಾರು-ಮಡದಿ-ಮಕ್ಕಳನ್ನು ದಾರುಣವಾದ ದುಃಖಕ್ಕೆ ಈಡುಮಾಡಿದ ಪ್ರಜೆಗಳು, ಆ ಅಸಹಾಯಸ್ಥಿತಿಗೆ ಹೇಸಿದ ರಾಷ್ಟ್ರಗಳು, ಗಳಿಸಿದ ಹಣ ಕೈಗೆ ಸಿಕ್ಕದಂತಾಗಿ, ದೊರೆತ ದುಡ್ಡು ವೆಚ್ಚಕ್ಕೆ ಸಾಲದಂತಾಗಿ ಸಹನೀಯವಾದ ಅನರ್ಥಕ್ಕೆ ಗುರಿಯಾದ ರಾಷ್ಟ್ರಗಳು, ಎಂದು ಸಂಕಟಕಾಲದಿಂದ ಮುಕ್ತ-ರಾಗಬಹುದು ಎಂಬ ತವಕದಲ್ಲಿರುವದು ಸ್ವಾಭಾವಿಕವೆ! ಆದರೆ ಈ ಬಗೆಯ

ಆಕಾಂಕ್ಷೆಯಿರುವದು ಬೇರೆ; ಅದಕ್ಕೊಂದು ರೂಪವನ್ನು ಕೊಡುವ ಉದ್ದೇಶ ದಿಂದ ಪ್ರತ್ಯಕ್ಷ ಕಾರ್ಯಕ್ಕೆ ಧುಮುಕುವ ಮತ್ತು ಅಂತಹ ಪ್ರಯತ್ನಕ್ಕೆ ಚಾಲನೆಯನ್ನು ಕೊಡುವದು ಬೇರೆ. ಈ ಎರಡನೆಯ ಬಗೆಯ ಹೊಣೆಗಾರಿ-ಕೆಯ ಕೆಲಸವನ್ನು ಸಂಯುಕ್ತ ರಾಷ್ಟ್ರಸಂಘವು ವಹಿಸಿಕೊಂಡಿರುತ್ತದೆ.

ಈ ವಾತಾವರಣವನ್ನು ನಿರ್ಮಿಸಿಕೊಳ್ಳುವದಕ್ಕೆ ಪೂರ್ವಭಾವಿಯಾಗಿ ಸಂಘವು ಕೆಲವು ಪುನರ್ರಚನೆಯ ಕಾರ್ಯಕಲಾಪಗಳನ್ನು ಕೈಕೊಳ್ಳಬೇಕಾ-ಯಿತು. ನಿರಾಶ್ರಿತರ ಪೋಷಣೆ ಮತ್ತು ರಕ್ಷಣೆ, ಅನಾಹುತಕ್ಕೆ ಈಡಾದ ರಾಷ್ಟ್ರಗಳ ಆರ್ಥಿಕ ಮತ್ತು ಸಾಮಾಜಿಕ ಜೀವನವು ಶಾಂತಿಪೂರ್ವಕವಾಗಿ ನಡೆಯುವಂತೆ ಕೈಕೊಂಡ ಯೋಜನೆಗಳು, ಯುದ್ಧದಲ್ಲಿ ಪರಾಜಯಹೊಂದಿದ ಇಲ್ಲವೆ ಆರ್ಥಿಕ, ಭೌಗೋಲಿಕ ಮತ್ತು ರಾಜಕೀಯ ಪರಿಸ್ಥಿತಿಯ ಮೂಲಕ ಪರಾವಲಂಬಿಯಾದ ರಾಷ್ಟ್ರಗಳಿಗೆ ನವಚೇತನವು ಉಂಟಾಗುವಂತೆ ಮತ್ತು ಅನುಕೂಲ ಪರಿಸ್ಥಿತಿಯು ಉಂಟಾದಲ್ಲಿ ಪಾರತಂತ್ರ್ಯದಲ್ಲಿದ್ದ ರಾಷ್ಟ್ರಗಳಿಗೆ ಸ್ವಾತಂತ್ರ್ಯವು ಪ್ರಾಪ್ತವಾಗುವಂತೆ ಸನ್ನಿವೇಶವನ್ನು ತಂದುಕೊಡುವದು ಇವೇ ಮೊದಲಾದ ವಿಷಯಗಳಲ್ಲಿ ಸಂಘವು ಆರಂಭದಿಂದಲೇ ಆಸಕ್ತಿಯನ್ನು ತೋರಿತು; ಕಾರ್ಯರಂಗಕ್ಕಿಳಿಯಿತು.

ಇದೆಲ್ಲದರ ಪರಿಣಾಮವಾಗಿ ಇಂದು ಪ್ರಪಂಚದಲ್ಲಿ ಯಾವುದೊಂದು ಕ್ಷುಲ್ಲಕ ಕಾರಣಕ್ಕಾಗಿ ಕಲಹವಾಗಲಿ, ಜಗಳವಾಗಲಿ ಹುಟ್ಟುವಂತೆ ಕಂಡರೆ ಅದನ್ನು ಆಲೋಚಿಸಿ, ಅದು ದೊಡ್ಡ ಪ್ರಮಾಣದಲ್ಲಿ ಹಬ್ಬದಂತೆ ನೋಡಿ-ಕೊಳ್ಳುವ ಒಂದು ಸಂಸ್ಥೆಯಿದೆ ಎಂಬ ಧೈರ್ಯವು, ವಿಶ್ವಾಸವು ಮತ್ತು ಸೌಹಾರ್ದವು ರಾಷ್ಟ್ರರಾಷ್ಟ್ರಗಳಲ್ಲಿ ಕಂಡುಬರುವದು ಹೆಚ್ಚಿನದಾಗಿದೆ. ಚಿಕ್ಕ ರಾಷ್ಟ್ರಗಳು ತಮ್ಮ ದೂರುಗಳನ್ನು ಆಲಿಸುವ ಒಂದು ಕೇಂದ್ರವಿರುವದು ಎಂದೂ, ದೊಡ್ಡ ರಾಷ್ಟ್ರಗಳು ತಮ್ಮ ಶಕ್ತಿ, ತಮ್ಮ ಸಂಘಟನೆ ಮತ್ತು ತಮ್ಮ ಸ್ಥಾನ ಮಹಾತ್ಮ್ಯಕ್ಕಾಗಿ ಸಂಯುಕ್ತ ರಾಷ್ಟ್ರಸಂಘದ ಮುಖಾಂತರ ವಿಶ್ವದಲ್ಲಿ ಚಿರಶಾಂತಿಯು ನೆಲಿಸುವಂತೆ ಸಹಾಯವನ್ನು ನೀಡುವ ಕರ್ತವ್ಯವು ತಮ್ಮ-ದಾಗಿರುವದು ಎಂಬ ಅರಿವು ಈ ಸಂಸ್ಥೆಯ ಶ್ರೇಯಸ್ಸಾಗಿದೆ.

ಆದರೆ ಶಾಶ್ವತ ಶಾಂತಿಯನ್ನು ಸ್ಥಾಪಿಸಲಿಕ್ಕೆ ಕೇವಲ ಇಂತಹ ಅರಿವು ಉಂಟಾದರೆ ಸಾಲದು. ಯುದ್ಧದ ದುಷ್ಪರಿಣಾಮಗಳನ್ನು ಹೋಗಲಾಡಿಸಿ

ದಂತೆಯೆ, ಯುದ್ಧ ಮನೋಭಾವದ ದುಷ್ಪರಿಣಾಮಗಳನ್ನು ಸದೆಬಡೆಯು-ವದು ಅಗತ್ಯವಾಗಿದೆ. ಸಂಯುಕ್ತ ರಾಷ್ಟ್ರಸಂಘವು ಈ ಬಾರಿ ರೂಪುಗೊಂಡು ಅದು ರಾಷ್ಟ್ರಸಂಗಮದಿಂದ ಬೇರೆಯಾಗಿರುವದು. ಈ ವಿಷಯದಿಂದ ರಾಷ್ಟ್ರಸಂಗಮವು ಯುದ್ಧಗಳು ಜರುಗದಂತೆ ಮಾಡಲಿಕ್ಕೆ ಹೆಣಗುವ ಸಂಸ್ಥೆ-ಯಾದರೆ, ಸಂಯುಕ್ತ ರಾಷ್ಟ್ರಸಂಘವು ಯುದ್ಧಕ್ಕೆ ಅಣಿಯಾಗುವ ಕಾರಣ ಗಳನ್ನೆ ಹುಡುಕಿ ತೆಗೆದು ಅವುಗಳಿಗೆ ಉಪಾಯವನ್ನು ಹೂಡುವ ಸಂಘಟನೆ ಯಾಗಿದೆ. ರಾಷ್ಟ್ರಸಂಘವು ಅಸ್ತಿತ್ವದಲ್ಲಿ ಬಂದ ಪ್ರಾಥಮಿಕ ಅವಧಿಯಲ್ಲಿ ಸಾಮಾಜಿಕ ಪುನರ್ರಚನೆಯ ಕೆಲವು ಕರ್ತವ್ಯಗಳನ್ನು ಅದು ಪಾಲಿಸಿದ್ದರೂ, ಅದರ ನಿಜವಾದ ಸಾಫಲ್ಯವು ಶಾಂತಿಯ ಮನೋಭಾವವನ್ನು ಘೋಷಿಸುವ-ದರಲ್ಲಿದೆ ಎಂಬುದನ್ನು ನಾವು ಮರೆಯುವಂತಿಲ್ಲ. ಅಂತೆಯೆ ಪ್ರಾರಂಭದ ಕಾರ್ಯಾನ್ವವಸ್ಥೆಯು ರಚಿತವಾದ ಮೇಲೆ ತನ್ನ ಅಂತಿಮ ಗುರಿಯತ್ತ ಹೋಗ ಲಿಕ್ಕೆ ಸಂಘವು ಯಾವ ಎತ್ತುಗಡೆಯನ್ನು ಮಾಡಿರುವದು ಎಂಬುದನ್ನು ತಿಳಿದುಕೊಳ್ಳುವದು ಉಪಯುಕ್ತವೆನಿಸಬಹುದು.

ಈ ನಿರೀಕ್ಷೆಯಲ್ಲಿ ನಮಗೆ ತುಸು ನಿರಾಸೆಯಾದರೆ ಆಶ್ಚರ್ಯಪಡ-ಬೇಕಾಗಿಲ್ಲ. ಇಂತಹ ಎಚ್ಚರಿಕೆಯನ್ನು ಮೊದಲೇ ಕೊಡುವದು ಸರಿಯಾದ ಮಾರ್ಗವೊ ಅಲ್ಲವೊ ಎಂಬುದನ್ನು ಹೇಳುವದು ಕಠಿಣವಾಗಿದ್ದರೂ ಕರ್ತ-ವ್ಯದ ಒಂದು ಭಾಗವೆಂದು ಅದರ ಪ್ರಸ್ತಾವನೆಯನ್ನು ಇಲ್ಲಿ ಮಾಡಬೇಕಾಗಿದೆ. ಸಂಯುಕ್ತ ರಾಷ್ಟ್ರಸಂಘವು ನಿರ್ಮಿತವಾದ ಕೆಲವು ವರ್ಷಗಳಲ್ಲಿಯೆ ಮತ್ತೆ ಪ್ರಪಂಚದಲ್ಲಿ ಬಲಿಷ್ಠ ರಾಷ್ಟ್ರಗಳ ಎರಡು ಪಂಗಡಗಳು ತಲೆಯೆತ್ತಿದುದು ಶೋಚನೀಯವಾದರೂ ವಸ್ತುಸ್ಥಿತಿಯಾಗಿರುವದು. ಪ್ರತಿಯೊಂದು ರಾಷ್ಟ್ರವು ತನ್ನ ಆಕಾರ-ಜನಸಂಖ್ಯೆ-ವಿದ್ಯಾಬಲ ಎಂಬಿವೇ ಮೊದಲಾದ ಯಾವ ಭೇದ ಭಾವವಿಲ್ಲದೆ ಸಮಾನ ಅಧಿಕಾರವುಳ್ಳದ್ದು ಎಂಬ ಮೂಲ ಸಿದ್ಧಾಂತವನ್ನು ಸಂಯುಕ್ತ ರಾಷ್ಟ್ರಸಂಘದ ಅಡಿಗಲ್ಲು ಎಂದು ಒಪ್ಪಿಕೊಂಡಿದ್ದರೂ ಅತ್ಯಲ್ಪ ಅವಧಿಯಲ್ಲಿ ಬಲಿಷ್ಠ ರಾಷ್ಟ್ರಗಳು ತಮ್ಮ ಶಕ್ತಿಯ ಪ್ರದರ್ಶನವನ್ನು ಚಿಕ್ಕಪುಟ್ಟ ವಿಷಯಗಳಲ್ಲಿ ಕೂಡ ಮಾಡತೊಡಗಿದವು.

ಈ ಬಗೆಯ ತಾರತಮ್ಯವು ಸಂಯುಕ್ತ ರಾಷ್ಟ್ರಸಂಘದ ಅಧಿಲೇಖನವು ಸ್ವೀಕೃತವಾದ ಕೆಲವೇ ದಿನಗಳಲ್ಲಿ ಜಗತ್ತಿನ ದೃಷ್ಟಿಗೆ ಬಿದ್ದಿತು ಎಂದರೆ

ಸಾಮಾನ್ಯವಾಗಿ ಆದರ್ಶಪ್ರಿಯ ಜನರು ಯಾರೂ ಆ ಮಾತನ್ನು ನಂಬಲಿಕ್ಕಿಲ್ಲ. ಆದರೆ ಯುದ್ಧವು ಮುಕ್ತಾಯಗೊಂಡು ಇನ್ನು ಶಾಂತಿಯ ಸಂಧಿಯನ್ನು ಮಾಡಿಕೊಳ್ಳಬೇಕು ಎಂಬ ಸೂಚನೆಗಳು ಬರುತ್ತಿದ್ದಂತೆ ಆ ವಿಷಯದಲ್ಲಿ ಭಿನ್ನಾಭಿಪ್ರಾಯವುಂಟಾಯಿತು. ಸಂಘವು ರೂಪುಗೊಳ್ಳುವದಕ್ಕಿಂತ ಮೊದಲೇ ಆರಂಭವಾದ ಈ ಪ್ರಯತ್ನವು ಸುಸೂತ್ರವಾಗಿ ಮುಕ್ತಾಯಗೊಳ್ಳಲಿಲ್ಲ. ಇತ್ತ, ಸಂಯುಕ್ತ ರಾಷ್ಟ್ರಸಂಘದ ವಿಧಾನ ಮತ್ತು ನಿಯಮಗಳು ಸಿದ್ಧವಾಗುತ್ತಿದ್ದಂತೆ, ಅತ್ತ ಯುದ್ಧದಲ್ಲಿ ಜಯಶೀಲರಾದ ರಾಷ್ಟ್ರಗಳಲ್ಲಿ ಪರಸ್ಪರ ದ್ವೇಷ-ಸಂಶಯ-ಭೀತಿಗಳು ತಲೆದೋರಿದವು. ಅಂತೆಯೆ ಇಟಲಿ ಮತ್ತು ಇತರ ಚಿಕ್ಕಪುಟ್ಟ ಶತ್ರು ರಾಷ್ಟ್ರಗಳ ಸಂಗಡ, ಶಾಂತಿ ಸಂಧಿಗಳನ್ನು ಮಿತ್ರರಾಷ್ಟ್ರದವರು ವೇಗವಾಗಿ ಮಾಡಿಕೊಂಡರೂ ಜರ್ಮನಿ ಮತ್ತು ಆಸ್ಟ್ರಿಯಾ ದೇಶಗಳ ಸಂಗಡ, ಆ ಬಗೆಯ ಒಪ್ಪಂದವನ್ನು ಮಾಡಿಕೊಳ್ಳಲಿಕ್ಕೆ ಮುಂದುವರಿಯಲಿಲ್ಲ.

ಈ ಬಗೆಯ ನಿರುತ್ಸಾಹಕ್ಕೆ ಕಾರಣವೂ ಇಲ್ಲದಿರಲಿಲ್ಲ. ಮೂಲವಾಗಿ ಸಂಯುಕ್ತ ರಾಷ್ಟ್ರಸಂಘದ ಸದಸ್ಯತ್ವಕ್ಕೆ ಅಂಕಿತವನ್ನು ಹಾಕಿ ಅಂತರ್ರಾಷ್ಟ್ರೀಯ ಸಂಘಟನೆಯ ಬಗ್ಗೆ ಆತುರತೆಯನ್ನು ವ್ಯಕ್ತಗೊಳಿಸಿದ್ದರೂ, ಅದರ ಉದ್ದೇಶ ಮತ್ತು ತತ್ವಗಳಿಗೆ ತಕ್ಕಂತೆ ಪ್ರಪಂಚದ ಬಹುತರ ಎಲ್ಲ ರಾಷ್ಟ್ರಗಳ ಅದರಲ್ಲಿಯೂ ವಿಶೇಷವಾಗಿ ಪ್ರಬಲ ರಾಷ್ಟ್ರಗಳ ಮನೋಭಾವವು ಬದಲಾಗಿರಲಿಲ್ಲ. ಒಮ್ಮೆ ಸಂಘದ ಸದಸ್ಯರಾಗಿ ಸಂಯುಕ್ತ ಶಕ್ತಿಗೆ ತಮ್ಮ ಕಾಣಿಕೆಯನ್ನು ಸಲ್ಲಿಸಬೇಕು ಎಂದು ಒಪ್ಪಿಕೊಂಡ ಮೇಲೆ ಶಾಂತಿಸಂಧಿಯನ್ನು ಮಾಡಿಕೊಂಡ ರಾಷ್ಟ್ರವನ್ನು ಭ್ರಾತೃಭಾವದಿಂದ ನೋಡಬೇಕಾಗುವದು ಎಂಬ ಅಳುಕು, ಗೆದ್ದ ರಾಷ್ಟ್ರಗಳ ನಾಯಕರ ಮನಸ್ಸಿನಲ್ಲಿ ಅಡಕವಾಗಿತ್ತು. ಅಲ್ಲದೆ ಎಷ್ಟೋ ವರ್ಷಗಳಿಂದ ಕಡುಹಗೆಯೊಂದು ಕಾದಾಡಿ, ಸೋಲಿಸಿದ ರಾಷ್ಟ್ರವು ತಮ್ಮ ಸಮಾನಾಧಿಕಾರಿ ಎಂಬ ಬಿಂಕದಿಂದ ಮತ್ತೆ ರಾಷ್ಟ್ರಗಳ ಬಾಂಧವ್ಯದಲ್ಲಿ ಮೆರೆಯುವದೆಂದರೆ ಅದೆಂತಹ ಅಪಮಾನ ಎಂಬ ಅಹಂಕಾರವೂ ಅವರ ಮನಸ್ಸಿನಿಂದ ಅಳಿದಿರಲಿಲ್ಲ.

ಇದಕ್ಕಿಂತ ಹಿರಿಯದಾದ ಇನ್ನೊಂದು ಕಾರಣವೆಂದರೆ, ಯುದ್ಧೋತ್ತರ ಪರಿಸ್ಥಿತಿಯಲ್ಲಿ ಬಹಿರಂಗವಾಗಿ ಶಾಂತಿಯ ಸಲುವಾಗಿ ಸಂಯುಕ್ತ ಪ್ರಯತ್ನ

ವನ್ನು ಕೈಕೊಳ್ಳಬೇಕು ಎಂದು ಒಪ್ಪಿದ್ದರೂ ಅಂತರಂಗದಲ್ಲಿ ಗೆದ್ದ ರಾಷ್ಟ್ರಗಳ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಬೇಕು, ಪರಾಜಯ ಹೊಂದಿದ ದೇಶಗಳಿಂದ ಪರಿಹಾರವನ್ನು ಪಡೆಯಬೇಕು, ಸೋಲನ್ನೊಪ್ಪಿದ ಸಮಾಜ ದಿಂದ ತಾವು ತಮ್ಮ ಸಾಮರ್ಥ್ಯವನ್ನು ಬೆಳೆಯಿಸಿಕೊಳ್ಳಬೇಕು ಎಂಬ ಭಾವನೆಯು ಇನ್ನೂ ಅಚ್ಚಳಿಯದಂತೆ ಉಳಿದಿತ್ತು. ಅದರಲ್ಲಿಯೂ ಕೆಲವು ರಾಷ್ಟ್ರಗಳಿಗೆ ಅನುಕಂಪೆಯನ್ನು ತೋರಿಸಿಯೊ, ಅನುಕೂಲತೆಗಳನ್ನು ಒದಗಿ ಸಿಯೊ ಅವುಗಳನ್ನು ತಮ್ಮ ಗುಂಪಿಗೆ ಸೇರಿಸಿಕೊಂಡು, ಅಂತರಾಷ್ಟ್ರೀಯ ರಾಜಕೀಯದ ತಕ್ಕಡಿಯಲ್ಲಿ ತಮ್ಮ ಪರಡಿಯು ತೂಕದ್ದಾಗುವಂತೆ ಹೆಣಗ ಬೇಕು ಎಂಬ ಆಸೆಯು ಎಲ್ಲರ ಮನಸ್ಸಿನಲ್ಲಿಯೂ ಅಂಕುರಿಸಿತ್ತು. ಒಳಗೆ ಈ ಬಗೆಯ ಕಿಲ್ಮಿಷವನ್ನು ಹುದುಗಿಸಿಕೊಂಡು ಮೇಲೆ ಮಮತೆಯ ಮಾತುಗಳ ನ್ನಾಡಲಿಕ್ಕೆ ಪ್ರಯತ್ನಿಸಿದರೆ ಆ ಮಾತಿಗೆ ಅರ್ಥವಾದರೂ ಹೇಗೆ ಆಗಬೇಕು ?

ಇದೇ ಹೆಮ್ಮೆಯ ಧೋರಣೆಯು ಮುಂದೆ ಸಂಯುಕ್ತ ರಾಷ್ಟ್ರಸಂಘದ ವಿಧಾನ ಮತ್ತು ನಿಯಮಾವಳಿಯನ್ನು ಸಿದ್ಧಗೊಳಿಸುವ ಕಾಲದಲ್ಲಿಯೂ ತನ್ನ ಕರಾಳ ಸ್ವರೂಪವನ್ನು ತೋರಿಸಿ, ಅವುಗಳ ಮೇಲೆ ತನ್ನ ಕಪ್ಪು ಮುದ್ರೆ- ಯನ್ನು ಒತ್ತಿರುತ್ತದೆ. ಯುದ್ಧವು ಕೊನೆಗೊಂಡ ತರುಣದಲ್ಲಿಯೆ ಶಾಂತಿಯ ಸಂಧಿಗಳನ್ನು ಮಾಡಿಕೊಂಡುದು, ಅದು ಸಂಶಯಕ್ಕೆ ಕಾರಣವಾಯಿತು. ಆ ಭೀತಿಯು ತಲೆದೋರಿದುದಕ್ಕೆ ಇನ್ನೊಂದು ಕಾರಣವೆಂದರೆ, ಸಂಯುಕ್ತ ರಾಷ್ಟ್ರಸಂಘದ ಧ್ಯೇಯ ಧೋರಣೆಗಳು ಇನ್ನೂ ಸ್ಪಷ್ಟವಾಗದೆ ಇದ್ದುದು ಎಂದು ಕೆಲವರು ಸಮಾಧಾನ ಹೇಳಲಿಕ್ಕೆ ಯತ್ನಿಸುತ್ತಾರೆ. ಆದರೆ ಸಂಯುಕ್ತ ರಾಷ್ಟ್ರಸಂಘದ ಸದಸ್ಯತ್ವವು ತಮ್ಮ ಆತಂಕ, ಆಕಾಂಕ್ಷೆಗೆ ಅಡ್ಡಿಯಾಗಬಾರದು ಎಂದೇ ಇಲ್ಲಿ ಅಂತಹ ಸಂಧಿಗಳನ್ನು ತೀವ್ರವಾಗಿಯೂ ಸ್ವತಂತ್ರವಾಗಿಯೂ ಸ್ವೀಕರಿಸಿದುದು, ಜಯಪ್ರದ ರಾಷ್ಟ್ರಗಳ ಮನೋರಂಗವನ್ನು ಇನ್ನಷ್ಟು ವಿಶದ ವಾಗಿ ತೋರಿಸುತ್ತದೆ.

ಇಂತಹ ಮತಭೇದದ ನೆರಳು, ಇನ್ನೊಂದು ಮಹತ್ವಪೂರ್ಣವಾದ ವಿಷಯದ ಮೇಲೆ ಇದಕ್ಕೂ ದಟ್ಟವಾಗಿ ಬಿದ್ದುದು ನಮಗೆ ಕಾಣುತ್ತದೆ. ಅದೆಂದರೆ ಕ್ಷೇಮಮಂಡಲದ ಶಾಶ್ವತ ಸಸಸ್ಯರಿಗೆ ಇರುವ ವಿಶೇಷ ಮತಾಧಿ ಕಾರ. ಇದು ಕೇವಲ ತಾತ್ವಿಕವಾಗಿ ವಿರೋಧವನ್ನು ವ್ಯಕ್ತಗೊಳಿಬಹುದಾದ

ವಿಷಯವಾಗಿಲ್ಲ. ಸಂಯುಕ್ತ ರಾಷ್ಟ್ರಸಂಘವು ನಿರ್ಮಿತವಾಗಲಿಕ್ಕೆ ಕಾರಣ-ವಾದ ಎಲ್ಲ ಉದ್ದೇಶಗಳ ಕಾರ್ಯಾಚರಣೆಯಲ್ಲಿಯೂ ಈ ವಿಶೇಷಾಧಿಕಾರವು ದೊಡ್ಡ ಆತಂಕವಾಗಿ ಪರಿಣಮಿಸಿದೆ. ಮೊದಲು ತತ್ವದ ದೃಷ್ಟಿಯಿಂದ ವಿಚಾರ ಮಾಡಿದರೂ ಕೂಡ ಅಂತರ್ರಾಷ್ಟ್ರೀಯ ಸಂಘಟನೆಯ ಮೂಲ ಸಿದ್ಧಾಂತಕ್ಕೆ ಕುಠಾರವನ್ನು ಹಾಕುವಂತಹದಾಗಿದೆ. 'ಈ ಸಂಘಟನೆಯ ಸದಸ್ಯತ್ವವನ್ನು ವಹಿಸಿದ ಪ್ರತಿಯೊಂದು ರಾಷ್ಟ್ರವು ತನ್ನ ಸಾರ್ವಭೌಮ ವ್ಯಕ್ತಿತ್ವವನ್ನು ಕಾಯ್ದುಕೊಳ್ಳುವದಲ್ಲದೆ, ಮಿಕ್ಕ ರಾಷ್ಟ್ರಗಳ ಸಂಗಡ ಸಮಾನಾಧಿಕಾರವನ್ನು ಪಡೆಯುತ್ತದೆ, ಎಂಬ ಮಾತನ್ನು ಆಧಾರಭೂತವಾದ ತತ್ವವೆಂದು ಸಂಘಟನೆಯನ್ನು ಪ್ರಾರಂಭಿಸುವಾಗಲೇ ಒಪ್ಪಿಕೊಂಡರೂ ಕ್ಷೇಮಮಂಡಲದ ನಿಯಮಗಳನ್ನು ನಿರ್ಧರಿಸುವಾಗ್ಗೆ ಇಂತಹ ವಿಶೇಷಾಧಿಕಾರಗಳನ್ನು ತಲೆವಾಗಿ ಸ್ವೀಕರಿಸಿದುದು ವಿಚಿತ್ರವೆಂದೇ ತೋರಬಹುದು.

ಇತ್ತ ಇದಕ್ಕೆ ಉತ್ತರವಾಗಿ ಪ್ರಬಲ ರಾಷ್ಟ್ರಗಳು ತಮ್ಮದೇ ಆದ ವಾದಸರಣಿಯನ್ನು ಮಂಡಿಸುತ್ತಾರೆ. ಇಂತಹ ಉದಾತ್ತವಾದ ತತ್ವಗಳನ್ನು ನಾವು ಒಪ್ಪಿದ್ದೇವೆ; ಈಗ್ಗೆ ಕೂಡ ಒಪ್ಪುತ್ತೇವೆ. ಆದರೆ ಅದು ಕೇವಲ ಆಂತರಿಕ ಆಡಳಿತ ಮತ್ತು ವಿಶ್ವದ ಎಲ್ಲ ರಾಷ್ಟ್ರಗಳ ಮಂಡಲದಲ್ಲಿ ಪ್ರತಿ-ಯೊಂದು ರಾಷ್ಟ್ರವು ಪಡೆದಿರಬೇಕಾದ ರಾಜಕೀಯ ಸ್ವಾತಂತ್ರ್ಯ, ಇದರ ಮಟ್ಟಿಗೆ ಮಾತ್ರ ಸಂಬಧಿಸಿದುದಾಗಿದೆ. ಪ್ರಪಂಚದಲ್ಲಿ ಶಾಂತಿಯ ರಕ್ಷಣೆಯನ್ನು ಮಾಡುವದು–ಇಂದಿನ ಮಿತಿಯಲ್ಲಿ ಕೇವಲ ತತ್ವಗಳ ಒಮ್ಮತದಿಂದಲ್ಲ, ಆದರೆ ಶಕ್ತಿಯ ಸಂಯೋಗದಿಂದ. ಅಂತೆಯೆ ಬಹಿರಂಗವಾಗಿ ಪ್ರತಿಯೊಂದು ರಾಷ್ಟ್ರವು ತನ್ನ ಬಲಾಬಲಗಳ ಮೇಲಿಂದಲೇ ಗೌರವವನ್ನು ಪಡೆಯಬೇಕು, ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕು. ಒಳಗಿನ ವ್ಯವಸ್ಥೆಗಾಗಿ ಮತ್ತು ರಾಜನೈತಿಕ ತತ್ವದ ಪ್ರತೀಕವಾಗಿ ನಾವು ಎಲ್ಲ ರಾಷ್ಟ್ರಗಳ ಸಾರ್ವಭೌಮ ವ್ಯಕ್ತಿತ್ವವನ್ನು, ವೈಶಿಷ್ಟ್ಯವನ್ನು ಶಿರಸಾವಹಿಸುತ್ತೇವೆ; ಆದರೂ ಕ್ಷೇಮಮಂಡಲದ ಶಾಶ್ವತ ಸದಸ್ಯರು ಮಾತ್ರ ವಿಶ್ವಶಾಂತಿಯ ರಕ್ಷಣೆಯ ಸಾಮರ್ಥ್ಯವುಳ್ಳವರಾಗಿರುವವರಿಂದ ಅವರಿಗೆ ವಿಶೇಷಾಧಿಕಾರವಿರುವದು ಸಮಂಜಸವಾದುದಷ್ಟೆ ಅಲ್ಲದೆ ಆವಶ್ಯಕವಾದುದು.

ಇದು ಒಂದು ವಿಷಯದ ವಿಪರೀತವಾದ ಎಂದು ಯಾರಿಗಾದರೂ ತೋರಬಹುದು. ಆದರೆ ವಸ್ತುಸ್ಥಿತಿಯೆ ಹಾಗಿದೆ. ಈ ವಿಶೇಷಾಧಿಕಾರವು ಇಂದು ಕೇವಲ ಯುದ್ಧ ಪ್ರಸಂಗಗಳನ್ನು ತಪ್ಪಿಸಲಿಕ್ಕೆ, ಶಾಂತತೆಯನ್ನು ಪಾಲಿಸಲಿಕ್ಕೆ ಕೈಕೊಳ್ಳಬೇಕಾದ ಉಪಾಯ-ಯೋಜನೆಯ ವಿಷಯವಾಗಿ ಮಾತ್ರ ಉಪಯೋಗವಾಗುತ್ತದೆ. ಚಿಕ್ಕಪುಟ್ಟ ಸಂದರ್ಭಗಳಲ್ಲಿ ಕೂಡ ಈ ಶಾಸ್ತ್ರದ ಪ್ರಯೋಗವಾಗಿ ಎಷ್ಟೋ ಸಾರೆ ಕ್ಷೇಮಮಂಡಲದ ಮತ್ತು ತನ್ಮೂಲಕ ಸಂಯುಕ್ತ ರಾಷ್ಟ್ರಸಂಘದ ಕಾರ್ಯವೇ ಸ್ಥಗಿತವಾಗುವ ಬಿಕ್ಕಟ್ಟನ್ನು ತಂದು ಒದಗಿಸುತ್ತದೆ. ಉದಾಹರಣೆಗಾಗಿ ಸಂಯುಕ್ತ ರಾಷ್ಟ್ರಸಂಘದ ಸದಸ್ಯತ್ವದ ವಿಷಯವನ್ನೇ ತೆಗೆದುಕೊಳ್ಳಬಹುದು. ನಿಜವಾಗಿ ನೋಡಿದರೆ ಪ್ರಪಂಚದ ಎಲ್ಲ ರಾಷ್ಟ್ರಗಳಿಗೆ ಸಂಘದ ಸದಸ್ಯತ್ವವು ಅನಿರ್ಬಂಧವಾಗಿ ದೊರೆಯಬೇಕು, ಅಷ್ಟೇ ಅಲ್ಲದೆ ಪ್ರಪಂಚದ ಪ್ರತಿಯೊಂದು ರಾಷ್ಟ್ರಕ್ಕೆ ಅಲ್ಲಿ ಸುಸ್ವಾಗತವಿರಬೇಕು. ಸಂಘದ ಅಧಿಲೇಖನವನ್ನು ಒಪ್ಪುವಾಗ್ಗೆ ಅದೊಂದು ಅರ್ಥಪೂರ್ಣವಾದ ಸಂಘಟನೆಯಾಗಬೇಕು ಎಂಬ ಮಾತುಗಳು ವ್ಯಕ್ತವಾದುವು. ಆದರೆ ಒಮ್ಮೆ ಸಂಯುಕ್ತ ರಾಷ್ಟ್ರಸಂಘವನ್ನು ಸ್ಥಾಪಿಸಬೇಕು ಎಂಬ ನಿರ್ಣಯವಾದ ಕೂಡಲೆ ಅದರ ಸದಸ್ಯತ್ವದ ವಿಷಯವಾಗಿಯೆ ಭಿನ್ನಾಭಿಪ್ರಾಯಗಳು ಕಾಣ ತೊಡಗಿದವು. ಎಲ್ಲಿ ಇಂತಹದೊಂದು ರಾಷ್ಟ್ರವು ಸಂಘದ ಸದಸ್ಯ ಎಂದು ಸ್ವೀಕೃತವಾಗಿ ಒಳಗೆ ಸೇರುವದೋ, ಎಲ್ಲಿ ವಿಶ್ವಶಕ್ತಿಯ ತಕ್ಕಡಿಯಲ್ಲಿ ಎರಡು ಪಕ್ಷಗಳ ತೂಕವು ಮೇಲುಕೀಳು ಆಗುವದೊ ಎಂಬ ಭಯವು ಪ್ರಬಲ ರಾಷ್ಟ್ರಗಳಿಗೇ ಹೆಚ್ಚಾಗಿ ಕೂಡಹತ್ತಿತು. ಇದು ಚಿಕ್ಕಪುಟ್ಟ ರಾಷ್ಟ್ರಗಳ ಉತ್ಸಾಹಕ್ಕೆ, ಪರಾಜಿತ ರಾಷ್ಟ್ರಗಳು ಪುನಃ ಚೇತರಿಸಿಕೊಳ್ಳಬೇಕು ಎಂಬ ಆಕಾಂಕ್ಷೆಗೆ, ಹಿಂದುಳಿದ ರಾಷ್ಟ್ರಗಳು ಪ್ರಗತಿಪಥದಲ್ಲಿ ಕಾಲಿಟ್ಟು ಜಗತ್ತಿನ ರಾಷ್ಟ್ರಬಾಂಧವ್ಯದಲ್ಲಿ ತಾವೂ ಗೌರವದಿಂದ ಓಡಾಡಿಕೊಂಡಿರಬೇಕು ಎಂಬ ಸ್ವಪ್ನಕ್ಕೆ ಕೊಡಲಿಯೇಟನ್ನು ಹಾಕಿದಂತೆ ಆದುದರಲ್ಲಿ ಆಶ್ಚರ್ಯವೇನು ? ಇಂತಹ ವಿಶೇಷಾಧಿಕಾರದ ಪ್ರಯೋಗವನ್ನು ಕೇವಲ ಒಂದು ಪಕ್ಷವಾಗಲಿ, ಒಂದು ರಾಷ್ಟ್ರವಾಗಲಿ ಕೈಕೊಂಡಿತು ಎಂಬ ಸಂದೇಹಕ್ಕೆ ಎಡೆಯಿಲ್ಲ. ವಿಶ್ವ ಶಾಂತಿಯ ಕೋಟೆಯನ್ನು ಭದ್ರವಾಗಿ ಕಾಯಲಿಕ್ಕೆ ತಮ್ಮ ವಶದಲ್ಲಿಯೆ ಕೀಲಿಯ ಕೈಯಿದೆ ಎಂದು ಎಲ್ಲ ಬಲಾಢ್ಯ ರಾಷ್ಟ್ರಗಳಿಗೂ ಒಂದು ಬಗೆಯ

ಅಹಂಕಾರವಿದೆ; ಅದರ ಪ್ರತ್ಯಕ್ಷ ಉಪಯೋಗವನ್ನು ಒಂದೆರಡು ರಾಷ್ಟ್ರಗಳು ಮಾಡಿದ್ದರೂ ಅಂತಹ ಅಸ್ತ್ರವೊಂದು ತಮ್ಮ ಬತ್ತಳಿಕೆಯಲ್ಲಿದ್ದ ವಿಚಿತ್ರವಾದ ಅರಿವಿನ ನಡತೆಯು ಎಲ್ಲ ರಾಷ್ಟ್ರಗಳಲ್ಲಿಯೂ ಕಂಡುಬರುತ್ತದೆ.

ಸಂಯುಕ್ತ ರಾಷ್ಟ್ರಸಂಘವನ್ನು ವಿಶ್ವವು ಒಂದು, ಮಾನವ ಕುಲವು ಒಂದು ಎಂಬ ಭಾವನೆಯನ್ನು ಉಂಟುಮಾಡಿ ಆ ಸಂಘದ ರಾಷ್ಟ್ರಗಳಲ್ಲಿ ಕೇವಲ ಬಾಂಧವ್ಯ ಮತ್ತು ಸೌಹಾರ್ದಗಳು ನೆಲಸುವಂತೆ ಮಾಡಬೇಕು ಎಂಬ ಉದ್ದೇಶದಿಂದಷ್ಟೆ ನಿರ್ಮಿಸಿಕೊಂಡಿರವೆ, ಪರಸ್ಪರರ ವಿಷಯವಾಗಿ ಪ್ರೀತಿ-ಸ್ನೇಹಗಳು ತಲೆದೋರಿ ಎಲ್ಲರೂ ಶಾಂತಿಪೂರ್ಣ ವಾತಾವರಣದಲ್ಲಿ ಉತ್ಕರ್ಷವನ್ನು ಸಾಧಿಸಿ, ಸಂತೋಷದಿಂದ ಜೀವನವನ್ನು ನಡೆಯಿಸಬೇಕು ಎಂಬ ಆಶಯದಿಂದ ಅದನ್ನು ರೂಪುಗೊಳಿಸಿದರು. ಆದರೆ ಒಂದೆರಡು ವರ್ಷಗಳಲ್ಲಿಯೆ ಪರಿಸ್ಥಿತಿಯಲ್ಲಿ ಪರಿವರ್ತನೆಯುಂಟಾದ ಸ್ಪಷ್ಟ ಲಕ್ಷಣಗಳು ವ್ಯಕ್ತವಾದುವು. ಒಂದೊಂದು ನೆವದಿಂದ ಪ್ರತಿಯೊಬ್ಬರ ಮನಸ್ಸಿನಲ್ಲಿ ಅಲ್ಲದ-ಸಲ್ಲದ ಸಂಶಯ-ಭೀತಿ-ಅಸೂಯೆಗಳು ಹುಟ್ಟಿ, ಅಲ್ಪಸಮಯದಲ್ಲಿಯೆ ಮತ್ತೆ ಪ್ರಪಂಚದ ರಾಷ್ಟ್ರಗಳ ಬಹುಸಂಖ್ಯೆಯಲ್ಲಿ ಎರಡು ಬಣಗಳು ನಿರ್ಮಾಣವಾದುವು. ಯುದ್ಧದ ಯಾವ ಭೀಕರವಾದ ಅನುಭವವನ್ನು ಇನ್ನೆಂದೂ ಪಡೆಯದಂತೆ ನಾವೆಲ್ಲರೂ ಒಟ್ಟಾಗಿ ಬದುಕಬೇಕು ಎಂಬ ಉದಾತ್ತವಾದ ಚಿತ್ರವನ್ನು ಕಣ್ಣಿನೆದುರಿಗೆ ಇಟ್ಟುಕೊಂಡು ಹೊರಟ ವಿಶ್ವವು ಯುದ್ಧದಂತಹ ಪರಿಸ್ಥಿತಿಯಲ್ಲಿಯೆ ಕೋಪ-ಜಗುಪ್ಸೆ-ಆರೋಪಗಳನ್ನು ತಳೆಯುವ ಎರಡು ಪಂಗಡಗಳನ್ನು ನೋಡಬೇಕಾಯಿತು.

ಸಂಘದ ನಿರ್ಮಾಣ ಮತ್ತು ವ್ಯವಸ್ಥೆಯ ವಿಷಯವಾಗಿ ಮೊದಲಿನಿಂದಲೂ ಭಿನ್ನಾಭಿಪ್ರಾಯಗಳು ಹುಟ್ಟಿ, ಪರಸ್ಪರ ಪ್ರತಿಷ್ಠೆಯನ್ನು ಮಾತ್ರ ಬೆಳೆಯಿಸಿಕೊಳ್ಳುವ ಕಣವಾಗಿ ಪರಿಣಮಿಸಿದ ಈ ಸಂಸ್ಥೆಯಿಂದ ಪ್ರಪಂಚದಲ್ಲಿ ಶಾಂತಿಯನ್ನು ಸ್ಥಾಪಿಸುವ ಕಾರ್ಯ ಆಗುವದು ಹೇಗೆ ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಧೈರ್ಯವಾಗಿ ಉತ್ತರಕೊಡುವಂತಹ ರಚನಾತ್ಮಕ ಕಾರ್ಯವು ಸಂಯುಕ್ತರಾಷ್ಟ್ರಸಂಘದ ಆಶ್ರಯದಲ್ಲಿ ಸಂಪೂರ್ಣವಾಗಿಯೂ ಯಶಸ್ವಿಯಾಗಿಯೂ ಆಗಿಲ್ಲ ಎಂದೇ ಹೇಳಬೇಕಾಗುವದು.

ಒಂದು ಕೋರಿಯದ ಪ್ರಶ್ನೆಯೇ ಇರಲಿ, ಒಂದು ಇಂಡೋನೇಶಿಯದ ಸಮಸ್ಯೇ ಆಗಲಿ, ಒಂದು ಇರಾಣಿನ ಪ್ರಮೇಯವೇ ಆಗಲಿ, ಒಂದು ಇಸ್ರೈಲಿನ ವಿಷಯವೇ ಆಗಲಿ ನಿರ್ದಿಷ್ಟವಾದ ಧೋರಣೆಯು ಸಂಘದ ವಿವಿಧ ಅಂಗಸಂಸ್ಥೆಯಲ್ಲಿ ಸ್ವೀಕೃತವಾಗಿ, ಆಮೇರೆಗೆ ಕಾರ್ಯವು ರೂಪುಗೊಂಡಿತು ಎಂದು ಹೇಳಬಹುದಾದ ದೃಷ್ಟಾಂತಗಳೇ ಇಲ್ಲ. ಇದು ರಾಜಕೀಯಕ್ಕೆ ಸಂಬಂಧಿಸಿದ ಕೆಲವು ವಿಷಯಗಳ ಪಟ್ಟಿ; ಇತ್ತ ಸಾಮಾಜಿಕ ಮತ್ತು ಆರ್ಥಿಕ, ಯುದ್ಧವಿಷಯಕ ಮತ್ತು ಶಾಂತಿಸ್ಥಾಪನೆಯು, ಇವೇ ಮೊದಲಾದ ಸಂಗತಿಗಳಲ್ಲಿ ನಿಶ್ಚಿತವಾದ ಮಾರ್ಗದರ್ಶನವನ್ನು ಮಾಡಲಿಕ್ಕೆ ಸಂಯುಕ್ತ ರಾಷ್ಟ್ರಸಂಘವು ಸಮರ್ಥವಾಗಿಲ್ಲ ಎಂದೇ ಹೇಳಬೇಕಾಗುತ್ತದೆ.

ಈ ಬಗೆಯ ಅನಿಶ್ಚಿತೆಯು ಅಲ್ಲಿ ಕಂಡು ಬರಲಿಕ್ಕೆ ಅನೇಕ ಕಾರಣ ಗಳಿರುತ್ತವೆ; ಮೂಲವಾಗಿ ಎಲ್ಲರೂ ಕೂಡಿ ನಡೆಯಬೇಕು. ಮತ್ತು ಸಂಯುಕ್ತಹಿತವನ್ನು ಸಹಕಾರಭಾವನೆಯಿಂದ ಸಾಧಿಸಬೇಕು, ಎಂಬ ಆತುರ ಮತ್ತು ಉತ್ಸಾಹಗಳೇ ಅಲ್ಲಿ ಬೇರುಬಿಟ್ಟಿಲ್ಲ ಎಂಬ ಸಾಮಾನ್ಯವಾದ ತೊಡಕು; ಆಮೇಲೆ ಬರುವದು ವಿಶೇಷಾಧಿಕಾರದ ಪ್ರಶ್ನೆ. ಎಲ್ಲಿ ತಮ್ಮ ಅಂತರ್ರಾಷ್ಟ್ರೀಯ ಮಹತ್ವಕ್ಕೆ ಚ್ಯುತಿಯುಂಟಾಗುವದೋ ಎಂದು ಪ್ರಬಲ-ರಾಷ್ಟ್ರಗಳು ಹೆದರಿ, ನಿರ್ದಿಷ್ಟ ಪರಿವರ್ತನೆಯನ್ನು ತಂದೊಡ್ಡುವ ಯಾವದೇ ಸುಧಾರಣೆಯನ್ನು ತಮ್ಮ ಈ ರಾಮಬಾಣದಿಂದ ಸದೆಬಡೆಯುವದೇ ಒಂದು ಆ ರಾಷ್ಟ್ರಗಳ ಪ್ರಥಮ ಕರ್ತವ್ಯವಾಗಿರುತ್ತದೆ, ಎಂಬುದು ವಾದಿಕೆಯ ದೂರು. ಇದಕ್ಕೆ ಹೆಚ್ಚು ಶೋಚನೀಯವಾದ ತೊಂದರೆಯೆಂದರೆ ಸಂಯುಕ್ತ ರಾಷ್ಟ್ರಸಂಘದ ಮುಖಾಂತರವಾಗಿ ತಮಗೆ ಆಧೀನವಾಗಿರುವ ಇಲ್ಲವೆ ತಮ್ಮ ವರ್ಚಸ್ಸಿಗೆ ಒಳಪಡಬಹುದಾದ ರಾಷ್ಟ್ರಗಳಿಗೆ ಕಿಂಚಿತ್ ಆರ್ಥಿಕ ಸಹಾಯ, ತಕ್ಕಮಟ್ಟಿಗೆ ರಾಜಕೀಯ ರಕ್ಷಣೆ ಮತ್ತು ಅಲ್ಪಸ್ವಲ್ಪ ಸಾಮಾಜಿಕ ಮನ್ನಣೆ ಗಳನ್ನು ನೀಡಿ, ಆಮೂಲಕ ಅಂತರ್ರಾಷ್ಟ್ರೀಯ ಕ್ಷೇತ್ರದಲ್ಲಿ ತಮ್ಮ ಪ್ರತಿಷ್ಠೆ ಯನ್ನು ಬೆಳೆಯಿಸಿಕೊಳ್ಳಬೇಕೆಂಬುದೇ ಬಲಿಷ್ಠ ರಾಷ್ಟ್ರಗಳ ಉದ್ದೇಶವಿದ್ದಂತೆ ತೋರುವದು. ಅಂತೆಯೇ ಸಂಘವು ಅಸ್ತಿತ್ವದಲ್ಲಿ ಬಂದ ಕೆಲವೇ ವರ್ಷ ಗಳಲ್ಲಿ ಪ್ರತಿಯೊಂದು ಚಿಕ್ಕದೊಡ್ಡ ವಿಷಯಗಳ ನಿಷ್ಕರ್ಷೆಯಾಗುವದು ಅಷ್ಟು ಹಗುರಾಗಿ ಉಳಿಯಲಿಲ್ಲ. ಮತ್ತು ಅಂತಹ ಸಂದರ್ಭಗಳಲ್ಲಿ ಸುಲಭ

ವಾಗಿ ಎರಡು ಪಂಗಡಗಳಾಗಿ ಪ್ರಪಂಚದ ವಿಭಜನೆಯಾಗುತ್ತಿರುವದೂ ಕಂಡು ಬಂದಿತು. ಈ ಬಗೆಯ ತಂಡಗಳಾಗಲಿಕ್ಕೆ ಸಂಯುಕ್ತರಾಷ್ಟ್ರಸಂಘದ ವಿಧಾನವು ಕಾರಣ ಎಂದು ಸಾರುವದಾಗಲಿ, ದುರ್ಬಲ ರಾಷ್ಟ್ರಗಳಲ್ಲಿರುವ ಅನೈಕ್ಯವು ಮೂಲ ಎಂದು ವಾದಿಸುವದಾಗಲಿ ಸರಿಯಾಗಿ ಕಾಣುವದಿಲ್ಲ; ಅದಕ್ಕೆ ಮುಖ್ಯವಾದ ಕಾರಣ ಸಂಘದಲ್ಲಿ ಸೇರಿದ ಸದಸ್ಯರು ಸಂಘದ ಉದ್ದೇಶ ಮತ್ತು ಆದರ್ಶಗಳನ್ನು ಹಾರ್ದಿಕವಾಗಿ ಒಪ್ಪಿಕೊಂಡೇ ಇಲ್ಲ, ಎಂಬುದು ಹೆಚ್ಚು ಸಮರ್ಪಕವಾಗಿ ತೋರುತ್ತದೆ.

ಕೋರಿಯದ ಪರಿಸ್ಥಿತಿಯನ್ನೆ ನೋಡಬಹುದು; ಯುದ್ಧವು ಮುಗಿದು ಸಂಧಿಗಳು ಸಿದ್ಧವಾಗುವ ಕಾಲದಿಂದ, ಅಂದರೆ ಸಂಯುಕ್ತ ರಾಷ್ಟ್ರಸಂಘದ ಜನ್ಮವಾಗುವದಕ್ಕಿಂತ ಮೊದಲಾಗಿಯೆ ಕೋರಿಯದ ಮೇಲೆ ಪ್ರಭುತ್ವವನ್ನು ಸ್ಥಾಪಿಸುವ ವಿಷಯವಾಗಿ ಮಿತ್ರರಾಷ್ಟ್ರಗಳು ಕೊಂಚುಹಾಕತೊಡಗಿದವು. ಕ್ರಮವಾಗಿ ಮುಂದೆ ಅದರಲ್ಲಿಯೆ ಎರಡು ಭಾಗಗಳಾಗಿ, ಅವುಗಳ ಸ್ವತಂತ್ರ ಅಸ್ತಿತ್ವವನ್ನು ಮಾನ್ಯಮಾಡಬೇಕು ಎಂಬ ಚರ್ಚೆಯಾಗಿ, ಕೋರಿಯದ ಜನರು ತಮ್ಮ ಭವಿತವ್ಯವನ್ನು ತಾವೇ ನಿರ್ಧರಿಸಿಕೊಳ್ಳಬೇಕು ಎಂಬ ಉಚ್ಚ-ತತ್ವಗಳ ಘೋಷಣೆಯದಿರಲಿ; ಅಷ್ಟರಲ್ಲಿ ಯಾವುದೇ ಒಂದು ಯಃಕಶ್ಚಿತ್ ಕಾರಣಕ್ಕಾಗಿ ಅಲ್ಲಿಯ ಎರಡೂ ವಿಭಾಗಗಳಲ್ಲಿ ಕದನವುಂಟಾಯಿತು. ಅವು ನಳಿಗೆ ಪ್ರತ್ಯಕ್ಷವಾಗಿಯೊ, ಪರೋಕ್ಷವಾಗಿಯೊ, ಪ್ರಪಂಚದ ಪ್ರಬಲ-ರಾಷ್ಟ್ರಗಳು ಎರಡು ಪಂಗಡಗಳಾಗಿ ಸಹಾಯವನ್ನು ಸಲ್ಲಿಸಿ, ಕೊನೆಗೆ ಮತ್ತೆ ಅಲ್ಲಿ ವಿರಾಮಸಂಧಿಯು ಆಗಬೇಕಾದರೆ, ಇಷ್ಟು ಸಮಯ ಹಿಡಿಯಿತು. ಈ ಅವಧಿಯಲ್ಲಿ ಕೋರಿಯದ ಪ್ರಜೆಗಳ ಅವಸ್ಥೆಯೇನಾಗಿರುವದು ಎಂಬುದನ್ನು ಯೋಚಿಸುವ ಭೂಷನೆ ಇಲ್ಲ.

ಈ ಬಗೆಯ ಜಗ್ಗಾಟದಲ್ಲಿ ಸಂಯುಕ್ತರಾಷ್ಟ್ರಸಂಘದ ಧ್ಯೇಯ ಮತ್ತು ಕಾರ್ಯಕ್ರಮಗಳು ಯಾವ ಮೂಲೆಯಲ್ಲಿ ಮರೆಯಲ್ಪಟ್ಟವೊ ಕೇಳುವವ-ರಾರು? ಚಿಕ್ಕಪ್ರಮಾಣದಲ್ಲಿಯಾದರೂ ಒಂದು ಯುದ್ಧವು ಆರಂಭವಾಯಿ-ತೆಂದರೆ, ಅದರ ಆರ್ಥಿಕ ಲಾಭವನ್ನು ಪಡೆಯಬೇಕು ಎಂದು ಕೆಲವರು ಹವಣಿಸಿದರೆ, ಅದರಮೇಲೆ ರಾಜಕೀಯ ಸ್ವಾಮಿತ್ವವನ್ನು ಸಾಧಿಸಬೇಕು

ಎಂದು ಇತರರ ಹಂಬಲವಾಗಿರುತ್ತದೆ. ಇದು ಮತ್ತೆ ಮೊದಲಿನಂತೆ ರಾಜಕೀಯ ದಾಸ್ಯ, ಆರ್ಥಿಕ ಉಪನಿವೇಶವಾದ ಮತ್ತು ಸಾಮಾಜಿಕ ಅನುಕರಣೀಯ ಹಳೆಯ ಹಾಡಿನ ಪುನರಾವೃತ್ತಿಯೆ ಆಗುತ್ತದೆಯೋ ಹೊರ-ತಾಗಿ ದೂಷಿತ ಶಕ್ತಿಗಳ ಆಕಾಂಕ್ಷೆಗಳನ್ನು ಬದಿಗೊತ್ತಿ ರಾಜಕೀಯ ಸ್ವಾತಂತ್ರ್ಯ, ಅಂತರ್ರಾಷ್ಟ್ರೀಯ ಸಹಕಾರ ಮತ್ತು ವಿಶ್ವಶಾಂತಿಯ ಹೊಸ ಬೆಳಕಿನ ಸಂದೇಶವನ್ನು ಸಾರುವ ಸಂಯುಕ್ತರಾಷ್ಟ್ರಸಂಘದ ವಿಚಾರವನ್ನೆ ಮಾಡುವದಿಲ್ಲ. ಇಂಡೋನೇಶಿಯದ ಸ್ವಾತಂತ್ರ್ಯಪ್ರಾಪ್ತಿಯ ಸಮಯದಲ್ಲಿ ಕೂಡ, ಒಂದು ರಾಷ್ಟ್ರದ ಪ್ರಭುತ್ವವನ್ನು, ಆರ್ಥಿಕ ಅನುಕೂಲತೆಗಳನ್ನು ಕದಡಲಿಕ್ಕೆ ಇಷ್ಟಪಡೆದ ಕೆಲವು ಬಲಿಷ್ಠ ರಾಷ್ಟ್ರಗಳು, ಆ ವಿಷಯವಾಗಿ ಸಹಾನುಭೂತಿಯನ್ನು ತೋರುವದಾಗಲಿ, ಕೇವಲ ತತ್ವವನ್ನು ಸಾರುವದ-ನ್ನಾಗಲಿ ಮಾಡಿದವೇ ಹೊರ್ತು ಅಧಿಕೃತವಾದ ಸಹಾಯವನ್ನು ಸಂಘದ ಮುಖಾಂತರ ಅವುಗಳಿಗೆ ನೀಡುವದಾಗಲಿಲ್ಲ. ಇಂತಹ ಅನೇಕ ಸಂದರ್ಭ ಗಳಲ್ಲಿ ಸಂಬಂಧಿಸಿದ ರಾಷ್ಟ್ರಗಳು ಚಿಕ್ಕವಾಗಿದ್ದರೆ ಅವುಗಳ ಕೊರಗನ್ನು ಕೇಳುವವರೇ ಇಲ್ಲದಂತೆ ಅಲ್ಲಿ ಪರಿಸ್ಥಿತಿಯಿರುತ್ತಿದ್ದರೆ ತೀರಿಯೇ ಹೋಯಿತು. ಒಂದುವೇಳೆ ಆ ವಿಷಯವು ಪ್ರಬಲರಾಷ್ಟ್ರಗಳ ವಿಶಿಷ್ಟ ಹಿತವನ್ನು ತಪ್ಪಿಸು ವಂತಿದ್ದರೆ, ಅಲ್ಲಿ ಕೂಡಲೆ ಬಣಗಳಾಗಿ ಅದರ ಮುಂದಿನ ಚರ್ಚೆಯಾಗಲಿ, ಕಾರ್ಯವಾಗಲಿ ನಡೆದು ಜರುಗದಂತಹ ದಿಗ್ಬಂಧನವಾದರೂ ನಿರ್ಮಾಣ ವಾಗುತ್ತಿತ್ತು. ಒಟ್ಟಿನಲ್ಲಿ ಸಂಯುಕ್ತರಾಷ್ಟ್ರಸಂಘಕ್ಕೆ ತನ್ನ ಉದ್ದೇಶಗಳನ್ನು ಈಡೇರಿಸುವ ಅಧಿಕಾರವಿದ್ದರೂ, ಮಾರ್ಗವಾಗಲಿ, ಸಾಧನವಾಗಲಿ ಇದ್ದಿರಲಿಲ್ಲ ಎಂಬುದು ಗಮನಾರ್ಹವಾದ ವಿಷಯವಾಗಿದೆ.

ಸಾಮಾಜಿಕ ವಿಷಯಗಳಲ್ಲಿ ಮತ್ತು ಆರ್ಥಿಕ ಸಂಬಂಧದಲ್ಲಿ ಜರುಗು-ತ್ತಿರುವ ಲೋಪಗಳು ಸಂಯುಕ್ತ ರಾಷ್ಟ್ರಸಂಘದ ಅಧಿಕಾರ ಮತ್ತು ಗೌರವ-ಗಳನ್ನು ಅಭಿವೃದ್ಧಿಗೊಳಿಸುವಂತೆ ಎಷ್ಟೋ ಸಹಾಯಕವಾಗುತ್ತಿಲ್ಲ. ಭಾರತವು ದಕ್ಷಿಣ ಆಫ್ರಿಕೆಯ ಶಾಸನವೊಂದರ ವಿರುದ್ಧವಾಗಿ ಮಾಡಿದ ಅರಿಕೆ ಮತ್ತು ಅದನ್ನು ಹಿಂದೆಗೆದುಕೊಳ್ಳುವಂತೆ ಸಂಯುಕ್ತ ರಾಷ್ಟ್ರಸಂಘವು ತನ್ನ ವರ್ಚ ಸ್ಸನ್ನು ಉಪಯೋಗಿಸಬೇಕು ಎಂದು ಸಲ್ಲಿಸಿದ ಕೋರಿಕೆ ಸಾಮಾನ್ಯ ಸಭೆಯಲ್ಲಿ ಎಷ್ಟೋ ಬಾರಿ ಚರ್ಚೆಗೆ ಬಂದು, ಉಭಯಪಕ್ಷಗಳ ಅಭಿಪ್ರಾಯ

ವನ್ನು ತಿಳಿದುಕೊಂಡು, ಒಂದು ನಿರ್ದಿಷ್ಟ ಮಾರ್ಗದರ್ಶನದ ಗೊತ್ತುವಳಿ ಯನ್ನು ಸ್ವೀಕರಿಸಿದರೂ ಕೂಡ ಸಂಗಮದಲ್ಲಿ ಅದು ಇನ್ನೂ ವರೆಗೆ ನಿಷ್ಫಲ ವಾಗಿಯೆ ಉಳಿದುದು ವಿಸ್ಮಯದ ಸಂಗತಿಯಾಗಿದೆ.

ಸಂಯುಕ್ತ ರಾಷ್ಟ್ರಸಂಘವು ಅಸ್ತಿತ್ವದಲ್ಲಿ ಬರುವದಕ್ಕಿಂತ ಮೊದಲು ಎಷ್ಟೋ ವರ್ಷಗಳ ಹಿಂದೆ, ಭಾರತ ಮತ್ತು ದಕ್ಷಿಣ ಆಫ್ರಿಕೆಗಳ ನಡುವೆ ಪರ-ಸ್ಪರ ಸಂಬಂಧದ ಒಪ್ಪಂದವೊಂದು ಆಗಿದ್ದಿತು. ಎಷ್ಟೋ ವರ್ಷಗಳ ವರೆಗೆ ದಕ್ಷಿಣ ಆಫ್ರಿಕೆಯಲ್ಲಿ ನೆಲಸಿ, ಅಲ್ಲಿಯ ಆರ್ಥಿಕ-ಸಾಮಾಜಿಕ ಜೀವನವನ್ನು ಊರ್ಜಿತಗೊಳಿಸಲಿಕ್ಕೆ ಭಾರತೀಯರು ತಮ್ಮ ತನು-ಮನ-ಧನಗಳನ್ನು ಅರ್ಪಿ ಸಿರುವರಷ್ಟೆ ಅಲ್ಲದೆ, ಅಲ್ಲಿ ಈಚೆಗೆ ಬಂದು ರಾಜ್ಯಸೂತ್ರಗಳನ್ನು ವಹಿಸಿ-ಕೊಂಡ ಪಾಶ್ಚಾತ್ಯ ಮತ್ತು ಅಲ್ಲಿಯ ಮೂಲನಿವಾಸಿಗಳು ಇವರಲ್ಲಿ ಯಾವ ಭೇದಭಾವವನ್ನೂ ಎಣಿಸದೆ, ಅತ್ಯಂತ ಸ್ನೇಹದಿಂದಲೂ ಪೂರ್ಣ ಸೌಹಾರ್ದ ದಿಂದಲೂ ಅವರೊಡನೆ ಇರಲಿಕ್ಕೆ ಪ್ರಯತ್ನ ಮಾಡಿದ್ದಾರೆ. ದಕ್ಷಿಣ ಆಫ್ರಿ-ಕೆಯಲ್ಲಿ ನೆಲಸಿದ ಅಂತಹ ಭಾರತೀಯರಿಗೆ ನಾಗರಿಕ ಅಧಿಕಾರ ಮತ್ತು ಸಾಮಾಜಿಕ ರಕ್ಷಣೆಗಳು ದೊರೆಯದಂತಹ ಬಹಿಷ್ಕಾರದ ಶಾಸನವನ್ನು ದಕ್ಷಿಣ ಆಫ್ರಿಕೆಯು ಅಂಗೀಕರಿಸಬೇಕೆಂದು ಯೋಚಿಸಿತು. ಅಷ್ಟೇ ಅಲ್ಲದೆ ಕಪ್ಪು ಚರ್ಮವಿರುವ ಎಲ್ಲ ಆಫ್ರಿಕಾ ನಿವಾಸಿಗಳನ್ನು ವರ್ಣದ್ವೇಷದ ಭಯಾನಕ ವಾದ ನೀತಿಯನ್ನು ದಕ್ಷಿಣ ಆಫ್ರಿಕೆಯ ಆಡಳಿತವು ಆತ್ಮಗತಮಾಡಿಕೊಂಡು ಅದನ್ನು ಎಂತಹ ಎಡರು-ತೊಡರುಗಳು ಬಂದರೂ ಕಾರ್ಯಗತ ಮಾಡ ಬೇಕೆಂದು ಹವಣಿಸುತ್ತಿರುವರು.

ಈ ಬಗೆಯ ಧೋರಣೆಯು ಮತ್ತು ನಡತೆಯು ಅಂತರ್ರಾಷ್ಟ್ರೀಯ ಒಪ್ಪಂದಗಳ ಗೌರವವನ್ನು ತಗ್ಗಿಸುವದಲ್ಲದೆ ಅದರ ಮೂಲಕ ಸಂಯುಕ್ತ ರಾಷ್ಟ್ರಸಂಘದ ಮೂಲ ವಿಚಾರವೆಂದು ಸ್ವೀಕರಿಸಿದ ಮಾನವನ ಸಮಾನ ಅಧಿಕಾರಗಳ ಮತ್ತು ಮಾನವೀಯ ಮರ್ಯಾದೆಯ ತತ್ವಗಳಿಗೆ ಬಾಧಕವಾಗು ವದೆಂದು ಭಾರತವು ತನ್ನ ದೂರನ್ನು ಸಾಮಾನ್ಯಸಭೆಯ ಎದುರಿಗೆ ಮಂಡಿ ಸಿತು. ಆದರೆ ಈ ಸೂಚನೆಯ ವಿಚಾರವಾಗಿ ಚರ್ಚೆಯು ಸಾಮಾನ್ಯಸಭೆ-ಯಲ್ಲಿ ನಡೆದಾಗ್ಗೆ ದಕ್ಷಿಣ ಆಫ್ರಿಕರ ಪ್ರತಿನಿಧಿಯು ಮೊದಲಾಗಿ ಸಾಮಾನ್ಯ ಸಭೆಗೆ ಈ ವಿಷಯವನ್ನು ಪರ್ಯಾಲೋಚಿಸಲಿಕ್ಕೆ ಅವಕಾಶವೂ ಇಲ್ಲ

ಅಧಿಕಾರವೂ ಇಲ್ಲ ಎಂದು ವಾದಿಸಿ ಆ ಮೇಲೆ ಈ ವಿಷಯವು ಕೇವಲ ತನ್ನ ರಾಜ್ಯದ ಆಡಳಿತಕ್ಕೆ ಸಂಬಂಧಪಟ್ಟುದಾಗಿರುವದರಿಂದ ಅದರಲ್ಲಿ ಕೈಹಾಕಲಿಕ್ಕೆ ಸಾಮಾನ್ಯಸಭೆಗೆ ಯಾವ ಕಾರಣವೂ ಇಲ್ಲ ಎಂದು ಸಾಧಿಸಿತು.

ಈ ಪ್ರಸ್ತಾಪವು ಅಲ್ಪಸಮಯದಲ್ಲಿಯೆ ಗಂಭೀರ ಸ್ವರೂಪವನ್ನು ತಳೆಯಿತು. ಇತ್ತ ಭಾರತವು ಸ್ವತಂತ್ರವಾಗಿ, ಭಾರತ-ಪಾಕಿಸ್ತಾನ ಎಂಬ ರಾಷ್ಟ್ರಗಳು ತಲೆಯೆತ್ತಿದವು. ಅತ್ತ ಸಂಯುಕ್ತ ರಾಷ್ಟ್ರಸಂಘದ ಸಮ್ಮುಖದಲ್ಲಿ ಈ ವಿಷಯದ ಚರ್ಚೆಯು ಇನ್ನೂ ಅನಿರ್ಣಿತ ಸ್ಥಿತಿಯಲ್ಲಿ ಇದಾಗ್ಗ, ದಕ್ಷಿಣ ಆಫ್ರಿಕದ ಸರಕಾರವು ವರ್ಣಭೇದದ ತಮ್ಮ ಶಾಸನವನ್ನು ವಿಧಾನಸಭೆಯಲ್ಲಿ ಮಂಡಿಸಿತು. ದಕ್ಷಿಣ ಆಫ್ರಿಕೆಯಲ್ಲಿ ನೆಲಸಿದ ಭಾರತೀಯರು, ಪಾಕಿಸ್ತಾನಿಗಳು ಮತ್ತು ಇತರ ಕಂದುಬಣ್ಣದ ಪ್ರಜೆಗಳು ಕಂಗೆಟ್ಟರು. ಭಾರತೀಯರ ಮುಖಂಡರಲ್ಲಿ ವಿಧಾಯಕಮಾರ್ಗದ ಪುರಸ್ಕರ್ತರಾದವರು ಕೆಲವರು ಪ್ರದರ್ಶನ-ಪ್ರತಿಭಟನೆ-ಸತ್ಯಾಗ್ರಹಗಳೆ ಮೊದಲಾದ ಪ್ರತ್ಯಕ್ಷ ಕಾರ್ಯಕ್ಕೆ ಧುಮುಕಿದರು; ಅತ್ತ ಸಂಯುಕ್ತ ರಾಷ್ಟ್ರಸಂಘದ ಸಾಮಾನ್ಯಸಭೆಯಲ್ಲಿ ಭಾರತ-ಪಾಕಿಸ್ತಾನಗಳ ಪ್ರತಿನಿಧಿಗಳು ಸನ್ನಿಹಿತವಾದ ಈ ಗಂಡಾಂತರದ ವಿಷಯವಾಗಿ ಉಗ್ರವಾದ ಉಪಾಯಗಳನ್ನು ಯೋಜಿಸಬೇಕೆಂದು ಸೂಚಿಸಿದರು; ಪ್ರಕರಣವು ವಿಕೋಪಕ್ಕೆ ಬಂದಿತು.

ಸಂಯುಕ್ತ ರಾಷ್ಟ್ರಸಂಘನ ಭವಿಷ್ಯದ ವಿಷಯವಾಗಿಯೇ ಶಂಕೆಯು ತಲೆದೋರುವಂತಹ ಸನ್ನಿವೇಶವು ಇದೊಂದಾಯಿತು. ಕೇವಲ ಎರಡು ರಾಷ್ಟ್ರಗಳ ಪ್ರಜೆಗಳ ಪರಸ್ಪರ ಸಂಬಂಧದ ಮಾತಷ್ಟೆ ಇದಾಗಿರದೆ, ಅಂತರ್ರಾಷ್ಟ್ರೀಯ ಸಂಪರ್ಕ ಮತ್ತು ಅಂತರ್ರಾಷ್ಟ್ರೀಯ ಒಪ್ಪಂದಗಳ ಸನ್ಮಾನವು ಈ ವಿಷಯದಲ್ಲಿ ಅಡಕವಾಗಿತ್ತು. ಅಂತೆಯೆ ಸಾಮಾನ್ಯಸಭೆಯು ಈ ವಿಷಯದತ್ತ ತೀವ್ರಗತಿಯಿಂದ ತನ್ನ ಗಮನವನ್ನು ಸೆಳೆಯಿತು.

ಒಳಾಡಳಿತಕ್ಕೆ ಸಂಬಂಧಪಟ್ಟ ವಿಷಯವು ಇದಾಗಿರುವದರಿಂದ ಅದರ ಬಗ್ಗೆ ಸಾಮಾನ್ಯಸಭೆಯು ಕೈಹಾಕುವ ಕಾರಣವೇ ಇಲ್ಲ ಎಂಬ ದಕ್ಷಿಣ ಆಫ್ರಿಕದ ವಾದವು ನಿರಾಧಾರವಾದುದು; ಅಂತರ್ರಾಷ್ಟ್ರೀಯ ಕ್ಷೇಮ ಮತ್ತು ವಿಶ್ವಶಾಂತಿಗೆ ಸಂಬಂಧಿಸಿದ ಎಲ್ಲ ವಿಷಯಗಳಂತೆಯೆ ಎರಡು ರಾಷ್ಟ್ರಗಳ

ಸಂಬಂಧಕ್ಕೆ ಕಾರಣವಾಗಿರುವ ಈ ವಿಷಯದ ಚರ್ಚೆಗೆ ಸಂಘವು ಅಧಿಕಾರ ವನ್ನು ಪಡೆದಿರುವದು ಎಂದು ಸಾರಿತು. ಅಷ್ಟರಲ್ಲಿ ದಕ್ಷಿಣ ಆಫ್ರಿಕೆಯ ಸರಕಾರವು ಆ ಶಾಸನವನ್ನು ಅಂಗೀಕರಿಸಿತ್ತು. ಭಾರತ–ಪಾಕಿಸ್ತಾನಗಳು ಕೂಡಲೆ ಅದರ ವಿರುದ್ಧವಾಗಿ ಕೂಗನ್ನೆಬ್ಬಿಸಿ, ಆ ಶಾಸನವು ಕಾರ್ಯರೂಪ ದಲ್ಲಿ ಬರದಂತೆ ಆತಂಕವನ್ನುಂಟುಮಾಡುವ ಗೊತ್ತುವಳಿಯನ್ನು ಸಂಯುಕ್ತ ರಾಷ್ಟ್ರಸಂಘವು ನಿರ್ಣಯಿಸಬೇಕು ಎಂದು ಅಭಿಪ್ರಾಯಪಟ್ಟವು. ಸಂಘವು ಸಾಮಾನ್ಯಸಭೆಯ ಮುಖಾಂತರ ಸಂಬಂಧಪಟ್ಟ ಮೂರೂ ರಾಷ್ಟ್ರಗಳಲ್ಲಿ ಒಡಂಬಡಿಕೆಯಾಗುವಂತೆ ಒಂದು ಸದ್ಭಾವನಾಸಮಿತಿಯನ್ನು ನೇಮಿಸಿತು. ಅಂತರ್‍ರಾಷ್ಟ್ರೀಯ ಸೌಹಾರ್ದ ಮತ್ತು ಮಾನವ ಮೂಲಾಧಿಕಾರಗಳಿಗೆ ಅನು ಸರಿಸಿ ಈ ವಿಷಯದಲ್ಲಿ ಸಂಯುಕ್ತ ರಾಷ್ಟ್ರಸಂಘವು ಆಸಕ್ತಿಯನ್ನು ತೋರಿಸಿ, ದಕ್ಷಿಣ ಆಫ್ರಿಕದ ನೀತಿಯು ನಿಂದಾಸ್ಪದವಾಗಿರುವದು ಎಂದೇನೊ ಅಭಿ- ಪ್ರಾಯಪಟ್ಟಿತು. ಆದರೆ ದಕ್ಷಿಣ ಆಫ್ರಿಕದ ಸರಕಾರ ತನ್ನ ವರ್ಣದ್ವೇಷದ ಧೋರಣೆಯನ್ನು ಹೆಚ್ಚು ಹೆಚ್ಚು ಪ್ರಬಲವಾಗಿ ಅನುಸರಿಸುತ್ತದೆ. ಅದರ ಪರಿಣಾಮವಾಗಿ ಅತ್ಯಂತ ಭಯಂಕರವಾದ ಪರಿಸ್ಥಿತಿಯು ನಿರ್ಮಾಣವಾಗ ಬಹುದು ಎಂಬ ಲಕ್ಷಣಗಳು ಕಂಡುಬಂದರೂ ಅವುಗಳನ್ನು ಲಕ್ಷಿಸದೆ, ಸಂಯುಕ್ತ ರಾಷ್ಟ್ರಸಂಘದ ಎಚ್ಚರಿಕೆಯನ್ನು ಗಮನಿಸದೆ, ತನ್ನ ಅಪಾಯ ಕಾರಕ ಕಾರ್ಯವನ್ನು ಯಥೇಚ್ಛವಾಗಿ ಮುಂದುವರಿಸಿದೆ.

ಸಂಯುಕ್ತ ರಾಷ್ಟ್ರಸಂಘದಂತಹ ಅಂತರ್‍ರಾಷ್ಟ್ರೀಯ ಅಧಿಷ್ಠಾನವನ್ನು ಮುಖಭಂಗ ಮಾಡಿ, ಅದರ ಸದಸ್ಯರಾಷ್ಟ್ರಗಳಲ್ಲಿಯೆ ಅದನ್ನು ಅವಹೇಳನಕ್ಕೆ ಗುರಿಮಾಡುವಂತಹ ಈ ನಡತೆಯು ಯಾವ ಸಾಮರ್ಥ್ಯದಿಂದ ಮತ್ತು ಎಂತಹ ನೈತಿಕ ಬಲದಿಂದ ಸಮರ್ಥ ಮಾಡುತ್ತಿರುವದೆಲ್ಲಿ ತಿಳಿಯುವದು. ಮೊದಲನೆಯದಾಗಿ ತನ್ನ ಧ್ಯೇಯವನ್ನು ಕಾರ್ಯರೂಪಕ್ಕೆ ಇಳಿಸುವ ಶಕ್ತಿಯು ಮೂಲವಾಗಿ ಸಂಯುಕ್ತ ರಾಷ್ಟ್ರಸಂಘದಲ್ಲಿ ಇಲ್ಲ, ಎಂದು ಕೆಲವರ ವಾದ. ಆದರೆ ಇದೇನು ಒಂದು ವಿಶ್ವಸೇನೆಯ ಸಹಾಯದಿಂದ ಅಥವಾ ವಿಶ್ವಶಾಸನದ ಹೆದರಿಕೆಯಿಂದ ಆಗಬೇಕಾದ ಕಾರ್ಯವಲ್ಲ ಎಂದು ಪ್ರತಿ ಯಾಗಿ ಕೆಲವರು ಉತ್ತರಿಸುತ್ತಾರೆ. ಈ ರೀತಿಯಿಂದ ತನ್ನ ಯೋಜನೆಗಳಿಗೆ ಕಾರ್ಯಕಾರೀ ಸ್ವರೂಪವನ್ನು ಕೊಡಲಿಕ್ಕೆ ಸಾಧ್ಯವಾಗದಿದ್ದರೂ ಪ್ರಪಂಚ

ಸಂಸ್ಥೆಯ ಸದಸ್ಯರಾಷ್ಟ್ರಗಳಲ್ಲಿ ಅಂತಹ ಅಭಿಪ್ರಾಯಗಳಿಗೆ ಗೌರವವನ್ನು ಸೂಚಿಸಿರುವಂತಹ ನೈತಿಕ ಪ್ರವೃತ್ತಿಯಾದರೂ ಇರಬೇಕು ಎಂಬುದು ನಿಶ್ಚಿತವಾದ ಮಾತು. ಅದರ ಬದಲಾಗಿ ವಿಶ್ವಸಂಸ್ಥೆಯ ಅಭಿಪ್ರಾಯ ಮತ್ತು ಕಾರ್ಯಸೂಚನೆಗಳಿಗೆ ಮನ್ನಣೆಯು ದೊರೆಯುವದಿಲ್ಲ, ಅಷ್ಟೇ ಅಲ್ಲದೆ ಅದನ್ನು ಬಹಿರಂಗವಾಗಿ ಪ್ರತಿಭಟಿಸುವಂತೆ ಹಲವು ರಾಷ್ಟ್ರಗಳು ಪ್ರೇರೇಪಿಸುತ್ತವೆ ಎಂಬ ಆರೋಪವು ಕೂಡ ಕೆಲವೆಡೆಗಳಿಂದ ಇತ್ತೀಚೆಗೆ ಕೇಳಬರುತ್ತದೆ. ಇವೂ ಕೂಡ ವಿಶ್ವದ ಎಲ್ಲ ರಾಷ್ಟ್ರಗಳನ್ನು ಒಂದು ನೀತಿಸೂತ್ರದಲ್ಲಿ ಪವಣಿಸಿ ಅಲ್ಲಿ ಶಾಂತಿ-ಸುಖ-ಸಮೃದ್ಧಿಗಳು ನೆಲಸುವಂತೆ ಮಾಡಬೇಕು ಎಂಬ ಆಶಯದ ಪ್ರತಿಯಾಗಿ ಪ್ರಪಂಚದ ರಾಷ್ಟ್ರಗಳಲ್ಲಿ ಬಣಗಳನ್ನು ಕಲ್ಪಿಸಿ ಅಶಾಂತಿ-ಅವಿಶ್ವಾಸ-ಅತೃಪ್ತಿಗಳು ಜನಿಸುವಂತೆ ಮಾಡುವ ಕೆಲಸಗಳೇ ಆಗಿರುತ್ತವೆ.

ಆರ್ಥಿಕ ಕ್ಷೇತ್ರದಲ್ಲಿಯೂ ಅಸ್ಪಷ್ಟವಾದರೂ, ಅಧಿಕವಾಗಿ ಕಾಣುವ ಇಂತಹ ಚಿತ್ರಗಳು ಇರುತ್ತವೆ. ಹಿಂದಿನ ಶತಮಾನದ ಸಾಮ್ರಾಜ್ಯವಾದ, ಸಾಮಂತವಾದ ಮತ್ತು ಉಪನಿವೇಶವಾದಗಳ ಕಾಲವು ಇಂದು ಇಲ್ಲದಂತಾಗಿ ಪ್ರತಿಯೊಂದು ರಾಷ್ಟ್ರವು ರಾಜಕೀಯ ಸ್ವಾತಂತ್ರ್ಯದಂತೆಯೆ ಆರ್ಥಿಕ ಸ್ವಾಯತ್ತತೆಯನ್ನು ಉಪಭೋಗಿಸಲಿಕ್ಕೆ ಅರ್ಹವಾಗಿರುತ್ತದೆ, ಎಂಬ ವಿಚಾರವನ್ನು ಅಧಿಲೇಖನದಲ್ಲಿ ಸಂಯುಕ್ತ ರಾಷ್ಟ್ರಸಂಘವು ಕಾಣಿಸಿದ್ದರೂ ಪ್ರತ್ಯಕ್ಷ ರೂಪದಲ್ಲಿ ಅದು ಸಾಕಷ್ಟು ಸಮಾಧಾನಕರವಾಗಿ ಕಂಡುಬರುವದಿಲ್ಲ. ತತ್ವಶಃ ಅಂತಹ ಮಾತುಗಳಿಗೆ ಔಪಚಾರಿಕವಾದ ಮನ್ನಣೆಯು ದೊರೆಯುತ್ತಿದ್ದರೂ, ಇದ್ದ ಪರಿಸ್ಥಿತಿಯಲ್ಲಿ ಬದಲಾವಣೆಯನ್ನು ಮಾಡಿಕೊಳ್ಳಲಿಕ್ಕೆ, ಕೈಯಲ್ಲಿ ಸಿಕ್ಕ ಸೌಕರ್ಯಗಳನ್ನು ಸಹಜವಾಗಿಯೆ ಬಿಟ್ಟುಕೊಡಲಿಕ್ಕೆ ಯಾವ ರಾಷ್ಟ್ರವೂ ಮುಂದೆ ಬರುವದಿಲ್ಲ ಎಂಬುದು ಸ್ವಾಭಾವಿಕವೆನಿವಂತಹ ಒಂದು ಅನುಭವವಾಗಿದೆ; ಇದಷ್ಟೇ ಅಲ್ಲದೆ ಇತ್ತೀಚೆಗೆ ಹಬ್ಬುತ್ತಿರುವಂತೆ ಕಂಡ ಇನ್ನೊಂದು ಸ್ಥಿತ್ಯಂತರವೆಂದರೆ ವಿಶ್ವಸಂಸ್ಥೆಯ ತತ್ವಗಳ ಆಧಾರವನ್ನು ಮುಂದೆ ಮಾಡಿ ಮೊದಲು ರಾಜಕೀಯ ಮತ್ತು ಆರ್ಥಿಕ ಲಾಭಗಳಿಗೆ ಬಾಧ್ಯಸ್ಥರಾಗಿದ್ದ ಕೆಲವು ರಾಷ್ಟ್ರಗಳಿಂದ ಆ ಪ್ರಯೋಜನವನ್ನು ತಪ್ಪಿಸಿ ಇನ್ನಾರೋ ಅದನ್ನೇ ಬೇರೆ ಒಂದು ರೂಪದಲ್ಲಿ ತಮ್ಮ ಉಡಿಯಲ್ಲಿ ಹಾಕಿಕೊಳ್ಳುವ ಪ್ರವೃತ್ತಿಯು. ಇದು ಹಿಂದಿನ ಯುಗದ ಎಲ್ಲ ವಾದಗಳನ್ನು

ವೇಷಾಂತರಗೊಳಿಸಿ ಮತ್ತೆ ಅಚ್ಚಳಿಯದಂತೆ ಇಟ್ಟುಕೊಳ್ಳುವ ಇನ್ನೊಂದು ಹವ್ಯಾಸವೇ ಆಗಿದೆಯೆಂದೆನ್ನಬಹುದು.

ಇರಾಣ–ಇಂಗ್ಲಂಡ್‌ಗಳ ಎಣ್ಣೆಯ ತಂಟೆಯ ದಿನಗಳನ್ನು ಈ ಸಂದರ್ಭದಲ್ಲಿ ಪರೀಕ್ಷಿಸಬಹುದು. ಇರಾಣದಲ್ಲಿ ಮೊದಲಿನ ಪರ್ಶಿಯ ದಲ್ಲಿರುವ ಎಣ್ಣೆಯ ಬಾವಿಗಳನ್ನು ಕಂಡುಹಿಡಿದು ಅವುಗಳೊಳಗಿಂದ ಕಚ್ಚಾ ಎಣ್ಣೆಯನ್ನು ತೆಗೆದು, ಅದನ್ನು ಪರಿಶುದ್ಧಗೊಳಿಸಿ, ಪ್ರಪಂಚದಲ್ಲೆಲ್ಲ ಮಾರ ಲಿಕ್ಕೆಂದು ಇಂಗ್ಲಂಡದ ಒಂದು ಎಣ್ಣೆಯ ಕಂಪನಿಯು ಈಗ ಎಷ್ಟೋ ವರ್ಷ ಗಳ ಹಿಂದೆ ಇರಾಣ ಸರಕಾರದಿಂದ ಒಪ್ಪಿಗೆಯನ್ನು ಪಡೆದು, ಆ ಬಗೆಯಾಗಿ ಕರಾರುಪತ್ರವನ್ನು ಮಾಡಿಕೊಂಡಿತ್ತು. ವರ್ಷವರ್ಷಕ್ಕೆ ಈ ಕಂಪನಿಯು ಉತ್ಕರ್ಷವನ್ನು ಹೊಂದುತ್ತ, ಇತ್ತ ಇರಾಣಕ್ಕೆ ಕೈತುಂಬ ಪರಿಹಾರವನ್ನು ಕೊಟ್ಟು ತನ್ನ ಲಾಭವನ್ನು ಹೆಚ್ಚಿಸಿಕೊಂಡಿತು. ಆದರೆ, ಇರಾಣದಲ್ಲಿ ಕಾಲ ಕ್ರಮದಲ್ಲಿ ನವಜಾಗ್ರತಿಯು ತಲೆದೋರಿ, ಯಾವುದೋ ಒಂದು ಕಂಪನಿಯು ತಮ್ಮ ದೇಶದ ಸಾಮಗ್ರಿಯ ಮೂಲಕ ಅದರ ದುರ್ಲಾಭವನ್ನು ಪಡೆಯು ತ್ತಿರುವದು ಎಂಬ ಅರಿವು ಉಂಟಾಗಿ, ಆ ಎಣ್ಣೆಯ ಉದ್ಯೋಗವನ್ನು ಸಂಪೂರ್ಣವಾಗಿ ರಾಷ್ಟ್ರೀಕರಿಸಬೇಕು ಎಂಬ ಆಂದೋಲನವು ಉದ್ಭವ- ವಾಯಿತು.

ಈ ಬಗೆಯ ಕಾರ್ಯ ಪರಿವರ್ತನೆಯ ಮೊದಲ ಸೂಚನೆಯು ಬ್ರಿಟಿ ಶರಿಗೆ ದೊರೆತ ಕೂಡಲೆ ಅವರು ಸಾಮೋಪಾಯದಿಂದ ತಮ್ಮ ನಡುವಿನ ಮತಭೇದಗಳನ್ನು ಸರಿಪಡಿಸಿಕೊಳ್ಳಬೇಕು ಎಂಬ ಪ್ರಯತ್ನಗಳನ್ನು ಮಾಡಿ ದರು. ಅದು ಅಸಾಧ್ಯವೆಂದು ತೋರಿದ ನಂತರ, ಇಂಗ್ಲಂಡ ದೇಶದ ಸರಕಾ ರವು ಇರಾಣ ಸರಕಾರದೊಡನೆ ಹೊಸ ಒಪ್ಪಂದವನ್ನು ಮಾಡಿಕೊಳ್ಳುವ ಯುಕ್ತಿಯನ್ನು ಮುಂದೆ ಮಾಡಿತು. ಆದರೆ ಇರಾಣದಲ್ಲಿ ಅಧಿಕಾರಾರೂಢ ರಾಗಿದ್ದ ಪಕ್ಷದ ಜನರು ಈ ಬಗೆಯಲ್ಲಿ ನಿಷ್ಠುರವಾದಂತೆ ತೋರಿದರೂ ನಿಶ್ಚಿತವಾದ ಅಭಿಪ್ರಾಯಗಳನ್ನು ತಳೆದಿದ್ದರು. ಅಂತೆಯೆ ಅವರು ರಾಷ್ಟ್ರೀ ಕರಣದ ತಮ್ಮ ಶಾಸನವನ್ನು ವಿಧಾನಸಭೆಯಲ್ಲಿ ಇಡುವ ಎತ್ತುಗಡೆಯನ್ನು ಮುಂದುವರಿಸಿದರು. ಕೂಡಲೆ ಇಂಗ್ಲಂಡಿನ ಪ್ರತಿನಿಧಿಗಳು ಈ ವಿಷಯ ವನ್ನು ಸಂಯುಕ್ತ ರಾಷ್ಟ್ರಸಂಘದ ಚರ್ಚಾಪೀಠದೆದುರು ಮಂಡಿಸಿದರು.

ಇದರ ಪ್ರತಿಯಾಗಿ ಇರಾಣದ ಮುತ್ಸದ್ದಿಗಳು ಈ ವಿಷಯವು ತಮ್ಮ ಒಳ ಆಡಳಿತಕ್ಕೆ ಸಂಬಂಧಪಟ್ಟಿರುವದರಿಂದ ಅದನ್ನು ಯೋಚಿಸಲಿಕ್ಕೆ ಸಂಯುಕ್ತ ರಾಷ್ಟ್ರಸಂಘಕ್ಕೆ ಅಧಿಕಾರವಿಲ್ಲ ಎಂದು ಸಾರಿದರು, ವಿಷಯವು ವಿಪರೀತವಾದ ರೂಪವನ್ನು ತಳೆಯಿತು. ರಾಷ್ಟ್ರೀಕರಣದ ಶಾಸನವು ಸ್ವೀಕೃತವಾಯಿತು. ಇಂಗ್ಲಂಡದವರು ಕೂಡಲೆ ಈ ತಮ್ಮ ದೂರನ್ನು ಅಂತರ್‌ರಾಷ್ಟ್ರೀಯ ನ್ಯಾಯ ಮಂದಿರಕ್ಕೆ ಒಯ್ದರು. ಅಲ್ಲಿಯೂ ಅದೇ ಬಗೆಯ ಅಧಿಕಾರವ್ಯಾಪ್ತಿಯ ವಿಷಯವಾಗಿ ವಾದ ವಿವಾದಗಳು ಜರುಗಿ, ನ್ಯಾಯಮಂದಿರವು ಈ ವಿಷಯ ದಲ್ಲಿ ನಿರ್ಣಾಯಕವಾದ ಮಾರ್ಗವನ್ನು ಸೂಚಿಸುವದು ದುಸ್ತರವಾದರೂ ಇಂಗ್ಲಂಡ ಮತ್ತು ಇರಾಣ ದೇಶಗಳು ತಮ್ಮ ಭಿನ್ನಾಭಿಪ್ರಾಯಗಳನ್ನು ಸರಿಪಡಿಸಿಕೊಂಡು ಅಂತರ್‌ರಾಷ್ಟ್ರೀಯ ಶಾಂತಿ–ಸೌಹಾರ್ದಗಳಿಗೆ ಭಂಗ ಬರದಂತಹ ಕಾರ್ಯಾಚರಣೆಯಲ್ಲಿ ಆಸಕ್ತರಾಗಬೇಕು ಎಂಬ ಆಶಯದ ಉಪದೇಶವನ್ನು ಮಾಡಿತು. ಆದರೆ ಅದರ ಪರಿಣಾಮವಾಗಿ ಹಗ್ಗ ಹರಿಯು ಲಿಲ್ಲ, ಕೋಲು ಮುರಿಯಲಿಲ್ಲ ಎಂಬ ಪರಿಸ್ಥಿತಿಯು ಮಾತ್ರ ತಲೆದೋರಿತು. ಇತ್ತ ಅದರ ದುಲಾರ್ಭವನ್ನು ಅನ್ಯರು ಪಡೆಯುವ ಸುಸಂಧಿಯು ಮಾತ್ರ ನಿರ್ಮಾಣವಾದುದು ಈ ಪ್ರಕರಣದ ಇನ್ನೊಂದು ವಿಚಿತ್ರವಾದ ಅಂಶವಾಗಿದೆ. ಯಾಕೆಂದರೆ ಇರಾಣವು ಔದ್ಯೋಗಿಕ ದೃಷ್ಟಿಯಿಂದ ಅಷ್ಟು ಮುಂದುವರಿದ ರಾಷ್ಟ್ರವೇನು ಅಲ್ಲ. ಅಲ್ಲಿ ಈಗ ಅಸ್ತಿತ್ವದಲ್ಲಿದ್ದ ಹಲವು ಉದ್ಯಮಗಳಿಗೆ, ವಿದೇಶೀಯ, ವಿತ್ತೀಯ ಮತ್ತು ತಾಂತ್ರಿಕ ಸಹಾಯವು ದೊರೆಯದೆ ಇದ್ದರೆ ಅಲ್ಲಿ ಇಷ್ಟು ಕೂಡ ಆರ್ಥಿಕ ಪ್ರಗತಿಯಾಗುವದು ಕಠಿಣವಾಗಿಯೆ ಉಳಿಯು ತ್ತಿತ್ತು. ಒಂದೆರಡು ದಶಕಗಳ ವರೆಗೆ ಎಣ್ಣೆಯ ಉದ್ಯಮಕ್ಕೆ ಆಧಾರವಾಗಿ ನಿಂತು ಬ್ರಿಟಿಶರು ಅದನ್ನು ಅಭಿವೃದ್ಧಿಗೊಳಿಸಿ, ಇರಾಣಕ್ಕೆ ಹೆಸರನ್ನು, ತಮಗೆ ಹಣವನ್ನು ಗಳಿಸಿದರು. ಆ ವಿಷಯದಲ್ಲಿ ಬ್ರಿಟಿಶ್ ಜನರು ತಮ್ಮ ಧನ ಮತ್ತು ಜನಸಹಾಯವನ್ನು ದೊಡ್ಡ ಪ್ರಮಾಣದಲ್ಲಿ ತೊಡಗಿಸಿದರು. ಅದರ ಮೂಲಕ ಅವರು ಕಿಂಚಿತ ರಾಜಕೀಯ ಪ್ರಭಾವ ಮತ್ತು ಅಧಿಕಾರಗಳನ್ನು ಪಡೆದಿರ ಬಹುದು. ಆದರೆ ಆ ಅಲ್ಪಾವಧಿಯಲ್ಲಿ ಇರಾಣದ ಆರ್ಥಿಕ ಅಭಿವೃದ್ಧಿ ಮತ್ತು ತಾಂತ್ರಿಕ ವಿಕಾಸಗಳೇನು ಜರುಗಲಿಲ್ಲ. ಇಡಿಯ ಉದ್ಯಮಕ್ಷೇತ್ರವು ಹೆರವರ ನೆರವಿಲ್ಲದೆ ನಡೆಯುವದು ಅಸಾಧ್ಯ ಎಂಬ ಪರಿಸ್ಥಿತಿಯೆ ಉಳಿದಿತ್ತು.

ಆದರೆ ಪ್ರಪಂಚದಲ್ಲಿ ಒಂದು ಬದಿಯಿಂದ ರಾಜಕೀಯ ಸ್ವಾತಂತ್ರ್ಯದ ಗಾಳಿಯೂ ಮತ್ತೊಂದು, ಬದಿಯಿಂದ ಆರ್ಥಿಕ ಸ್ವಾಯತ್ತತೆಯ ಗಾಳಿಯೂ ಬೀಸುತ್ತಿದ್ದಾಗ್ಗೆ ಮಾನವನು ಎಲ್ಲೆಡೆಯಲ್ಲಿಯೂ ತನ್ನ ಮೂಲ ಮತ್ತು ಅನೌಲ್ಯವಾದ ಅಧಿಕಾರಿಗಳ ವಿಷಯವಾಗಿ ಹೆಚ್ಚಿನ ಆಸಕ್ತಿಯನ್ನು ತೋರಿದನು. ಇದೇ ಸಂದರ್ಭದಲ್ಲಿ ಇರಾಣದ ಪ್ರಜೆಗಳು ಕೂಡ ತಮ್ಮ ಆರ್ಥಿಕ ಸ್ವಾವಲಂಬನದ ಚಿತ್ರಗಳನ್ನು ಕಲ್ಪಿಸಿಕೊಂಡರೆ ಆಶ್ಚರ್ಯವೇನಿತಹದು? ಆದರೆ ಅದಕ್ಕೆ ತಕ್ಕಂತೆ ದುಡ್ಡಿನ ಬಲ ಮತ್ತು ಯೋಜಕರ ಶ್ರಮಗಳು ಅಲ್ಲಿ ಅದೇ ವೇಗ ಮತ್ತು ಪ್ರಮಾಣದಲ್ಲಿ ಉದ್ಭವಿಸಲಿಲ್ಲ. ಅಂತೆಯೆ ಅವರು ತಮ್ಮ ಎಣ್ಣೆಯ ಉದ್ಯಮವನ್ನು ರಾಷ್ಟ್ರೀಕರಿಸುವ ಯೋಜನೆಯನ್ನು ಸ್ವೀಕರಿಸ-ಬೇಕೆಂಬ ನಿರ್ಧಾರವನ್ನು ಮಾಡಿದ್ದರೂ, ಅದರ ಮೇರೆಗೆ ಆ ಉದ್ಯಮವನ್ನು ಹೆರವರ ಬೆಂಬಲವಿಲ್ಲದೆ ಸಾಗಿಸುವದು ಎಂತು ಎಂಬ ವಿಚಾರವನ್ನೇನು ಮಾಡಿರಲಿಲ್ಲ. ಈ ಬಗೆಯ ಅನಿಶ್ಚಿತತೆಯ ಲಾಭವನ್ನು ಸ್ವಾಭಾವಿಕವಾಗಿಯೆ ಹೊರಗಿನ ಎರಡೂ ಪಕ್ಷದವರು, ಪಡೆಯಲಿಕ್ಕೆ ಹವಣಿಸಿದರು. ಪ್ರಕರಣವು ಜಟಿಲವಾದಂತೆ ಈ ಭೂಪತಿಗಳಿಗೆ ಹೆಚ್ಚಿನ ಸಂತೋಷವೇ ಆಗುವಂತೆ ಕಂಡಿತು. ಇಂತು ಅಂತರ‍್ರಾಷ್ಟ್ರೀಯ ಭಿನ್ನಾಭಿಪ್ರಾಯಗಳು ತಲೆದೋರಿದಾಗ, ಅವುಗಳನ್ನು ಪರಿಹರಿಸುವ ಪ್ರಯತ್ನವು ಗಂಭೀರವಾಗಿ ಸಂಯುಕ್ತ ರಾಷ್ಟ್ರ ಸಂಘದ ಪರವಾಗಿ ನಡೆಯುವ ಬದಲಾಗಿ, ಉರಿಯುತ್ತಿರುವ ಬೆಂಕಿಯಲ್ಲಿ ಇನ್ನಷ್ಟು ಇಂಧನವನ್ನು ಹಾಕುವ ಕಾರ್ಯದಲ್ಲಿ ಹಲವರು, ಅದರಲ್ಲಿಯೂ ವಿಶೇಷವಾಗಿ, ಆ ಲಾಭದ ಮೇಲೆ ಕಣ್ಣಿಟ್ಟವರು, ನಿರತರಾದರು.

ಇದು ಒಂದು ರೀತಿಯಿಂದ ಅಂತರ‍್ರಾಷ್ಟ್ರೀಯ ಸಂಘಟನೆಯ ವಿಕಾಸದಲ್ಲಿ ಒದಗಿದ ಆಪತ್ತು ಎಂದು ತೋರಿದರೂ, ಸಂಬಂಧಪಟ್ಟ ರಾಷ್ಟ್ರವಾದ ಇರಾಣದ ದೃಷ್ಟಿಯಿಂದ ಒಂದು ಅನುಕೂಲವಾಗಿಯೆ ಪರಿಣಮಿಸಿತು. ಮೊದಲು ಎಂದೋ ಒಂದು ದಿನ ಆರ್ಥಿಕ ದೌರ್ಬಲ್ಯದ ಮೂಲಕವಾಗಿಯೊ, ರಾಜಕೀಯ ಅಜ್ಞಾನದ ಕಾರಣವಾಗಿಯೊ, ಎಣ್ಣೆಯ ಉದ್ಯಮವನ್ನು ನಡೆ-ಯಿಸುವ ನಿಮಿತ್ತವಾಗಿ ಬ್ರಿಟಿಶರ ಕೈಯಲ್ಲಿ ತಮ್ಮ ಭವಿತವ್ಯವನ್ನು ಕೊಟ್ಟ ಇರಾಣೀ ಜನರು ರಾಜಕೀಯ ದೃಷ್ಟಿಯಿಂದ ಕೂಡ ತಮ್ಮ ವೈಶಿಷ್ಟ್ಯವನ್ನು ಸುಲಭವಾಗಿ ಕಾಯ್ದುಕೊಳ್ಳುವ ಬಾಧ್ಯತೆಯುಳ್ಳವರಾಗಿರಲಿಲ್ಲ. ಈಗ ರಾಷ್ಟ್ರೀ

ಕರಣದ ಸುಸಂಧಿಯಲ್ಲಿ ಅವರು ತಮ್ಮ ಅಧಿಕಾರವನ್ನು ಕಾಪಾಡಿಕೊಂಡು, ಆರ್ಥಿಕ ಸ್ವಾಮಿತ್ವವನ್ನು ಸ್ಥಾಪಿಸಿಕೊಂಡರಷ್ಟೆ ಅಲ್ಲದೆ, ರಾಜಕೀಯ ಪ್ರತಿಷ್ಠೆಯನ್ನು ಉಳಿಸಿಕೊಳ್ಳುವ ಆಕಾಂಕ್ಷೆಯುಳ್ಳವರಾಗಿದ್ದರು. ಈ ನಿಮಿತ್ತವಾಗಿ ಅವರು ತಮ್ಮ ಉದ್ಯಮವನ್ನು ಸಾಗಿಸಿಕೊಂಡು ಹೋಗಲಿಕ್ಕೆ ಅನ್ಯರ ಸಹಕಾರವನ್ನು ಕೋರಬೇಕಾದ ಪ್ರಸಂಗವು ಬಂದರೂ, ಅಲ್ಲಿ ತಾವು ತಮ್ಮ ಗೌರವವನ್ನಾದರೂ ಕಾಪಾಡಿಕೊಳ್ಳಬಹುದು ಎಂಬ ಉತ್ಸಾಹವುಳ್ಳವರಾಗಿದ್ದರು. ತಮಗೆ ಒಪ್ಪಿಗೆಯಾಗುವ ಕರಾರುಗಳ ಮೇರೆಗೆ ಔದ್ಯೋಗಿಕ ಒಪ್ಪಂದವನ್ನು ಮಾಡಿಕೊಂಡು ಬೇರೆ ರಾಷ್ಟ್ರಗಳ ಸಲಕರಣೆಗಳನ್ನು ಪಡೆಯಬಹುದು ಎಂದು ಆಲೋಚಿಸಿದರು. ಇಂತಹ ಸ್ವತಂತ್ರವೃತ್ತಿಯು ವೃದ್ಧಿ ಹೊಂದಬಾರದು ಎಂಬ ವಿಚಾರವಿದ್ದ ಕೆಲವು ಪ್ರಬುದ್ಧ ರಾಷ್ಟ್ರಗಳು ಇನ್ನೂವರೆಗೆ ಇರಾಣದ ಈ ಹೋರಾಟದಲ್ಲಿ ಅಕಲ್ಪಿಕ ಆತಂಕಗಳನ್ನು ತಂದೆಸೆಯುವ ಕಲ್ಯಾಣ ಕಾರ್ಯದಲ್ಲಿ ನಿರತ ಆಗಿದ್ದರೆ ಅದರಲ್ಲಿ ಅಚ್ಚರಿಯೇನಿಲ್ಲ !

ಪ್ರಪಂಚದ ರಾಷ್ಟ್ರಗಳಲ್ಲಿ ಸಂಯುಕ್ತ ರಾಷ್ಟ್ರಸಂಘದ ಆದರ್ಶವೆಂದು ಇಟ್ಟುಕೊಂಡ ಒಕ್ಕಟ್ಟಿನ ಬದಲಾಗಿ ಅನೈಕ್ಯವನ್ನು ಹುಟ್ಟಿಸಿ, ಅದಕ್ಕೆ ಬೃಹದಾಕಾರವುಂಟಾಗುವಂತೆ ಮಾಡಿದ ಇನ್ನೊಂದು ವಿಷಯವೆಂದರೆ ನಿಶ್ಶಸ್ತ್ರೀಕರಣ ಮತ್ತು ಅಣುಶಕ್ತಿಯ ಪ್ರಯೋಗ. ವಿಶ್ವಶಾಂತಿಗೆ ಭಂಗತರುವ ಯಾವುದೇ ಯುದ್ಧವಾಗಲಿ, ಕದನವಾಗಲಿ ಜರುಗಲಿಕ್ಕೆ ಪ್ರತಿಯೊಂದು ರಾಷ್ಟ್ರವು ಸಿದ್ಧವಾಗಿರಿಸಿಕೊಂಡ ಸೇನಾಬಲವೇ ಸಾಧನವಲ್ಲವೆ ? ಅಂತರ್ರಾಷ್ಟ್ರೀಯ ಅಶಾಂತಿಯ ಪ್ರಸಂಗವು ಪ್ರಾಪ್ತವಾಗಬಹುದು, ಆ ಸಮಯದಲ್ಲಿ ತಮ್ಮ ಪಕ್ಷವು ಪ್ರಬಲವಾಗಿರಬೇಕು ಎಂಬ ಮಹತ್ವಾಕಾಂಕ್ಷೆಯಿಂದ ಪ್ರತಿಯೊಂದು ರಾಷ್ಟ್ರವು ತನ್ನ ಸೈನ್ಯವನ್ನು ಸಜ್ಜುಗೊಳಿಸಿಕೊಂಡಿರುವದು ಆಧುನಿಕ ರಾಜನೀತಿಯ ಒಂದು ಅನಿವಾರ್ಯದ ಯೋಚನೆಯಾಗಿರುವದಷ್ಟೆ! ಆ ಜನರ ವಿಮಾನಪಡೆ, ಜಲಸೇನೆ ಮತ್ತು ಕಾಲ್ಬಲವು ಅಷ್ಟು ಪ್ರಮಾಣದಲ್ಲಿದ್ದರೆ ನಾವೇನು ಕಡಿಮೆ, ಅವರಿಗೆ ನಾವೇಕೆ ಹೆದರಿಕೊಂಡಿರುವಂತಹ ಸ್ಥಿತಿಯಲ್ಲಿರಬೇಕು ಎಂಬ ಸ್ಪರ್ಧೆಯಲ್ಲಿ ಎಲ್ಲ ರಾಷ್ಟ್ರಗಳು ಅಪರಿಮಿತವಾಗಿ ತಮ್ಮ ಸೈನ್ಯವನ್ನು ಬೆಳೆಯಿಸಿಕೊಳ್ಳುತ್ತವೆ. ಈ ಬಗೆಯ ಆಚರಣೆಯಿಂದ, ಸಂಯುಕ್ತ ರಾಷ್ಟ್ರಸಂಘದ ಆಗಮನದಿಂದಲೂ ಕಡಿಮೆಯಾಗದ ಇಂತಹ

ಪ್ರವೃತ್ತಿಯಿಂದ ಪರಸ್ಪರ ವೈಷಮ್ಯ ಮತ್ತು ಭೀತಿಗಳು ಇನ್ನಷ್ಟು ಹೆಚ್ಚುವನೇ ಹೊರತಾಗಿ ಅಲ್ಲಿ ಶಾಂತಿಯ ಲಕ್ಷಣಗಳು ತಲೆದೋರಲಿಕ್ಕಿಲ್ಲ. ಅಂತೆಯೆ ಸಂಘವು ಸ್ಥಾಪಿತವಾದಂದಿನಿಂದ ಇಂತಹ ಶಸ್ತ್ರಾಸ್ತ್ರಗಳ ಮೇಲಾಟವನ್ನು ಕಡಿಮೆ ಮಾಡಬೇಕು ಮತ್ತು ವಿಶ್ವಶಾಂತಿಗೆ ಚ್ಯುತಿಬರುವಂತಹ ಸಂದರ್ಭಕೆ ಯಾವುದಾದರೊಂದು ರಾಷ್ಟ್ರವು ಕಾರಣವಾದಾಗ, ಅದರ ವಿರುದ್ಧವಾಗಿ ಉಪಯೋಗಿಸಲಿಕ್ಕೆ ಸಕಲ ರಾಷ್ಟ್ರಗಳೂ ತಮ್ಮ ಸೇನಾಬಲದ ಕಾಣಿಕೆಯನ್ನು ಸಲ್ಲಿಸುವಂತಾಗಬೇಕು ಎಂಬ ಪ್ರಯತ್ನಗಳು ನಡೆದಿವೆ.

ಆ ಕಾರ್ಯವನ್ನು ಸುವ್ಯವಸ್ಥಿತವಾಗಿ ಮಾಡಬೇಕು ಎಂಬುದೇ ಒಂದು ರೀತಿಯಿಂದ ಅದರ ಪ್ರಗತಿಗೆ ಅಡ್ಡಿಯಾದಂತಾಗಿರುವದೊಂದು ಹೊಸ ಸುದ್ದಿ. ಸೈನ್ಯಬಲವನ್ನು ಪ್ರತಿಯೊಂದು ರಾಷ್ಟ್ರವು ಕಡಿಮೆಮಾಡಿಕೊಳ್ಳ ಬೇಕು, ಅದನ್ನು ಎಲ್ಲರೂ ಸೀಮಿತಗೊಳಿಸಬೇಕು ಎಂಬ ಬಗ್ಗೆ ಯಾವ ಮತಭೇದವೂ ಇರುವದಿಲ್ಲ. ಇದು ಕೂಡ ಸಂಯುಕ್ತರಾಷ್ಟ್ರಸಂಘದ ಆದರ್ಶದಂತೆಯೆ ಇರುತ್ತದೆ. ಆದರೆ ಅದರ ಪ್ರತ್ಯಕ್ಷ ಕಾರ್ಯಾಚರಣೆಯಲ್ಲಿ ಎಲ್ಲ ತೊಡಕುಗಳು ಅವತರಿಸುತ್ತವೆ. ಸೈನ್ಯಬಲವನ್ನು ಕಡಿಮೆ ಮಾಡಿ ಕೊಳ್ಳುವ ಮೊದಲು, ಪ್ರತಿಯೊಂದು ರಾಷ್ಟ್ರವು ತನ್ನ ಬಳಿಯಲ್ಲಿದ್ದ ಸೇನೆ, ಸಹಾಯಕಪಥಕ, ನಾಗರಿಕ ದಲಗಳೇ ಮೊದಲಾದ ವಿಭಾಗಗಳನ್ನೊಳಗೊಂಡ ಒಟ್ಟು ಸೈನ್ಯದ ಸಂಖ್ಯೆಯು ಎಷ್ಟಾಗಿರುವದು ಎಂಬುದನ್ನು ಬಹಿರಂಗವಾಗಿ ಸಾರಬೇಕು ಮತ್ತು ತೋರಬೇಕು; ಆಮೇಲೆ ಕಾಲಕಾಲಕ್ಕೆ ಆ ಸಂಖ್ಯೆಯ ಪ್ರಮಾಣವು ಹೇಗೆ ಬದಲಾಗಿರುವದು ಮತ್ತು ಏಕೆ ಎಂಬುದನ್ನು ತಿಳಿಸ-ಬೇಕು ಮತ್ತು ಹೊರಗಿನವರು ಯಾರಾದರೂ ನಿರೀಕ್ಷಿಸಬಯಸಿದರೆ ಅದಕ್ಕೆ ಅನುವು-ಅವಕಾಶಗಳನ್ನು ಕಲ್ಪಿಸಿಕೊಡಬೇಕು ಎಂಬ ಸೂಚನೆಗಳು ಮುಂದೆ ಮಾಡಲ್ಪಟ್ಟವು. ಇದು ಎಷ್ಟೇ ಸತ್ಯವಾದ ವಿಚಾರವೆಂದು ತೋರಿ ದರೂ ಅದರ ಪರಿಣಾಮ ಎಂತಹದಾಗಬಹುದು ಎಂಬುದನ್ನು ಊಹಿಸಲಿಕ್ಕೆ ಕೂಡ ಸಿದ್ಧರಾಗದ ಕೆಲವರು, ಆ ವಿಷಯದ ಚರ್ಚೆ ನಡೆದಾಗ ಅಸಂಬದ್ಧ ಪ್ರಲಾಪಗಳಿಂದ ಹೊತ್ತನ್ನು ಹಾಳುಮಾಡಿದರೆ, ಇನ್ನೂ ಕೆಲವರು ಮೂಲ ವಿಷಯವನ್ನೆ ಬದಿಗಿರಿಸಿ, ಒಮ್ಮೆಲೆ ಕ್ರಾಂತಿಕಾರಕ ಎನ್ನುವಂತಹ, ಬೇರೆ ನಿಷ್ಪ್ರಯೋಜಕವೆನಿಸುವಂತಹ ಯೋಜನೆಗಳನ್ನು ಸಭೆಯ ಮುಂದೆ ಇರಿಸ

ಲಿಕ್ಕೆ ತವಕಗೊಂಡರು. ಇದೆಲ್ಲದರ ಫಲವಾಗಿ ಇಂತಹ ಮೂಲಭೂತ ವಿಷಯವು ಇನ್ನೂ ಯಾವ ಬಗೆಯ ನಿಶ್ಚಿತ ದಿಸೆಯನ್ನು ತೋರದೆ, ಅಂತ-ರಿಕ್ಷದಲ್ಲಿಯೆ ಉಳಿಯಬೇಕಾಗಿದುದು ನಿಜವಾಗಿಯೂ ಖೇದಾಸ್ಪದವಾಗಿದೆ.

ಅದೇ ಬಗೆಯ ಅತಂತ್ರ ಸ್ಥಿತಿಯು ಸಂಯುಕ್ತದಲದ ವಿಷಯ ವಾಗಿಯೂ ಉಂಟಾಗಿದೆ. ಆಪತ್ಕಾಲದಲ್ಲಿ ಪ್ರತಿಯೊಂದು ರಾಷ್ಟ್ರವು ತನ್ನ ಸೇನಾಬಲದ ಒಂದಂಶವನ್ನು ಸಂಯುಕ್ತರಾಷ್ಟ್ರಸಂಘದ ಆಡಳಿತಕ್ಕೆ ಒಳ-ಪಡಿಸಿ ಅದರ ಮುಖಾಂತರ ಬಂದ ಪ್ರಸಂಗವನ್ನು ಒಂದುಗೂಡಿ ಎದುರಿಸ-ಬೇಕು ಎಂದು ಮಾಡಿಕೊಂಡ ಕನಸಿನ ಗೋಪುರಕ್ಕೆ ಮೂಲವಾಗಿ ತಳ ಹದಿಯೆ ದೊರೆಯದಂತಹ ಪರಿಸ್ಥಿತಿಯು ಪ್ರಾಪ್ತವಾಗಿದೆ. ಇತ್ತ ಅಣು-ಶಕ್ತಿಯ ಪ್ರಯೋಗದಲ್ಲಿಯೂ ಒಂದು ಬಗೆಯ ಹೇವದ, ಪ್ರತಿಸ್ಪರ್ಧೆಯ ಮತ್ತು ಏರಾಟಿಕೆಯ ಮಾತುಗಳೇ ಕಂಡುಬರುತ್ತಿವೆ. ಕಳೆದ ಎಷ್ಟೋ ಶತಮಾನಗಳಲ್ಲಿ ಮಾನವನು ಪಡುತ್ತಿರುವ ಕಷ್ಟ ಮತ್ತು ಗೈದ ಸಂಶೋಧನದ ಫಲವಾಗಿ ಇಂದು ಅಣುಶಕ್ತಿಯಂತಹ ಅದ್ಭುತ ಸಾಧನವೊಂದು ನಮ್ಮ ಸಹಾಯಕ್ಕೆ ಅಣಿಯಾಗಿದೆ. ಮನಸ್ಸು ಮಾಡಿದರೆ ಮನುಷ್ಯನು ಆ ಪ್ರಚಂಡ ಸಾಧನವನ್ನು ತನ್ನ ಜೀವನವು ಸರಳ, ಸುಂದರ ಮತ್ತು ಸಮೃದ್ಧ ಆಗುವಂತೆ ಸಹಜವಾಗಿಯೆ ಉಪಯೋಗಿಸಿಕೊಳ್ಳಬಹುದು. ಕಳೆದ ಒಂದೆರಡು ದಶಕಗಳಲ್ಲಿ ವಿಜ್ಞಾನಿಗಳು ಅಣುಶಕ್ತಿಯ ಸಹಾಯದಿಂದ ಹೇಗೆ ಕೃಷಿಯ ಉತ್ಪಾದನವನ್ನು ಹೆಚ್ಚಿಸಿಕೊಳ್ಳಬಹುದು. ಉದ್ಯಮಗಳ ಹುಟ್ಟುವಳಿಯನ್ನು ಬೆಳಿಸಿಯಿಕೊಳ್ಳಬಹುದು, ರೋಗರುಜಿನಗಳನ್ನು ಸದೆಬಡೆಯಬಹುದು, ಸುಲಭ ಮತ್ತು ಸುಮಗುವಾಗಿ ಹೊಸ ಹೊಸ ಯಂತ್ರಗಳನ್ನು ನಿರ್ಮಿಸಿ ಕೊಂಡು ನಡೆಯಿಸಬಹುದು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಆದರೆ ವಿಜ್ಞಾನವು ನೀಡುವದೊಂದು; ನಾವು ಪಡೆಯುವ ಪ್ರಯೋಜನ ಇನ್ನೊಂದು! ಮಾನವನು ತನ್ನ ಸಹೋದರನ ನಾಶಕ್ಕಾಗಿ, ತಾನು ನಿರ್ಮಿಸಿದ ಸಂಸ್ಕೃತಿ ಯನ್ನು ಹಾಳುಮಾಡುವದಕ್ಕಾಗಿ ಅಣುಶಕ್ತಿಯಂತಹ ಸಾಧನವನ್ನು ಉಪ-ಯೋಗಿಸಿಕೊಳ್ಳಲಿಕ್ಕೆ ಕಾತರನಾಗಿದ್ದಾನೆ. ಜೀವನವು ಸುಂದರ ಮತ್ತು ಆಕರ್ಷಕ ಆಗುವಂತೆ ಮಾಡಬಹುದಾದ ಈ ಶಕ್ತಿಯನ್ನು ಜೀವವನ್ನು ತೆಗೆದುಕೊಳ್ಳುವದಕ್ಕಾಗಿ ಅಣಿಮಾಡಿಕೊಳ್ಳುವ ಬಯಕೆಯಂತಹ ಭೀಷಣ

ವಾದ ಅಭಿಲಾಷೆಯು ಇನ್ನಾವುದು ? ಅಂತೆಯೆ ಈ ಬಗೆಯ ದುಷ್ಟ ಮತ್ತು ಹೇಯವಾದ ಇಚ್ಛೆಯನ್ನು ತಡೆಹಿಡಿಯುವ ಉದ್ದೇಶದಿಂದ ಅಣುಶಕ್ತಿಯ ಉಪಯೋಗದಲ್ಲಿಯೂ ನಿಯಂತ್ರಣಗಳನ್ನು ಕಲ್ಪಿಸಿಕೊಳ್ಳಬೇಕು ಎಂಬ ಯೋಜನೆಯು ಸಂಯುಕ್ತ ರಾಷ್ಟ್ರಸಂಘದ ಉದ್ದೇಶಗಳಲ್ಲಿ ಒಂದಾಗಿದೆ.

ಅದನ್ನು ಕಾರ್ಯಗತ ಮಾಡುವದೆಂತು ? ಯಾವುದೇ ಬಗೆಯ ಅಂತರ್ರಾಷ್ಟ್ರೀಯ ಕಾರ್ಯದಲ್ಲಿ ಪ್ರತಿಯೊಂದು ಸದಸ್ಯರಾಷ್ಟ್ರವು ಪೂರ್ಣ ಸಂತೋಷದಿಂದ ಮತ್ತು ಸ್ವಯಂಪ್ರೇರಣೆಯಿಂದ ಅದರ ಯಶಸ್ಸಿಗೆ ಸಹಕಾರ ವನ್ನು ನೀಡುವಂತೆ ಮುಂದೆ ಬಂದರೆ ಮಾತ್ರ ಅದು ಸಾಧ್ಯವಾಗಬಹುದು. ಮತ್ತು ಸಂಯುಕ್ತ ರಾಷ್ಟ್ರಸಂಘದ ಅಸ್ತಿತ್ವವೂ ಸಾರ್ಥಕವೆನಿಸಬಹುದು. ಅಂತೆಯೆ ಅಣುಶಕ್ತಿಯನ್ನು ನಿಯಂತ್ರಿಸುವ ಕಾರ್ಯಕ್ರಮದಲ್ಲಿಯೂ ಪ್ರತಿ ಯೊಂದು ರಾಷ್ಟ್ರವು ತನ್ನ ಬಳಿಯಲ್ಲಿದ್ದ ಅಣುಶಸ್ತ್ರಗಳು, ಜಲಜನಕಗಳು ಅಥವಾ ಅನ್ಯರೂಪದ ಯಾವುದೇ ಘನಬಲದ ಸಾಧನಗಳ ರೂಪ, ಪ್ರಮಾಣ ಮೊದಲಾದ ವಿವರಗಳನ್ನು ಸಂಯುಕ್ತ ರಾಷ್ಟ್ರಸಂಘಕ್ಕೆ ಒಪ್ಪಿಸಬೇಕು ಮತ್ತು ಅದರ ಸ್ವಾಮಿತ್ವದ ಹಾಗೂ ಚಾಲನೆಯ ಅಧಿಕಾರವನ್ನು ಸಂಯುಕ್ತ ಸಂಘದ ವಶಕ್ಕೆ ಕೊಡಬೇಕು ಎಂಬ ಕೆಲವು ವಿಷಯಗಳು ಪ್ರಸ್ತಾಪಿಸ ಲ್ಪಟ್ಟವು. ಅಲ್ಲಿಯೂ ಸಹಿತ ಪರಸ್ಪರ ಭಯ-ಸಂಶಯ-ದ್ವೇಷಗಳಿಗೆ ತುತ್ತಾಗಿ ಅಂತಹ ಸ್ವಯಂಪ್ರೇರಿತ ಕಾರ್ಯಕ್ಕೆ ಯಾವ ರಾಷ್ಟ್ರವೂ ಸಿದ್ಧವಾಗ ಲೊಲ್ಲದು. ಅದರ ಬದಲಾಗಿ ನಮ್ಮ ಬಳಿಯಲ್ಲಿ ಇಂತಹ ಮೋಹನಾಸ್ತ್ರವಿದೆ; ನಮ್ಮ ಸ್ನೇಹಿತರ ಹತ್ತರ ಅಂತಹ ಪಾಶುಪತಾಸ್ತ್ರವಿದೆ, ಈ ಬಗೆಯ ಪರ್ಜನ್ಯಾ ಸ್ತ್ರವಿದೆ, ಆ ಬಗೆಯ ಅಗ್ನ್ಯಾಸ್ತ್ರವಿದೆ ಎಂಬ ಹೆಮ್ಮೆಯನ್ನು ಕೊಚ್ಚುವದರಲ್ಲಿ ಈರ್ಷೆಯು ಕಂಡುಬರುವದು, ಸಂಯುಕ್ತ ರಾಷ್ಟ್ರಸಂಘದ ವಿಷಯವಾಗಿ ಇರುವ ಇವರ ಗೌರವ ಮತ್ತು ಆತ್ಮೀಯತೆಗಳು ಎಷ್ಟು ಎಂಬುದನ್ನು ಇದು ತೋರಿಸುತ್ತದೆ.

ಆರ್ಥಿಕ, ಸಾಮಾಜಿಕ, ರಾಜಕೀಯ, ಯುದ್ಧವಿಷಯಕ ಮೊದಲಾದ ವಿವಿಧವಿಷಯಗಳಲ್ಲಿಯೂ ತಾವು ಒಪ್ಪಿಕೊಂಡ ಉದ್ದೇಶಗಳನ್ನು ಸಾಧಿಸುವ ಕಾರ್ಯಕ್ಕೆ ತೊಡಗಿದಾಗ ಅವುಗಳ ಬಗ್ಗೆ ಆಸ್ಥೆ ಮತ್ತು ಮರ್ಯಾದೆಗಳು ಶಿಥಿಲವಾಗುತ್ತಿರುವದು ಪ್ರತಿಯೊಂದು ಮಾನವನಿರ್ಮಿತ ಸಂಘಟನೆಯ

ಪ್ರಕೃತಿಗುಣವೆ ಆಗಿರಬಹುದು. ಆದರೆ ಮಾನವನು ಅಂತಹ ವಿಚಾರ ದರಿದ್ರನೆ? ಅಷ್ಟು ಕಾರ್ಯಕ್ಷುದ್ರನೆ? ಒಂದು ಉದಾತ್ತವಾದ ಆದರ್ಶವು ತನ್ನ ಸಾಧನಗಳ ಮೂಲಕ ಸಿದ್ಧಿಸದಂತಹ ಪ್ರಸಂಗಬಂದರೆ ಆತನು ಅಸಾಧ್ಯವನ್ನು ತನ್ನಉದ್ದೇಶಕ್ಕೆ ಸರಿಯಾಗಿ ಮಾರ್ಪಡಿಸಿಕೊಳ್ಳುವನು, ಇಂದುಪ್ರಪಂಚದ ರಾಷ್ಟ್ರಗಳಲ್ಲಿ ಗುರಿಯ ಬಗ್ಗೆ ಯಾವ ಮತಭೇದವೂ ಇರುವದಿಲ್ಲ; ಅದನ್ನು ನಿರುಕಿಸುವ ದೃಷ್ಟಿಯಲ್ಲಿ ಮತ್ತು ಪಡೆಯುವ ದಾರಿಯಲ್ಲಿ ವ್ಯತ್ಯಾಸವದೆ. ಅದಕ್ಕೆ ಕಾರಣವಾಗಿ ಅನೇಕ ವಿಷಯಗಳು ಇರಬಹುದು. ಆದರೆ ಕಣ್ಣನೆದುರಿಗೆ ಇಟ್ಟುಕೊಂಡ ಭವ್ಯವಾದ, ತೇಜಃಪೂರ್ಣವಾದ ಒಂದು ಧ್ಯೇಯವನ್ನು ನಾವು ಅಷ್ಟೆ ಪ್ರಾಮಾಣಿಕವಾದ ಮತ್ತು ವಿಶ್ವರೂಪವೆನಿಸಿರುವ ಯೋಜನೆಗಳಿಂದ ಪಡೆಯಬೇಕಾಗಿದೆ. ಅದಕ್ಕೆ ತಕ್ಕ ಉಪಾಯ ಮತ್ತು ಕಾರ್ಯಕ್ರಮಗಳನ್ನು ಹುಡುಕಿತೆಗೆಯುವಂತೆ ಮಾನವನ ಪ್ರಯತ್ನವು ಯಾವಾಗಲೂ ನಡೆದಿರುತ್ತದೆ. ಅದರ ಪ್ರಯೋಗವು ಇನ್ನೂ ನಡೆಯಬೇಕಾಗಿದೆ.

# ೪. ಪ್ರತಿಭಟನೆ

ಸಂಯುಕ್ತ ರಾಷ್ಟ್ರಸಂಘದ ಸಂಘಟಿತ ಅಭಿಪ್ರಾಯವನ್ನು ಮೀರಿ ನಡೆಯುವದು ಅದರ ಅಪಮಾನವೆನಿಸಿದರೆ, ಅಧಿಲೇಖನದಲ್ಲಿ ಸ್ವೀಕರಿಸಿದ ಮೇರೆಗೆ ವಿಶ್ವಶಾಂತಿಯ ಕೆಲವು ಮಹತ್ವದ ಉಪಾಯಗಳನ್ನು ಸಂಯುಕ್ತ ರಾಷ್ಟ್ರಸಂಘವೆ ಕೈಕೊಳ್ಳದಿರುವದು ಅದರ ಶಕ್ತಿಯ ಕೊರತೆಯನ್ನು ಇಲ್ಲವೆ ಸಂಘಟನೆಯ ನ್ಯೂನತೆಯನ್ನು ತೋರಿಸುತ್ತದೆ. ವೈಯಕ್ತಿಕವಾಗಿ ಸಂಘದ ಸದಸ್ಯರನ್ನು ಕಂಡು ಕೇಳಿದಾಗ್ಗೆ ಒಂದು ಸಾಮ್ರಾಜ್ಯವಾದದ ಪ್ರಶ್ನೆಯೆ ಇರಲಿ, ಉಪನಿವೇಶನವಾದದ ಭವಿತವ್ಯವೆ ಆಗಲಿ, ವಿಶೇಷಾಧಿಕಾರದ ಸಮಸ್ಯೆಯೆ ಇರಲಿ, ಅವರು ತಮ್ಮ ವಿಚಾರಗಳನ್ನು ಸ್ಪಷ್ಟವಾಗಿಯೂ, ನಿಶ್ಚಿತವಾಗಿಯೂ ಹೇಳಬಹುದು; ಆದರೆ ಅದೇ ವಿಷಯವಾಗಿ ಸಂಯುಕ್ತ ರಾಷ್ಟ್ರ ಸಂಘದ ಪರವಾಗಿ ಕಾರ್ಯವನ್ನು ಕೈಕೊಳ್ಳಬೇಕು, ಎಂಬ ಸೂಚನೆಯು ಬಂದಾಗ್ಗೆ ಪ್ರತ್ಯಕ್ಷವಾಗಿ ವಿರೋಧವು ಕಂಡು ಬರದಿದ್ದರೂ ಎಷ್ಟೋ ಪ್ರಸಂಗಗಳಲ್ಲಿ ಪರೋಕ್ಷವಾಗಿ ತೊಡಕುಗಳನ್ನು ಎದುರಿಸಬೇಕಾದ ಮತ್ತು ಆ ಕಾರ್ಯವು ಜರುಗದಂತಹ ಪರಿಸ್ಥಿತಿಯು ನಿರ್ಮಾಣವಾಗುತ್ತದೆ. ಇದಕ್ಕೆ ಕಾರಣ ಪ್ರಪಂಚದ ಕೆಲವು ರಾಷ್ಟ್ರಗಳಲ್ಲಿ ಇನ್ನೂ ಮನಸ್ಸಿನಂತೆ ಮಾತನಾಡುವ ಧೈರ್ಯವಾಗಲಿ, ಮಾತಿನಂತೆ ಕೃತಿಗೆ ಇಳಿಯುವ ವಿವೇಕವಾಗಲಿ ಇಲ್ಲ ದಿರುವದೇಆಗಿದೆ.

ಇಂತಹ ಪ್ರಸಂಗಗಳಲ್ಲಿ ಯಾರಾದರೂ ಸಾತ್ವಿಕ ಕೋಪವನ್ನು ವ್ಯಕ್ತಗೊಳಿಸಿ, ಕೇವಲ ಸ್ವಾರ್ಥಸಾಧನೆಯ ಇಲ್ಲವೆ ಸ್ವಜನಾರ್ಥಯೋಜನೆಯ ದೃಷ್ಟಿಯಿಂದ ಮುಚ್ಚುಮರೆಯನ್ನು ಮಾಡುತ್ತಿರುವ ಅಥವಾ ಮುಂದೆನೂಕುವ ಮತ್ತು ಮೋಸಗೊಳಿಸುವ ಕಾರ್ಯದಲ್ಲಿ ತೊಡಗಿದವರನ್ನು ಬಯಲಿಗೆಳೆದು ಆ ಸೂಚನೆಯ ಸತ್ಯತೆಯನ್ನು ಎತ್ತಿ ತೋರಿಸಬೇಕಾಗುತ್ತದೆ. ಹೀಗೆ ಮಾಡಲಿಕ್ಕೆ ಮನೋಧೈರ್ಯದಷ್ಟೆ ನಿಸ್ವಾರ್ಥವೃತ್ತಿಯ ಅವಶ್ಯಕತೆಯೂ ಇರುತ್ತದೆ. ಕೇವಲ ಒಂದು ತತ್ವದ ವಿಷಯವಾಗಿ ಎಷ್ಟೇ ಬಲವಾದ ವಿಶ್ವಾಸ ವಿದ್ದರೂ ಅದನ್ನು ಇತರರ ಮೇಲೆ ಬಿಂಬಿಸಿ, ಸಂಯುಕ್ತ ರಾಷ್ಟ್ರಸಂಘದಂತಹ ಮಹತ್ತರವಾದ ಸಂಸ್ಥೆಯಲ್ಲಿ ಅದಕ್ಕೆ ಮನ್ನಣೆ ದೊರೆಯುವಂತೆ ಮಾಡ

ಬೇಕಾದರೆ ಸಾಕಷ್ಟು ಸಾಮರ್ಥ್ಯವೂ ಬೇಕಾಗುತ್ತದೆ: ತಕ್ಕಮಟ್ಟಿಗೆ ಆ ಕ್ಷೇತ್ರಗಳಲ್ಲಿ ಗೌರವವೂ ಇರಬೇಕಾಗುತ್ತದೆ. ಮೊದಲು ಆ ಮಾತಿನ ಸತ್ಯತೆಯನ್ನು ಕಂಡು, ಅದನ್ನು ಸ್ವೀಕರಿಸುವಂತೆ ಮನವಲಿಸುವದು ಸಾಮಾನ್ಯವಾದ ಕಾರ್ಯವಲ್ಲ. ಸಾಮಾನ್ಯಸಭೆಯಂತಹ ಪ್ರಪಂಚದ ಅತ್ಯುಚ್ಚ ವರ್ಗದಲ್ಲಿಯೆ ಆಗಲಿ, ಕ್ಷೇಮಮಂಡಲದಂತಹ ಬಲಾಢ್ಯರ ಮಧ್ಯದಲ್ಲಿಯೆ ಆಗಲಿ, ವಿಶ್ವಸಂಸ್ಥೆಯ ಮುಖಾಂತರ ಜರುಗಬೇಕಾದ ಒಂದು ಕೆಲಸವು ಕಾರಣಾಂತರದಿಂದ ಹಿಂದೆ ಬೀಳುತ್ತಿದ್ದರೆ, ಅದನ್ನು ಶೀಘ್ರವಾಗಿಯೆ ವಿಶ್ವಶಾಂತಿಯ ಸಲುವಾಗಿ, ಪ್ರಪಂಚದ ಬಹುಜನ ಪ್ರಜೆಗಳ ಹಿತದ ದೃಷ್ಟಿಯಿಂದ ಮತ್ತು ಸಂಯುಕ್ತರಾಷ್ಟ್ರ ಸಂಘದ ಕಾರ್ಯಕ್ಷಮತೆ ಹಾಗೂ ಸಮನ್ವಯಧೋರಣವನ್ನು ದೃಢಗೊಳಿಸುವ ದೃಷ್ಟಿಯಿಂದ ಆವಶ್ಯಕವಾಗಿ ಕೈಕೊಳ್ಳಬೇಕು ಎಂದು ಹೇಳಬೇಕಾದರೆ, ಅಂತಹಪ್ರತಿಭಟನೆಗೆ ತಕ್ಕ ಉನ್ನತ ಪರಂಪರೆಗಳು ಮತ್ತು ಪ್ರಬಲ ಆತ್ಮವಿಶ್ವಾಸವಿದ್ದ ರಾಷ್ಟ್ರಗಳಿಗೆ ಮಾತ್ರ ಸಾಧ್ಯ ಎಂದು ಹೇಳಬಹುದು.

ಕೆಲವರು ಭಾವಿಸಿದಂತೆ ಇದು ಕೇವಲ ಒಂದು ತತ್ವದ ಹಟವೂ ಅಲ್ಲ, ಅನ್ಯರ ಕಾರಣವನ್ನು ಮುಂದೆ ಮಾಡಿ, ತಮ್ಮ ಪ್ರತಿಷ್ಠೆಯನ್ನು ಬೆಳೆಯಿಸಿಕೊಳ್ಳುವ ಪ್ರಯತ್ನವೂ ಅಲ್ಲ. ಯಾವ ಉದಾತ್ತವಾದ ದೃಷ್ಟಿಯಿಂದ ಈ ವಿಶ್ವಸಂಸ್ಥೆಯನ್ನು ಕಟ್ಟಿಕೊಂಡಿತೋ, ಆ ಉದ್ದೇಶವನ್ನು ಸಾಧಿಸುವದಕ್ಕಾಗಿ ಮಿಕ್ಕ ಸದಸ್ಯರಿಗೆ ಅದರಲ್ಲಿ ನಂಬಿಗೆಯುಂಟಾಗುವಂತೆ ವಿಧಾಯಕವಾದ ವಿರೋಧವನ್ನು ಮಂಡಿಸಿ, ಅದರ ಆದರ್ಶವನ್ನು ಸಾಧಿಸುವದೇ ಆಗಿದೆ. ಪ್ರಪಂಚ ಸಂಸ್ಥೆಯ ಸದಸ್ಯರಲ್ಲಿ ಕೆಲವರು ಸ್ವೀಕೃತವಾದ ಸಂಯುಕ್ತ ರಾಷ್ಟ್ರಸಂಘದ ಅಧಿಲೇಖನದ ಕೆಲವು ನಿಯಮಗಳನ್ನೇ ಆಧಾರವನ್ನಾಗಿರಿಸಿಕೊಂಡು, ಅವುಗಳಿಗೆ ಶಾಬ್ದಿಕ ಅರ್ಥವನ್ನು ಕಲ್ಪಿಸಿ, ತಾವು ಕೂಡ ಸ್ಥೂಲವಾಗಿ ಸಂಸ್ಥೆಯ ನಿಯಮಗಳಂತೆಯೆ, ಧ್ಯೇಯವನ್ನು ಸಾಧಿಸಲಿಕ್ಕೆ ಪ್ರಯತ್ನಿಸುತ್ತಿದ್ದೇವೆ, ಎಂಬ ನಿರರ್ಥಕವಾದವನ್ನು ಹೂಡಿದುದು ಆ ಸಂಸ್ಥೆಯ ಚರಿತ್ರೆಯಲ್ಲಿ ಅನೇಕ ಬಾರಿ ಕಂಡು ಬಂದಿದೆ. ಆದರೆ ಕೃತಕವಾದ ನಿಯಮಪಾಲನೆಯು ಒಂದು ದೃಷ್ಟಿಯಿಂದ ಸರಿಯಾದುದು ಎಂದು ಕಂಡು ಬಂದರೂ ಅದು ಕೇವಲ ಸಂಯುಕ್ತ ರಾಷ್ಟ್ರ ಸಂಘದ ಉದ್ದೇಶಗಳ ಉಲ್ಲಂಘನೆಯನ್ನೆ ಮಾಡಿದುದು ಎಂಬ ಮಾತು ಸ್ಪಷ್ಟವಾಗದಿರದು.

ಅಂತಹ ಸನ್ನಿವೇಶಗಳು ವಿಶ್ವಶಾಂತಿಯನ್ನು ಸ್ಥಾಪಿಸಲಿಕ್ಕೆ ಪೂರಕವಾಗಿರದೆ ನಿಜವಾಗಿಯೂ ಮಾರಕವಾಗಿರುವವು. ಮತ್ತು ಸಂಸ್ಥೆಯ ಗುರಿಯ ವಿರೋಧ ದಲ್ಲಿ ನಡೆದ ಕೆಲವು ಈ ಬಗೆಯ ರಾಷ್ಟ್ರಗಳು ವಿಘಾತಕ ಕಾರ್ಯವನ್ನೆ ಮಾಡುತ್ತಿರುವವು ಎಂಬುದು ವಿಷಾದಕರ ವಿಷಯವಾಗಿದೆ.

ಸಂಯುಕ್ತ ರಾಷ್ಟ್ರಸಂಘದಲ್ಲಿ ಅಂಗರಚನೆಯ ದೋಷದಿಂದಾ ಗಲಿ, ಬೇರೆ ಯಾವುದೋ ಮೂಲಭೂತ ಸಂಕೋಚದಿಂದಾಗಲಿ, ವಿಶ್ವ ಸಂಸ್ಥೆಯ ಧ್ಯೇಯಕ್ಕೆ ಒಳಪಟ್ಟಿರುವ ದಾವದರೂ ಕೆಲವೊಂದು ವಿಷಯನ್ನು ಸಾಕಷ್ಟು ಸ್ವಾತಂತ್ರ್ಯ ಪೂರ್ಣವಾತಾವರಣದಲ್ಲಿ ಚರ್ಚಿಸುವದಿಲ್ಲ, ಮತ್ತು ಪರಿಣಾಮಕರ ಆಗುವಂತೆ ಕಾರ್ಯಗತ ಮಾಡುವದಿಲ್ಲ; ಎಂಬ ದೂರುಗಳು ಕೆಲವು ರಾಷ್ಟ್ರಗಳಿಂದ ಕೇಳಿಬರುತ್ತವೆ. ಈ ಪ್ರಸಂಗಗಳಲ್ಲಿ ಕೈಕಟ್ಟಿಕೊಂಡು ಸುಮ್ಮನೆ ಕುಳಿತು, ಅದೊಂದು ಅನಿವಾರ್ಯವಾದ ಆಪತ್ತು ಎಂದು ಭಾವಿಸಿ ದರೆ, ಮಾಡಬೇಕಾದ ಒಂದು ಒಳ್ಳೆಯ ಕೆಲಸವು ಆಗುವದಿಲ್ಲವಷ್ಟೇ ಅಲ್ಲ. ಪ್ರಪಂಚ ಸಂಸ್ಥೆಯ ಸತ್ವವನ್ನೇ ಹೀರಿದಂತೆ ಆಗುತ್ತದೆ. ವಿಶ್ವದ ಆತ್ಮಕ್ಕೆ ಅಪಮಾನಮಾಡಿದಂತೆ ಆಗುತ್ತದೆ. ಒಮ್ಮೆ ಉನ್ನತವಾದ ಒಂದು ಧ್ಯೇಯ ದಿಂದ ಇಂತಹ ಸಂಘಟನೆಯನ್ನು ಮಾಡಿಕೊಂಡ ಮೇಲೆ, ಕೇವಲ ಕ್ಷುಲ್ಲಕ ಕಾರಣಗಳಿಗಾಗಿ ಮತ್ತು ಸ್ವಾರ್ಥದ ಸಂಕುಚಿತವಾದ ದೃಷ್ಟಿಯಿಂದ ಅದರ ಪ್ರಗತಿಗೆ ಅಡ್ಡಿಯಾಗುವದೆಂದರೆ ವಿಶ್ವಸಂಸ್ಥೆಯ ಪರಿಹಾಸ ಮಾಡಿ ದಂತೆಯೆ, ಎಂಬ ಮಾತಿನಲ್ಲಿ ಸಾಕಷ್ಟು ಸತ್ಯತೆಯಿದೆ. ಅಂತಹ ಪ್ರಸಂಗ ಗಳಲ್ಲಿ ತಮ್ಮ ಬಲವು ಕಡಿಮೆಯಾಗಿದ್ದರೂ, ತಮಗೆ ಆ ಪರಿಸ್ಥಿತಿಯಲ್ಲಿ ಸಾಕಷ್ಟು ಪ್ರಭಾವಿಯಾದ ಸ್ಥಾನವು ಇಲ್ಲದಿದ್ದರೂ, ಆ ಆದರ್ಶವನ್ನು ಇಡಿಯ ಸಂಸ್ಥೆಯ ಸ್ಮರಣೆಗೆ ಬರುವಂತೆ ಮಾಡುವ ರಾಷ್ಟ್ರವು ನಿಜವಾಗಿಯೂ ಅಭಿವಂದನೀಯವಾದುದು; ಅನುಕರಣೀಯವಾದುದು.

ಯಾಕಂದರೆ ಅದು ಸಾತ್ವಿಕವಾದ ಪ್ರತಿಭಟನೆಯಿರುವದು; ರಚನಾತ್ಮಕ ವಾದ ವಿರೋಧವೆನಿಸುವದು, ಮತ್ತು ನಿಃಸ್ವಾರ್ಥವಾದ ಖಂಡನೆಯೆಂದು ಸ್ಪಷ್ಟವಾಗುವದು. ವಿಶ್ವಸಂಸ್ಥೆಯ ಗುರಿಯನ್ನು ಪಡೆಯಲಿಕ್ಕೆ ಯಾವ ರೀತಿಯ ತೊಡರು-ತೊಂದರೆಗಳು ಉದ್ಭವಿಸಬಹುದು ಎಂಬುದನ್ನು ಆ

ಸಂಸ್ಥೆಯ ಸಂವಿಧಾನವು ಏರ್ಪಡುತ್ತಿದ್ದ ಕಾಲದಲ್ಲಿಯೆ ಗೋಚರವಾಗಿದ್ದವು ಎಂಬುದೊಂದು, ಆಶ್ಚರ್ಯಚಕಿತವಾದ ವಿಷಯವೆ ಆಗಿದೆ. ಎರಡನೆಯ ಮಹಾಯುದ್ಧವು ಇನ್ನು ಮುಗಿಯುವದಕ್ಕಿಂತ ಮುಂಚಿತವಾಗಿಯೆ ಸಂಯುಕ್ತ ರಾಷ್ಟ್ರ ಸಂಘವನ್ನು ಸ್ಥಾಪಿಸುವ ಸೂಚನೆ ಮತ್ತು ಪ್ರಯತ್ನಗಳು ಕಂಡು ಬಂದರೂ, ಆ ಸಂಸ್ಥೆಯಘಟನೆಯು ನಿಶ್ಚಿತವಾಗುತ್ತ ನಡೆದಂತೆ ಪ್ರಪಂಚದ ಹಿರಿಯ ರಾಷ್ಟ್ರಗಳಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿದುದು ಸ್ಪಷ್ಟವಾಗಿ ತಿಳಿದು ಬಂದಿತು. ಹಗೆಗಳನ್ನು ಸದೆಬಡೆದು, ಯುದ್ಧವನ್ನು ಗೆದ್ದು, ರಾಜಕೀಯ ಶಾಂತಿಯನ್ನು ಸ್ಥಾಪಿಸುವ ವಿಷಯದಲ್ಲಿ ಯಾವ ಬಗೆಯ ಆಕಾಂಕ್ಷೆ ಮತ್ತು ಐಕ್ಯತೆಗಳು ಮೊದಲು ಪ್ರಬಲರಾಷ್ಟ್ರಗಳಲ್ಲಿ ಕಂಡು ಬಂದವೊ ಅವು ಯುದ್ಧವು ಕೊನೆಗೆಂಡು, ಶಾಂತಿಯ ಪ್ರತ್ಯಕ್ಷ ಕಾರ್ಯವು ಈ ಸಂಸ್ಥೆಯ ರೂಪದಲ್ಲಿ ಪರಿಣಮಿಸಿದಾಗ್ಗೆ ಉಳಿಯಲಿಲ್ಲ. ಎಂಬುದು ಶೋಚನೀಯವಾದ ಸಂಗತಿಯಾಗಿದೆ. ಕ್ರಮಕ್ರಮವಾಗಿ ಸಂಯುಕ್ತ ರಾಷ್ಟ್ರ ಸಂಘದ ಅಂಗರಚನೆಯ ಚರ್ಚೆಯು ಮುಂದುವರಿದಂತೆ ಬಲಾಢ್ಯರಾಷ್ಟ್ರಗಳು ಮತ್ತೆ ತಮ್ಮ ತಮ್ಮ ಸ್ಥಾನವನ್ನು ಬಲಪಡಿಸಿಕೊಳ್ಳಲಿಕ್ಕೆ ತಮ್ಮ ತಮ್ಮ ಪ್ರತಿಷ್ಠೆಯನ್ನು ಬೆಳೆಯಿಸಿಕೊಳ್ಳಲಿಕ್ಕೆ ಆತುರವಾಗಿದ್ದುದು ಕಂಡು ಬಂದಿತೇ ಹೊರತು, ವಿಶ್ವಶಾಂತಿಯ ಬಗೆಯಲ್ಲಿ ಆ ರೀತಿಯ ಉತ್ಕಂಠೆಯು ಉಳಿದು ಬೆಳೆಯಲಿಲ್ಲ.

ಈ ಬಗೆಯ ಭಾವನೆಯ ಮತ್ತು ಪ್ರಯತ್ನದ ಪ್ರತಿಬಿಂಬವು ಸಂಯುಕ್ತ ರಾಷ್ಟ್ರಸಂಘದ ಸಂವಿಧಾನವನ್ನು ಚರ್ಚಿಸುವಾಗ್ಗೆ ಸ್ಪಷ್ಟವಾಗಿ ಗೋಚರವಾಯಿತು. ಸಂಯುಕ್ತ ರಾಷ್ಟ್ರಸಂಘದ ಸಾಮಾನ್ಯಸಭೆಯ ನಿಬಂಧನೆಗಳನ್ನಾಗಲಿ, ಇಡಿಯ ವಿಶ್ವಸಂಸ್ಥೆಯ ಆದರ್ಶ ಮತ್ತು ಉದ್ದೇಶಗಳನ್ನಾಗಲಿ ರೂಪಿಸುವಾಗ್ಗೆ ಏಕಮತವು ಸಾರ್ವತ್ರಿಕವಾಗಿ ಕಂಡು ಬಂದರೂ, ಆ ವಿಚಾರಗಳ ಪ್ರತ್ಯಕ್ಷ ಕಾರ್ಯಾಚರಣೆಯ ಹೊಣೆಯನ್ನು ಹೊತ್ತುಕೊಳ್ಳಬೇಕಾದ ಕ್ಷೇಮಮಂಡಲದ ಅಂಗರಚನೆ ಮತ್ತು ಅಧಿಕಾರಗಳನ್ನು ನಿರ್ಣಯಿಸುವಾಗ್ಗೆ ಪ್ರಪಂಚದ ಪ್ರಮುಖರಾಷ್ಟ್ರಗಳಲ್ಲಿ ಮತಭೇದವು ತಲೆಯೆತ್ತಿತು. ಇದಕ್ಕೆ ಮೂಲವಾದ ಕಾರಣ ತತ್ವದ ಹಟವಾಗಿರದೆ ಕೇವಲ ಸ್ವಪ್ರತಿಷ್ಠೆಯ

ಸಂರಕ್ಷಣೆ ಮತ್ತು ಸಂವರ್ಧನೆಯೂ ಸ್ವಾರ್ಥವೇ ಆಗಿದ್ದಿತು. ಎಂದು ಧಾರಾಳವಾಗಿ ಹೇಳಬಹುದು. ಯುದ್ಧವನ್ನು ಗೆಲ್ಲುವ ವಿಷಯದಲ್ಲಿ ಪರಸ್ಪರ ವಿರುದ್ಧವಾದ ತತ್ವಪ್ರಣಾಲಿಯುಳ್ಳ ಕೆಲವು ರಾಷ್ಟ್ರಗಳು ಒಂದೆಡೆ ಸೇರುವಾಗ್ಗೆ ಯುದ್ಧವಿಜಯದ ಉದ್ದೇಶಗಳನ್ನು ಸಾರಲಿಕ್ಕೆ ಯಾರೂ ಸಿದ್ಧರಾಗಿರಲಿಲ್ಲ. ಆದರೆ ಯುದ್ಧವು ಮುಕ್ತಾಯಗೊಂಡು, ಶಾಂತಿಸಂಸ್ಥೆಯ ಪ್ರತಿಷ್ಠಾಪನೆಯ ವಿಚಾರವು ನಡೆದಾಗ್ಗೆ ಅದರ ಹೊಣೆ ಮತ್ತು ಲಾಭಗಳ ವಿಷಯದಲ್ಲಿ ಮಾತ್ರ ತೀಕ್ಷ್ಣವಾದ ವಾದವಿವಾದಗಳು ಉದ್ಭವಹೊಂದಿದವು. ಇವೆಲ್ಲದರ ಪರಿಣಾಮ ವಾಗಿ ಯುದ್ಧವನ್ನು ಕೈಕೊಂಡ ಸಮಯದಲ್ಲಿ ಕೆಲವು ರಾಷ್ಟ್ರಗಳು ಹಿರಿತನವನ್ನು ವಹಿಸಿಕೊಂಡು ಅದರ ಕಾರ್ಯಭಾರ ಮತ್ತು ಪ್ರತಿಫಲಗಳಿಗಾಗಿ ತಾವು ಪಾಲುಗಾರರಾದಂತೆಯೆ, ಶಾಂತಿಯನ್ನು ಸ್ಥಾಪಿಸಿ, ಅದನ್ನು ಪಾಲಿಸುವ ಕೆಲಸದಲ್ಲಿಯೂ ಆ ಪ್ರಬಲರಾಷ್ಟ್ರಗಳೇ ಪ್ರಭುತ್ವವನ್ನು ಪಡೆದಿರಬೇಕು ಎಂಬ ಆಶಯದ ಎತ್ತುಗಡೆಯು ಮೊದಲಿನಿಂದ ಆರಂಭವಾಯಿತು. ಕ್ಷೇಮ ಮಂಡಲದ ಸಂವಿಧಾನವು ರಚಿತವಾಗುವಾಗ್ಗೆ ನಡೆದ ಮಾತುಗಳನ್ನು ನಾವು ಪರೀಕ್ಷಿಸಿದರೆ ಈ ವಿಷಯವು ಸ್ಪಷ್ಟವಾಗುವದು. ಆಗ್ಗೆ ಶಾಂತಿ ಯನ್ನು ಕಾಪಾಡುವ ಯಾವುದೇ ನಿರ್ಣಯ ಕೈಕೊಳ್ಳಬೇಕಾದರೆ ಕ್ಷೇಮಮಂಡಲದ ಶಾಶ್ವತ ಸದಸ್ಯರ ಐವರ ಮತವೂ ಅಗತ್ಯ ಎಂಬವಾದವು ಪ್ರಬಲರಾಷ್ಟ್ರಗಳ ಪರವಾಗಿ ಮಂಡಿಸಲಾಯಿತು. ಈ ಪ್ರಸಂಗದಲ್ಲಿ ಮಧ್ಯಮಸ್ಥಿತಿಯಲ್ಲಿದ್ದ ಕೆಲವು ರಾಷ್ಟ್ರಗಳು—ಅವುಗಳಲ್ಲಿ ಪ್ರಾಮುಖ್ಯವಾಗಿ ಆಸ್ಟ್ರೇಲಿಯವು— ಇಂತಹ ಅಧಿಕಾರವನ್ನು ಶಾಶ್ವತವಾಗಿ ಪ್ರಬುದ್ಧರಾಷ್ಟ್ರಗಳ ಕೈಯಲ್ಲಿರಿಸಿದರೆ ಚಿಕ್ಕ ಮತ್ತು ಮಧ್ಯಮ ರಾಷ್ಟ್ರಗಳ ಭವಿಷ್ಯವು ಚಿಂತಾ ಜನಕವಾಗಿಯೆ ಉಳಿಯುವದು ಎಂಬ ಆಶಯದ ಅಭಿಪ್ರಾಯವನ್ನು ವ್ಯಕ್ತ ಗೊಳಿಸಿದವು. ಆದರೆ ಪ್ರತಿಷ್ಠಿತ ರಾಷ್ಟ್ರಗಳ ಪ್ರಭಾವಕ್ಕೆ ಧಕ್ಕೆಯು ತಗಲು ವಂತಹ ಈ ಬಗೆಯ ಯಾವುದೇ ಅಭಿಮತವು ಆಗ್ಗೆ ಅತ್ಯಂತ ತ್ಯಾಜ್ಯ ಮತ್ತು ನಿಷಿದ್ಧವಾದ ಮಾತಾಗಿತ್ತು. ಪ್ರಪಂಚದ ಭವಿಷ್ಯವು ಸುಖಮಯ, ಶಾಂತಿ ಪೂರ್ಣ ಮತ್ತು ಸಮೃದ್ಧವಾಗಿ ಮಾರ್ಪಡಿಸಬೇಕು ಎಂಬ ಧ್ಯೇಯವು ನಮ್ಮದಾಗಿದ್ದರೆ—ಯುದ್ಧದಲ್ಲಿ ಬಾಂಧವ್ಯದಿಂದ ಹೋರಾಡಿ, ಐಕ್ಯಭಾವ ದಿಂದ ಕೂಡಿದ ಪ್ರಮುಖರಾಷ್ಟ್ರಗಳ ಸಮ್ಮತಿ, ಮತ್ತು ಐಕ್ಯಮತ್ಯವು

ಯಾವುದೇ ವಿಷಯದಲ್ಲಿ ಆಗಲಿ ಅತ್ಯಗತ್ಯ ಎಂಬ ವಾದವನ್ನು ಆಗ್ಗೆ ಹಿರಿಯ ರಾಷ್ಟ್ರಗಳ ನಾಯಕರು ಮುಂದೆ ಮಾಡಿದರು.

ಆದರೂ ಅನ್ಯರಾಷ್ಟ್ರಗಳು ಈ ಬಗೆಯ ಅಸಾಧ್ಯವಾದ ಅಭಿಪ್ರಾಯಕ್ಕೆ ತಲೆಯನ್ನು ತಗ್ಗಿಸಲಿಲ್ಲ; 'ವಿಶ್ವದಲ್ಲಿ ರಾಜಕೀಯ ನೆಮ್ಮದಿಯು ಉಳಿಯ ಬೇಕಾದರೆ ಅದಕ್ಕೆ ಪ್ರಬಲರಾಷ್ಟ್ರಗಳ ಸಹಾಯವಷ್ಟೇ ಅಲ್ಲ ಸಕ್ರಿಯ ಸಹ ಕಾರವೂ ಅವಶ್ಯಕವಾಗಿರುವದು. ಮತ್ತು ಪ್ರಪಂಚದ ಆರ್ಥಿಕ ಪ್ರಗತಿಯನ್ನು ಸಾಧಿಸಬೇಕಾದರೆ ಪ್ರಬುದ್ಧ ರಾಷ್ಟ್ರಗಳ ಬೆಂಬಲ ಮತ್ತು ಪ್ರಾಮಾಣಿಕ ಪ್ರಯತ್ನಗಳು ಅಗತ್ಯ" ಎಂಬ ಮಾತನ್ನು ಎಲ್ಲರೂ ಒಪ್ಪಬೇಕಾಗಿದ್ದರೂ, ಅದರ ಸೂತ್ರಗಳನ್ನು ಶಾಶ್ವತವಾಗಿ ಹಿರಿಯ ರಾಷ್ಟ್ರಗಳೆನಿಸುವ ನಾಲ್ಕೈದು ರಾಷ್ಟ್ರಗಳ ಕೈಯಲ್ಲಿ ಇರಿಸಿ, ಇತರ ರಾಷ್ಟ್ರಗಳನ್ನು ಅವರ ಅನುಕಂಪೆಗೆ ಮತ್ತು ಅನುಗ್ರಹಕ್ಕೆ ಈಡುಮಾಡುವದು ಉಚಿತವಲ್ಲ; ಈ ಸಂದರ್ಭದಲ್ಲಿ ಪ್ರಮುಖ ರಾಷ್ಟ್ರಗಳು ತಮ್ಮ ಸಾಮರ್ಥ್ಯದ ಪರಿಣಾಮವಾಗಿಯೆ ತಮ್ಮ ಪ್ರಭಾವವನ್ನು ಕಡಿಮೆ ಮಾಡಿಕೊಳ್ಳುವದರಲ್ಲಿ ನಿಜವಾದ ಮುತ್ಸದ್ದಿತನವಿದೆ ಎಂಬ ವಾದ ವನ್ನು ಮುಂದುವರಿಸಿದವು. ವಿಶ್ವದಲ್ಲಿ ಅಶಾಂತಿಯು ತಲೆಯೆತ್ತುವಂತಹ ಆಪತ್ತು ಒದಗಿದಾಗ್ಗೆ, ಅದರ ಹೊಣೆಯನ್ನು ಪ್ರಾಮುಖ್ಯವಾಗಿ ಹಿರಿಯ ರಾಷ್ಟ್ರಗಳು ವಹಿಸುವದೇನೋ ನಿಜ; ಆದರೆ ಅಶಾಂತಿಯ ಸ್ಫೋಟವು ಯುದ್ಧರೂಪದಲ್ಲಿ ಆಗುವದಕ್ಕಿಂತ ಮುಂಚೆ, ಅದು ಯುದ್ಧದಲ್ಲಿ ಪರಿಣಮಿಸ ದಂತೆ ಸಕಲ ಪ್ರಯತ್ನವನ್ನು ಮಾಡಬೇಕು; ಮತ್ತು ಕೊನೆಯದಾಗಿ ಯುದ್ಧದ ನಿರ್ಣಯವನ್ನು ಪ್ರಮುಖರಾಷ್ಟ್ರಗಳ ಒಪ್ಪಿಗೆಯಿಂದ ಮಾತ್ರ ಸ್ವೀಕರಿಸಬೇಕಾಗಿದ್ದರೂ, ಆ ಪ್ರಸಂಗವನ್ನು ತಪ್ಪಿಸಲಿಕ್ಕೆಂದು, ವಿಚಾರ ವಿನಿಮಯ, ಪಂಚಾಯತಿಯ ಪ್ರಯತ್ನ, ಭಿನ್ನಾಭಿಪ್ರಾಯಕ್ಕೆ ಸಂಬಂಧಿಸದೆ ಇದ್ದ ರಾಷ್ಟ್ರಗಳ ಮಧ್ಯಸ್ಥಿಕೆ, ಸದ್ಭಾವನಾಮಂಡಲಗಳ ಮುಖಾಂತರ ಒಪ್ಪಂದಂಥ ಸಂಭವ ಈ ಬಗೆಯ ಎಲ್ಲ ಸಾಧಕ್ಯ ಉಪಾಯಗಳನ್ನು ಕೈಕೊಳ್ಳಲಿಕ್ಕೆ ಕ್ಷೇಮಮಂಡಲದಲ್ಲಿರುವ ಪ್ರಮುಖ ರಾಷ್ಟ್ರಗಳು ಒಪ್ಪಬೇಕು ಎಂಬ ಸೂಚನೆಯು ಸಾಮಾನ್ಯವಾಗಿ ಸಕಲರ ಸಹಾನುಭೂತಿಯನ್ನು ಪಡೆ ಯಿತು. ಯಾವುದೊಂದು ರಾಷ್ಟ್ರವು ಅಶಾಂತಿಯ ವಾತಾವರಣವನ್ನು ನಿರ್ಮಾ ಣಮಾಡಲಿಕ್ಕೆ ಕಾರಣವಾದಾಗ್ಗೆ ಅದರ ವಿರುದ್ಧ ಸಕ್ರಿಯ ಶಾಸನದ ನಿರ್ಣಯ

ವನ್ನು ಸ್ವೀಕರಿಸುವ ವಿಷಯವಾಗಿ ಪ್ರಬಲರಾಷ್ಟ್ರಗಳ ಸಹಮತವು ಅವಶ್ಯಕ ಎಂಬ ಮಾತಿಗೆ ಕಿರಿಯ ಮತ್ತು ಮಧ್ಯಮವರ್ಗದ ರಾಷ್ಟ್ರಗಳು ಒಪ್ಪಿಗೆಯನ್ನು ನೀಡಿದರೇನೊ ನಿಜ; ಆದರೆ ಆ ಬಗೆಯ ನಿರ್ಣಯವನ್ನು ಸ್ವೀಕರಿಸುವ ಮುನ್ನ ಅದಕ್ಕೆ ಮೂಲವಾದ ಕಾರಣಗಳನ್ನು ಚರ್ಚಿಸಿ, ಯುದ್ಧದ ಪ್ರಸಂಗ ವನ್ನು ಹಿಮ್ಮೆಟ್ಟಿಸಿ ಸಂಧಾನ ಮಾರ್ಗದಿಂದ ಶಾಂತಿಯನ್ನು ಉಳಿಸಿ ಕೊಳ್ಳಲಿಕ್ಕೆ ಸಾಧ್ಯವೊ ಹೇಗೆ ಎಂಬುದನ್ನು ಯೋಚಿಸಬೇಕು ಎಂಬುದೇ ಅನ್ಯರಾಷ್ಟ್ರಗಳ ಆಶೆಯಾಗಿದ್ದಿತು.

ಈ ಸೂಕ್ಷ್ಮವಾದ ವಿಚಾರದ ಹಿನ್ನೆಲೆಯಲ್ಲಿ ಅನೇಕ ಜೀವಾಳದ ತತ್ವಗಳು ಅಡಕವಾಗಿರುವದು ಗಮನಾರ್ಹವಾದ ವಿಷಯವಾಗಿದೆ. ಮೊದ ಲನೆಯದಾಗಿ ಯುದ್ಧವನ್ನು ಗೆಲ್ಲುವಂತಹ ಕಾರ್ಯದಲ್ಲಿ ಪ್ರಮುಖರಾಷ್ಟ್ರಗಳ ಸಾಮರ್ಥ್ಯದ ಅವಶ್ಯಕತೆಯು ಹೆಚ್ಚಾಗಿ ಬೇಕು. ಎಂಬ ಮಾತಿಗೆ ಯಾವ ಅಭ್ಯಂತರವನ್ನು ಚಿಕ್ಕ ಮತ್ತು ಮಧ್ಯಮವರ್ಗದ ರಾಷ್ಟ್ರಗಳು ಒಡ್ಡದಿದ್ದರೂ ಶಾಂತಿರಕ್ಷಣೆಯ ಕಾರ್ಯದಲ್ಲಿ ಹಿರಿಯ ರಾಷ್ಟ್ರಗಳಂತೆಯೇ ಕಿರಿಯ ರಾಷ್ಟ್ರ ಗಳ ಸಹಕಾರವೂ ಅಷ್ಟೆ ಪ್ರಮಾಣದಲ್ಲಿ ಅಗತ್ಯವಾಗಿದೆ, ಎಂಬ ಮಾತನ್ನು ಸಾತ್ವಿಕ ಪ್ರತಿಭಟನೆಯಿಂದ ವ್ಯಕ್ತಗೊಳಿಸಿದಂತಾಗುತ್ತದೆ. ಅಂತೆಯೆ ಈ ವಿಷಯದಲ್ಲಿ ಅವರುಮೇಲು ಇವರುಕೀಳು ಎಂಬ ಭೇದಭಾವವನ್ನು ಕಲ್ಪಿಸ ಬಾರದು ಎಂಬ ವಾದವನ್ನು ಈ ಸಂದರ್ಭದಲ್ಲಿ ಹೂಡಲಾಯಿತು. ಎರಡನೆಯದಾಗಿ ಶಾಂತಿಯ ಭಂಗ ಬರುವಂತಹ ಸಮಯದಲ್ಲಿ ಸಂಯುಕ್ತ ರಾಷ್ಟ್ರಸಂಘವು ಆ ಪ್ರಸಂಗವನ್ನು ಎದರಿಸಲಿಕ್ಕೆಂದು ಪ್ರಯತ್ನವನ್ನು ಮಾಡಬೇಕು. ತಮ್ಮ ಕ್ಷೇಮಮಂಡಲದ ಮುಖಾಂತರ ಈ ನಿರ್ಣಯ ವನ್ನು ಕೈಕೊಳ್ಳುವಾಗ್ಗೆ ಅದರ ಚರ್ಚೆಯು ವರ್ಜಿತವಾಗುವಂತೆ ಯಾವು ದೊಂದು ಶಾಶ್ವತ ಸದಸ್ಯರಾಷ್ಟ್ರವು ತನ್ನ ವಿಶಿಷ್ಟ ಅಧಿಕಾರವನ್ನು ಆ ಪರಿಸ್ಥಿತಿ ಯಲ್ಲಿ ಉಪಯೋಗಿಸಬಾರದು; ಮತ್ತು ಅದರ ಚರ್ಚೆಯು ನಡೆದಾಗ್ಗೆ ತನ್ನ ಅಸಮ್ಮತಿಯನ್ನು ವ್ಯಕ್ತಗೊಳಿಸಲಿಕ್ಕೆ ಅಲ್ಲಿಂದ ನಿರ್ಗಮನಹೊಂದಬಹುದು. ಎಂಬ ಸೂಚನೆಯನ್ನು ಮಂಡಿಸಿ ಶಾಶ್ವತ ಸದಸ್ಯರಾಷ್ಟ್ರಗಳ ವಿಶಿಷ್ಟ ಅಧಿ ಕಾರಕ್ಕೆ ಒಂದು ನಿರ್ಬಂಧವನ್ನು ಹಾಕಿದಂತೆ ಆಗದಿದ್ದರೂ ಅದರ ಕ್ಷೇತ್ರ ವನ್ನು ಸಂಕುಚಿತಗೊಳಿಸಲಾಯಿತು. ಪ್ರತ್ಯಕ್ಷ ಕಾರ್ಯವನ್ನು ಕೈಕೊಂಡು

ಯುದ್ಧ ಪ್ರಸಂಗವನ್ನು ತಪ್ಪಿಸಲಿಕ್ಕೆ, ಆಗಲಿ, ಶಾಂತಿಭಂಗವನ್ನು ಮಾಡಿದವರನ್ನು ದಂಡಿಸಲಿಕ್ಕೇ ಆಗಲಿ ಗೊತ್ತುವಳಿಯನ್ನು ಕ್ಷೇಮಮಂಡಲ ಇಲ್ಲದೆ ಸಾಮಾನ್ಯಸಭೆ ಸ್ವೀಕರಿಸಬೇಕೆಂದಾಗ್ಗೆ ಶಾಶ್ವತಸದಸ್ಯರು ತಮ್ಮ ವಿಶಿಷ್ಟ ಅಧಿಕಾರವನ್ನು ನಡೆಯಿಸಬಹುದು; ಆದರೆ ಆ ವಿಷಯದ ಕೂಲಂಕಷ ವಾದವಿವಾದವು ನಡೆದಾಗ್ಗೆ, ಅಂತಹ ವಿಶಿಷ್ಟ ಅಧಿಕಾರವನ್ನು ಅಣಿಮಾಡಿಕೊಳ್ಳಬಾರದು, ಎಂಬ ನಿಯಂತ್ರಣವು ಅನ್ಯರಾಷ್ಟ್ರಗಳ ಈ ಸೂಚನೆಯಿಂದ ಜಾರಿಯಲ್ಲಿ ಬಂದಂತಾಯಿತು. ಪ್ರತ್ಯಕ್ಷವಾಗಿ ಶಾಶ್ವತ ರಾಷ್ಟ್ರಗಳ ಪ್ರಭಾವವನ್ನು ತಗ್ಗಿಸುವದು ಈ ಉಪಾಯದ ಉದ್ದೇಶವಾದರೂ ಮೂರನೆಯದಾಗಿ ಸಂಯುಕ್ತ ರಾಷ್ಟ್ರಸಂಘದ ಆದರ್ಶವನ್ನು ಸಾಧಿಸಲಿಕ್ಕೆ ಇದೊಂದು ಸೂಕ್ಷ್ಮವಾದ ಸಾಧನವಾದಂತಾಯಿತು.

ಅದೆಂದರೆ ಶಾಂತಿಯ ಸಲುವಾಗಿ ಪ್ರಯತ್ನವನ್ನು ಮುಂದುವರಿಸಲಿಕ್ಕೆ ಈ ಸೂಚನೆಯ ಸಹಾಯದಿಂದ ಹೆಚ್ಚು ಸಮಯ ದೊರೆಯುವದು. ಒಂದು ರಾಷ್ಟ್ರವೇ ಆಗಲಿ ಅಥವಾ ಕೆಲವು ರಾಷ್ಟ್ರಗಳ ಒಂದು ಪಂಗಡವೇ ಆಗಲಿ ಅಶಾಂತಿಗೆ ಕಾರಣವಾಗಿವೆಯೋ ಹೇಗೆ ಮತ್ತು ಅವು ಹಾಗೆ ಕಾರಣವಾಗಿದ್ದರೆ ಅವುಗಳನ್ನು ನಿಯಂತ್ರಿಸುವದಕ್ಕಾಗಿ ಯಾವ ಯೋಜನೆಯನ್ನು ಕೈಕೊಳ್ಳಬೇಕು ಇಂತಹ ಪರಿಸ್ಥಿತಿಯು ನಿರ್ಮಾಣವಾಗಲಿಕ್ಕೆ ಉಂಟಾದ ಕಾರಣವನ್ನು ಗೊತ್ತುಹಿಡಿದು ಅಂತಹ ರಾಷ್ಟ್ರಗಳೊಡನೆ ಸಂಧಾನ, ಪಂಚಾಯತಿ ಮತ್ತು ಮಧ್ಯಸ್ಥಿಕೆಯ ಮೂಲಕ ಆ ಭಿನ್ನಾಭಿಪ್ರಾಯಗಳನ್ನು ದೂರ ಮಾಡಲಿಕ್ಕೆ ಬರುವದೋ ಹೇಗೇ ಎಂಬುದನ್ನುನೋಡಲಿಕ್ಕೆ ಅವಕಾಶವನ್ನು ಈ ಸಾಧನವು ಒದಗಿಸಿಕೊಟ್ಟಂತಾಗಿದೆ. ಒಂದು ಬದಿಯಿಂದ ಶಾಂತಿಯನ್ನು ಭಂಗಮಾಡಿದ ರಾಷ್ಟ್ರಗಳಿಗೆ ತಮ್ಮ ಸಮರ್ಥನೆಯನ್ನು ತಿಳಿಸಿಹೇಳಲಿಕ್ಕೆ, ಸಮಯ ಮತ್ತು ಸಂಧಿಗಳನ್ನು ಕೊಟ್ಟಂತೆಯೂ ಆಗುವದು. ಮತ್ತು ಇನ್ನೊಂದು ಬದಿಯಿಂದ ಶಾಂತಿಯನ್ನು ಪಾಲಿಸುವದಕ್ಕಾಗಿ ಅಹಿಂಸೆಯ ಮಾರ್ಗದಿಂದ ಪ್ರಯತ್ನವನ್ನು ಮುಂದುವರಿಸಿದಂತಾಗುವದು. ಈ ರೀತಿಯಾಗಿ ರಾಷ್ಟ್ರ ಸಂಗಮದ ಕಾಲಕ್ಕೆ ಇರುವ ಸ್ಥಿತಿಗಿಂತ ಶಾಂತಮಯ ವಾತಾವರಣವನ್ನು ಹೆಚ್ಚು ಸಮಯ ಉಳಿಸಿಕೊಳ್ಳಲಿಕ್ಕೆ ಸಂಯುಕ್ತ ರಾಷ್ಟ್ರಸಂಘದ ಕಾಲದಲ್ಲಿ ಹೆಚ್ಚು ಸಾಧ್ಯ

ತೆಯು ದೊರೆತಂತಾಯಿತು. ಆಗಿನ ಕಾಲದಲ್ಲಿ ಹೆಚ್ಚಾಗಿ ಶಾಂತಿಯನ್ನು ಕಾಪಾಡುವ ಮತ್ತು ಆರ್ಥಿಕ ಮತ್ತು ಸೈನಿಕ ಹೊಣೆಯನ್ನು ಹೊರುವ ಭಾರವು ಇಂಗ್ಲಂಡ ದೇಶದ್ದು ಆಗಿತ್ತು; ಆದರೆ ಈಗ ಒಂದು ಪಕ್ಷದಲ್ಲಿ ಅಮೇರಿಕೆ ಮತ್ತು ಇನ್ನೊಂದು ಪಕ್ಷದಲ್ಲಿ ರಸಿಯಗಳು ಪ್ರಬಲವಾಗಿ ಪ್ರತಿಯೊಂದು ಸಂದರ್ಭದಲ್ಲಿ ಇವೆರಡು ರಾಷ್ಟ್ರಗಳಲ್ಲಿ ಮತಭೇದವುಂಟಾಗಿ ಬಿಕ್ಕಟ್ಟು ನಿರ್ಮಾಣವಾಗುವಂತಹ ಸ್ಥಿತಿಯು ಪ್ರಾಪ್ತವಾಗಿದೆ. ಅದರಲ್ಲಿಯೂ ಯುದ್ಧ ಸಮಯದಲ್ಲಿದ್ದ ಸ್ನೇಹವು ಮಾಯವಾಗಿ ಇತ್ತ ಫ್ರಾನ್ಸದೇಶವು ದುರ್ಬಲ ವಾಯಿತು. ಅತ್ತ ಚೀನದಲ್ಲಿ ಕ್ರಾಂತಿಯ ಪರಿಣಾಮವಾಗಿ ಅಧಿಕಾರವು ಹಸ್ತಾಂತರಹೊಂದಿತು. ಹೀಗಾಗಿ ಉಳಿದ ಮೂವರಲ್ಲಿ ಇಂಗ್ಲಂಡ ದೇಶವು ಕೂಡ ತನ್ನ ಸಾಮ್ರಾಜ್ಯವನ್ನು ಕಳೆದುಕೊಂಡು ಕ್ರಮವಾಗಿ ಅಮೇರಿಕೆಯ ಹಿನ್ನೆಲೆಯಲ್ಲಿ ಉಳಿಯುವ ಒಂದು ಸಾಮಾನ್ಯ ರಾಷ್ಟ್ರವಾದನಂತರ ಮೊದ ಮೊದಲು ಕಾರಣಾಂತರದಿಂದ ಚಿಕ್ಕ ಪುಟ್ಟ ಮನಸ್ತಾಪಗಳುಂಟಾಗಿ, ಯುದ್ಧಾ ನಂತರ ಅಯ್ದು ವರ್ಷಗಳಲ್ಲಿ ಅಮೇರಿಕೆ ಮತ್ತು ರಸಿಯಗಳು ಪರಸ್ಪರ ದ್ವೇಷಕ್ಕೆ ಕಾರಣವಾಗಿ ಪರಮಶತ್ರುಗಳಾಗಿ ಪರಿಣಮಿಸಿದವು. ಅಂತೆಯೆ ಪ್ರಪಂಚ ಶಾಂತಿಯಸಂರಕ್ಷಣೆ ಮತ್ತು ಸಂವರ್ಧನೆಗೆ ಕಾರಣವಾದ ಈ ಅಯ್ದು ರಾಷ್ಟ್ರ ಗಳಿಗೆ ಶಾಶ್ವತ ಸದಸ್ಯತ್ವವನ್ನು ಮತ್ತು ಕ್ಷೇಮಮಂಡಲದಲ್ಲಿ ಇವುಗಳ ಮತಾಧಿಕಾರಕ್ಕೆ ವಿಶಿಷ್ಟ ಮಹತ್ವವನ್ನು ಕೊಟ್ಟದ್ದು. ಮುಂದೆ ಪ್ರತಿಯೊಂದು ವಿಧಾಯಕ ಕಾರ್ಯದಲ್ಲಿಯೂ ದಿಗ್ಬಂಧನವನ್ನು ತಂದೊಡ್ಡುವಂತಹ ವಿಷಯವಾಗಿತ್ತು. ಅದರ ತೀಕ್ಷ್ಣತೆಯನ್ನು ಕಿಂಚಿತ್ತಾದರೂ ಕಡಿಮೆಮಾಡಿ, ತನ್ಮೂಲಕ ಹಿರಿಯ ರಾಷ್ಟ್ರಗಳ ಅಧಿಕಾರವನ್ನು ಸಂಕುಚಿತಗೊಳಿಸಬೇಕೆಂದು ಮಾಡಿದ ಈ ಸೂಚನೆಯು ಅಂತರ್ರಾಷ್ಟ್ರೀಯ ಸಂಘಟನೆಯ ಇತಿಹಾಸದಲ್ಲಿ ಅತ್ಯಂತ ಮಹತ್ವಪೂರ್ಣವಾದ ಅಂಶವಾಗಿದೆ.

ಸಂಯುಕ್ತ ರಾಷ್ಟ್ರಸಂಘದ ಸಂವಿಧಾನವು ಚರ್ಚೆಯಲ್ಲಿ ಮುಂದು ವರೆಯಿತು; ಕ್ರಮವಾಗಿ ಅದು ಸ್ವೀಕೃತವಾಯಿತು. ಆದರೆ ಮೇಲೆ ವಿವರಿಸಿದಂತೆ ಪ್ರಪಂಚದ ರಾಜಕೀಯದಲ್ಲಿ ಸ್ಥಿತ್ಯಂತರವುಂಟಾಗಿ ಮೊದಲಿನ ಉತ್ಸಾಹವು ಉಳಿಯಲಿಲ್ಲ. ಪ್ರಮುಖರಾಷ್ಟ್ರಗಳಲ್ಲಿ ಒಕ್ಕಟ್ಟಿನ ಬದಲು ಕ್ಷುಲ್ಲಕವಾದ ಕಾರಣಗಳ ಮೂಲಕ ಅವುಗಳಲ್ಲಿ ಮತಭೇದವುಂಟಾಗಿ

ಹಿರಿಯ ರಾಷ್ಟ್ರಗಳಲ್ಲಿ ಎರಡು ಬಣಗಳಾಗಿ ಪರಿಣಮಿಸಿದವು. ಆದರೆ ಅದೇ ಸಮಯದಲ್ಲಿ ಭಾರತವು ಕೇವಲ ತನ್ನ ಪರಿಶ್ರಮದಿಂದ ಮತ್ತು ಪ್ರಪಂಚದ ರಾಜಕೀಯ ವಾತಾವರಣದ ಹಿನ್ನೆಲೆಯಲ್ಲಿ ಸ್ವಾತಂತ್ರ್ಯವನ್ನು ಗಳಿಸಿಕೊಂಡಿದ್ದಿತು. ಭಾರಕ್ಕೆ ಸ್ವಭಾವತಃ ಯಾವ ಬಗೆಯ ಆಕ್ರಮಣದ ಕಾರ್ಯದಲ್ಲಿಯೂ ಆಸಕ್ತಿಯಿಲ್ಲದ ಕಾರಣ ಮತ್ತು ಸ್ವಾತಂತ್ರ್ಯಸಮಯದ ಮನಸ್ತಾಪದ ಪ್ರತ್ಯಕ್ಷ ಪರಿಣಾಮದ ಮೂಲಕ ಈ ಬಗೆಯ ಯಾವ ಪಂಗಡ ದಲ್ಲಿಯೂ ಅದು ಸಮರಸ ಆಗುವಂತಿರಲಿಲ್ಲ. ಆದರೂ ತನ್ನಂತೆಯೆ ಎಷ್ಟೊ ಕಷ್ಟ ನಿಷ್ಟುರಗಳನ್ನು ಸಹಿಸುತ್ತಿದ್ದ ಅನೇಕ ನೆರೆಹೊರೆಯ ಮತ್ತು ದೂರ ದೂರದ ದೇಶಗಳ ವಿಷಯವಾಗಿ ಸಹಕಾರವನ್ನು ನೀಡುವ ಶಕ್ತಿಯಿರ ದಿದ್ದರೂ ಸಹಾನುಭೂತಿಯನ್ನು ತೋರಿಸುವ ಮನೋಭಾವವುಳ್ಳದ್ದಾಗಿತ್ತು. ಅಂತೆಯೆ ತನ್ನಂತೆ ಕಷ್ಟಪಡುತ್ತಿರುವ ರಾಷ್ಟ್ರಗಳಿಗಾಗಿ ಅನುಕಂಪೆಯುಳ್ಳ ದ್ದಾಗಿತ್ತು. ಪ್ರಪಂಚದೊಳಗಿಂದ ವರ್ಣದ್ವೇಷವನ್ನು ನಿರ್ಮೂಲಗೊಳಿಸ ಬೇಕು. ಎಂಬ ಅಭಿಪ್ರಾಯವನ್ನು ಭಾರತವು ಮಂಡಿಸುತ್ತಿತ್ತು. ಅಷ್ಟೇ ಅಲ್ಲದೆ ವಿಶ್ವದಲ್ಲಿ ಎಲ್ಲಿಯೂ ಉಪನಿವೇಶವಾದವು ಇರಬಾರದು, ಸಾಮ್ರಾಜ್ಯ ವಾದವು ಅಸ್ತಿತ್ವದಲ್ಲಿ ಉಳಿಯಬಾರದು ಎಂಬ ಧೋರಣೆಯುಳ್ಳದ್ದಾಗಿತ್ತು. ಆದರೆ ವಿಶ್ವಸಂಸ್ಥೆಯಲ್ಲಿ ಭಾರತಕ್ಕೆ ಆ ಬಗೆಯ ಮನ್ನಣೆಯಸ್ಥಾನವೂ ಇರ ಲಿಲ್ಲ. ಮತ್ತು ಇಂತಹ ವಿಷಯಗಳನ್ನು ಚರ್ಚಿಸುವಂತಹ ಅನುಕೂಲವು ಉಳಿದಿರಲಿಲ್ಲ.

ಇತ್ತ ಸಂಯುಕ್ತ ರಾಷ್ಟ್ರಸಂಘದ ಅಧಿಲೇಖನದಲ್ಲಿ ಉದಾತ್ತವಾದ ತತ್ವಗಳ ನಿರ್ದೇಶವೇನೋ ಇದ್ದಿತು. ಮಾನವನ ಸಮಾನಾಧಿಕಾರ, ಆರ್ಥಿಕ ಮತ್ತು ರಾಜಕೀಯ ಶೋಷಣೆಯ ನಿರ್ಮೂಲನ, ವರ್ಣಭೇದ ಮತ್ತು ಭಾಷಾಭೇದಗಳೆ ಮೊದಲಾದ ಕೃತ್ರಿಮ ಮತ್ತು ಅರ್ಥಹೀನ ಆಚರಣೆಗಳ ಖಂಡನೆ, ಮೊದಲಾದ ಉನ್ನತವಾದ ಮಾತುಗಳು ಉಲ್ಲಿಖಿತವಾಗಿದ್ದವು. ಪ್ರತ್ಯಕ್ಷವಾಗಿ ಸಂಯುಕ್ತ ರಾಷ್ಟ್ರಸಂಘವು ರೂಪುಗೊಂಡ ಮೇಲೆಯೂ ಆ ಬಗೆಯ ಭೇದಭಾವ, ತಾರತಮ್ಯ ಮತ್ತು ಶೋಷಣೆ—ಪೀಡನೆಗಳು ಎಂದಿನಂತೆಯೆ ತಾಂಡವವಾಡುತ್ತಿದ್ದವು. ಅಂತೆಯೆ ಭಾರತವು ಇಂಡೋ ನೇಶಿಯದ ಸ್ವಾತಂತ್ರ್ಯಸಮರದ ಹೋರಾಟದಲ್ಲಿ ಆ ತತ್ವಗಳ ನಿರ್ದೇಶ ಮಾಡಿದ ಉದ್ದೇಶಗಳನ್ನು ಪರೀಕ್ಷಿಸುವ ಸಂದರ್ಭವನ್ನು ಕಂಡಿತು.

ಡಚ್ ಸಾಮ್ರಾಜ್ಯದಲ್ಲಿ ಸೇರಿಕೊಂಡು ಆರ್ಥಿಕ ಮತ್ತು ಸಾಮಾಜಿಕ ಅವನತಿಯನ್ನು ಇಂಡೋನೇಶಿಯಾವು ಕಂಡಿತ್ತಷ್ಟೆ ಅಲ್ಲದೆ, ದ್ವಿತೀಯ ಮಹಾಯುದ್ಧವು ನಡೆದಾಗ್ಗೆ ಜಪಾನದ ಅತಿಕ್ರಮಣದಿಂದ ಸಂರಕ್ಷಣೆಯನ್ನು ಪಡೆಯುವಂತಹ ಸಾಮಾನ್ಯ ಸೌಲಭ್ಯವನ್ನು ಕೂಡ ರಾಜಕೀಯವಾಗಿ ಡಚ್ ಸಾಮ್ರಾಜ್ಯದ ಅಧೀನವಾಗಿದ್ದ ಈ ರಾಷ್ಟ್ರವು ಪಡೆಯಲಿಲ್ಲ. ಅಂತೆಯೆ ಯುದ್ಧವು ಕೊನೆಗೊಂಡು, ಜಪಾನದ ಪರಾಭವವಾದನಂತರ, ರಾಜಕೀಯ ಅಧಿಕಾರದ ಹಸ್ತಾಂತರವಾಗುವ ಸಂದರ್ಭದಲ್ಲಿ ಇಂಡೋನೇಶಿಯದ ರಾಜಕೀಯನಾಯಕರು ತಾವು ಕೂಡ ಸ್ವತಂತ್ರರಾಗಬೇಕೆಂಬ ತಮ್ಮ ಆಕಾಂಕ್ಷೆಯನ್ನು ವ್ಯಕ್ತಗೊಳಿಸಿದರು. ಆದರೆ ಅಂತಹ ಅಪಮಾನಕಾರಕ ಮತ್ತು ಅನರ್ಥಕಾರಕ ಮಾತುಗಳಿಗಾಗಿ ಮುಂದಾಳುಗಳನ್ನು ಡಚ್ ಸಾಮ್ರಾಜ್ಯವಾದಿಗಳು ತಮ್ಮ ಸಾಮರ್ಥ್ಯದ ಸಹಾಯದಿಂದ ಕೈಸೆರೆಯಲ್ಲಿರಿಸಿ, ಅಂತಹ "ಬಂಡಾಯ"ಗಳು ಜರುಗದಂತೆ ಎಚ್ಚರಿಕೆಯನ್ನು ವಹಿಸಿಕೊಂಡರು. ಇದರಿಂದ ಖತಿಗೊಂಡ ಕೆಲವು ರಾಷ್ಟ್ರಗಳು ಕ್ಷೇಮಮಂಡಲದ ಸಭೆಯಲ್ಲಿ ಇಂಡೋನೇಶಿಯದ ಪರವಾಗಿ ವಾದವನ್ನು ಹೂಡಿದವು.

ಆದರೆ ತಮ್ಮ ತಮ್ಮ ಪ್ರತಿಷ್ಠೆಯ ವಿಷಯವಾಗಿಯೆ ಹೆಣಗಾಡುತ್ತಿದ್ದ ಸಂಯುಕ್ತ ರಾಷ್ಟ್ರಸಂಘದ ಸದಸ್ಯರಾಗಿದ್ದ ಹಿರಿಯ ರಾಷ್ಟ್ರಗಳು ಈ ಬಗೆಯ ದೂರಿನ ಯೋಚನೆಯನ್ನು ಮಾಡುವಂತಹ ವಿವೇಕವುಳ್ಳವರಾಗಿದ್ದಿಲ್ಲ. ಇಷ್ಟೆ ಅಲ್ಲದೆ ಪರೋಕ್ಷವಾಗಿ ಇಂಡೋನೇಶಿಯನ್ ಪ್ರಜೆಗಳು ಪಾರತಂತ್ರ್ಯದಲ್ಲಿಯೆ ತೊಳಲಾಡಬೇಕು ಎಂಬ ಆಶಯವಿದ್ದಂತೆ ಆಚರಿಸಿದವು. ಯುದ್ಧವು ಮುಗಿದು ಜಪಾನಿಯರು ಆ ಭೂಮಿಯಿಂದ ಕಾಲ್ತೆಗೆಯುವಷ್ಟರಲ್ಲಿ ತಾವು ತಮ್ಮ ಜಾಲವನ್ನು ಹರಡಬೇಕು ಎಂದು ರಶಿಯದ ಮಾರ್ಗದರ್ಶನದಲ್ಲಿ ಸಾಮ್ಯವಾದಿಗಳು ಹಾತೊರೆಯುತ್ತಿದ್ದರೆ, ಇತ್ತ ಮೊದಲಿನ ತಮ್ಮ ಸಾಮ್ರಾಜ್ಯವನ್ನು ಪುನರುಜ್ಜೀವನಗೊಳಿಸಿ, ಅಮೇರಿಕೆಯ ಸಹಾಯದಿಂದ ಇಂಡೋನೇಶಿಯದ ಮೇಲೆ ತಮ್ಮ ಪ್ರಭುತ್ವವನ್ನು ಮತ್ತೆ ಸ್ಥಾಪಿಸಿಕೊಳ್ಳಬೇಕೆಂಬ ಆಕಾಂಕ್ಷೆಯು ಡಚ್ ಸೂತ್ರಚಾಲಕರದಾಗಿತ್ತು. ಆದರೆ ಇವೆರಡೂ ಮೋಸಗಾರಿಕೆಯ ಅಪಾಯಕಾರಕ ಮಾರ್ಗಗಳನ್ನು ತಪ್ಪಿಸಿ ಸ್ವಾತಂತ್ರ್ಯದ ರಾಜಮಾರ್ಗವನ್ನು ಹಿಡಿಯಬೇಕೆಂಬ ಉಜ್ವಲವಾದ ಆಸೆಯುಳ್ಳ

ಇಂಡೋನೇಶಿಯದ ರಾಜಕೀಯ ಧುರೀಣರು ಶಕ್ತಿಮೀರಿ ಪ್ರಯತ್ನವನ್ನು ನಡೆಯಿಸಿದ್ದರು; ಪ್ರಪಂಚದಲ್ಲಿ ದೊರೆಯಬಹುದಾದ ಸಹಾಯ–ಸಹಕಾರ ಸಹಾನುಭೂತಿಗಳನ್ನು ಯಾವ ರಾಷ್ಟ್ರದಿಂದಾದರೂ ಪಡೆಯುವಂತಹ ಮನೋಭಾವವುಳ್ಳವರಾಗಿದ್ದರು. ಅದೇ ಸಮಯದಲ್ಲಿ ಅಸ್ತಿತ್ವವನ್ನು ಪಡೆದು ಕಾರ್ಯರೂಪಕ್ಕಿಳಿದ ಸಂಯುಕ್ತ ರಾಷ್ಟ್ರಸಂಘವು ತಮ್ಮ ನಿಸರ್ಗಸಿದ್ಧ ಅಧಿಕಾರವನ್ನು ದೊರಕಿಸಿಕೊಡಬಹುದು ಎಂಬ ಉತ್ಕಂಠೆಯುಳ್ಳವರು ಅವರಾಗಿದ್ದರು. ಆದರೆ ಸಂಯುಕ್ತ ರಾಷ್ಟ್ರಸಂಘದ ಸಭೆಗಳಲ್ಲಿಯೇ ಅದರ ಚರ್ಚೆಗೆ ಕೂಡ ಅನುವು ದೊರೆಯದಂತಹ ಪರಿಸ್ಥಿತಿಯಿತ್ತು. ಪ್ರಚ್ಛನ್ನಮಾರ್ಗದಿಂದ ಸಾಮ್ಯವಾದವು ಹಬ್ಬುವಂತೆ ಸಹಾಯವನ್ನು ರಸಿಯವು ಮಾಡುತ್ತಿದ್ದ ಮೂಲಕ ಮತ್ತು ಇಂಡೋನೇಶಿಯದಲ್ಲಿ ಮತ್ತೆ ಡಚ್ ಪ್ರಭುತ್ವವು ನೆಲಿಸಿದರೆ ಅದರ ಪರಿಣಾಮವಾಗಿ ತಮ್ಮ ಪ್ರತಿಷ್ಠೆಯು ಬೆಳೆಯಬಹುದು ಎಂಬ ಧೋರಣೆಯಿಂದ ಮುಕ್ತಹಸ್ತದಿಂದ ಶಸ್ತ್ರಾಸ್ತ್ರಗಳ ಸಾಧನಗಳನ್ನು ಅಮೇರಿಕೆಯು ಒದಗಿಸುತ್ತಿದ್ದ ಕಾರಣ ದೇಶೀಯ ಜನರ ಸಂಕಟದ ಕೂಗನ್ನು ಕೇಳುವವರಾರು ? ಆದರೆ ಅಷ್ಟೊಂದು ವಿರುದ್ಧವಾದ ಮನಸ್ಸಿನಿಂದ ಸ್ವೀಕರಿಸಿದ ಅಧಿಲೇಖನದ ತತ್ವಗಳ ಗತಿಯೇನು ಎಂಬುದನ್ನಾದರೂ ಯೋಚಿಸಬಾರದೇ ?

ಇಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿ, ತಾನು ಅದೇ ವಿಭಜನೆಯ ವಿಷಮಯ ಫಲಗಳನ್ನು ಅನುಭವಿಸುತ್ತಿದ್ದರೂ, ದೇಶದ ತುಂಬೆಲ್ಲ ಹರಡಿದ ಚಿಕ್ಕ ದೊಡ್ಡ ಸಂಸ್ಥಾನಗಳನ್ನು ಹೇಗೆ ಅಳವಡಿಸಿಕೊಳ್ಳಬೇಕು ಎಂಬ ಯೋಚನೆಯಲ್ಲಿದ್ದರೂ, ರಾಷ್ಟ್ರದ ಸಂವಿಧಾನದ ಚರ್ಚೆಯು ನಡೆದಿದ್ದರೂ ಭಾರತವು ೧೯೪೯ರಲ್ಲಿ ತನ್ನ ಅನುವು–ಆಪತ್ತುಗಳನ್ನು ಲೆಕ್ಕಿಸದೆ ಕೇವಲ ಒಂದು ತತ್ವದ ಹಟಕ್ಕಾಗಿ, ವಿಶ್ವಸಂಸ್ಥೆಯನ್ನು ಅಕ್ಕರತೆಯಿಂದ ಅಪ್ಪಿಕೊಂಡು ಉದಾತ್ತವಾದ ವಿಚಾರಗಳ ಸತ್ಯತೆಯನ್ನು ಸಾರುವದಕ್ಕಾಗಿ ಮುಂದಾಳುತನವನ್ನು ವಹಿಸಿ, ಒಂದು ಸಮ್ಮೇಲನವನ್ನು ಕೂಡಿಸಿತು. ಆ ಸಮ್ಮೇಲನದ ಮೂಲಕ ಪ್ರಪಂಚದಲ್ಲಿ ಉಪನಿವೇಶನವಾದಕ್ಕೆ ಸ್ಥಾನವಿಲ್ಲ, ಇಂಡೋನೇಶಿಯವು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವದು ಅಭಿನಂದನೀಯ, ಮತ್ತು ವಿಶ್ವಸಂಸ್ಥೆಯ ಸಭೆಗಳಲ್ಲಿ ಅದರ ಈ ಪ್ರಯತ್ನಕ್ಕೆ ಬೆಂಬಲವು ಸಿಕ್ಕದಿರು

ವದು ಶೋಚನೀಯ, ಎಂಬ ಆಶಯದ ಮಾತುಗಳನ್ನು ಮುಕ್ತಕಂಠವಾಗಿ ಸಾರಿತು. ಆ ಆಂದೋಲನದ ಪರಿಣಾಮವಾಗಿ ಪ್ರಪಂಚದ ಮಧ್ಯಮ ವರ್ಗದ ಮತ್ತು ಚಿಕ್ಕಪ್ರಮಾಣದ ರಾಷ್ಟ್ರಗಳಲ್ಲಿಯೂ ನವಚೇತನವುಂಟಾಗಿ ಇಂಡೋನೇಶಿಯದ ಸ್ವಾತಂತ್ರ್ಯಸಮರಕ್ಕೆ ಸಹಾನುಭೂತಿಯೂ ದೊರೆ ಯಿತು. ಅಂತೆಯೆ ಸಂಯುಕ್ತ ರಾಷ್ಟ್ರಸಂಘದ ಸಾಮಾನ್ಯ ಸಭೆಯು ಕೂಡ ಒಂದು ನಿರ್ಣಯವನ್ನು ಸ್ವೀಕರಿಸಿ, ಕ್ಷೇಮಮಂಡಲದ ಮೂಲಕ ಯುದ್ಧ ವನ್ನೂ—ಅಂತಃಕಲಹವನ್ನೂ ನಿಲ್ಲಿಸುವಂತೆ ಮತ್ತು ಸ್ವಯಂನಿರ್ಣಯ ತತ್ವ ವನ್ನು ಕಾರ್ಯಾಚರಣೆಯಲ್ಲಿ ತರುವಂತೆ ಕಾರ್ಯಕ್ರಮವನ್ನು ಕೈಕೊಂಡಿತು. ಅಲ್ಪಸಮಯದಲ್ಲಿ ಇಂಡೋನೇಶಿಯವು ಸ್ವತಂತ್ರರಾಷ್ಟ್ರವಾಗಿ ಕಂಗೊಳಿಸಿತು.

ಈ ದೃಷ್ಟಾಂತದಿಂದ ನಾವು ಒಂದೆರಡು ಅರ್ಥಪೂರ್ಣವಾದ ಅಂಶ ಗಳನ್ನು ತಿಳಿದುಕೊಳ್ಳಬಹುದು. ಮೊದಲನೆಯದಾಗಿ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳಲ್ಲಿ ಪ್ರಮುಖರು ಕಾರಣಾಂತರದಿಂದ ಒಂದು ವಿಷಯದ ಯೋಚನೆ ಯನ್ನು ತಪ್ಪಿಸಿಕೊಳ್ಳುತ್ತಿದ್ದರೂ ಉಳಿದ ರಾಷ್ಟ್ರಗಳು ಪ್ರಪಂಚದಲ್ಲಿಯ ಜನ ಮತವನ್ನು ಸಂಘಟಿಸಿ ಪ್ರಮುಖಶಕ್ತಿಗಳು ಆ ವಿಷಯದಲ್ಲಿ ಆಸಕ್ತಿಯನ್ನು ವಹಿಸುವಂತೆ ಮಾಡಬಹುದು. ಸಾಧಾರಣಶಕ್ತಿಯುಳ್ಳ ಅಥವಾ ರಾಜಕೀಯ ರಂಗದಲ್ಲಿ ಅದೇ ಹೆಜ್ಜೆಯನ್ನುಟ್ಟ ರಾಷ್ಟ್ರಗಳು ಕೂಡ ಇಂತಹ ಮಹತ್ವದ ಕಾಯನ್ನು ಸಾಧಿಸಬಹು. ತಮ್ಮ ಪ್ರತಿಷ್ಠೆ, ತಮ್ಮ ವಿಶಿಷ್ಟಾಧಿಕಾರ ಮತ್ತು ತಮ್ಮ ಪ್ರಭಾವದ ಕ್ಷೇತ್ರಗಳು ಬೆಳೆಯಬೇಕು ಎಂಬ ಒಂದೇ ಒಂದಾದ ಸ್ವಾರ್ಥದೃಷ್ಟಿಯುಳ್ಳ ಪ್ರಬುದ್ಧರಾಷ್ಟ್ರಗಳಿಗೆ, ತಮ್ಮ ಅಧಿಕಾರ ದಂತೆಯೆ ತಮಗೆ ಹೊಣೆಯೂ ಇರುವದು ಎಂಬ ವಿಷಯವನ್ನು ನೆನಪುಮಾಡಿ ಕೊಡುವ ಕಾರ್ಯವನ್ನು ಮಿಕ್ಕ ರಾಷ್ಟ್ರಗಳು ಮಾಡಬಹುದು. ಆ ಪ್ರಮಾಣ ದಲ್ಲಿ ತಮ್ಮ ಹೆಮ್ಮೆಯನ್ನು ಕಡಿಮೆಮಾಡಿಕೊಳ್ಳುವಂತೆ ಬಲಿಷ್ಠ ರಾಷ್ಟ್ರಗಳನ್ನು ಪ್ರತಿಭಟಿಸಿ, ಅವುಗಳಿಗೆ ತಮ್ಮ ಕರ್ತವ್ಯದ ಮಾರ್ಗವನ್ನು ತೋರಿಸಿಕೊಡ ಬೇಕಾದರೆ, ಆ ಬಗೆಯ ತತ್ವದ ಮನೋಧೈರ್ಯವಿದ್ದವರಿಗೆ ಮಾತ್ರ ಸಾಧ್ಯ ಎಂದು ಹೇಳಬಹುದು. ಎರಡನೆಯದಾಗಿ ವಿಶ್ವಸಂಸ್ಥೆಯ ಆಸಕ್ತಿಯಿಂದ ಮತ್ತು ಬೆಂಬಲದಿಂದ ಆಗಬೇಕಾದ ಒಂದು ಒಳ್ಳೆಯ ಕಾರ್ಯವು ಹೀಗೆ ಆಗದಿದ್ದಾಗ್ಗೆ ಹೊರಗಿನಿಂದ ಒತ್ತಡವನ್ನು ತಂದು, ಅಲ್ಲಿ ಮೆರೆದಾಡುತ್ತಿರುವ ಸ್ವಾರ್ಥ ಮತ್ತು ಸಂಕುಚಿತ ಪ್ರವೃತ್ತಿಗಳನ್ನು ಬಯಲಿಗೆಳೆದು, ಅದೇ

ಕಾರ್ಯವನ್ನು ಸಂಯುಕ್ತ ರಾಷ್ಟ್ರಸಂಘದ ಮುಖಾಂತರ ಜರುಗಿಸಿ, ಅಧಿಲೇಖನದಲ್ಲಿ ನಿರೂಪಿಸಿದ ತತ್ವಗಳನ್ನು ಸಾರ್ಥಕಗೊಳಿಸಹುದಾಗಿದೆ.

ಇಂತಹ ಪ್ರಯತ್ನ ಮತ್ತು ಪ್ರಚಾರಗಳು ಎಷ್ಟೋ ಬಾರಿ ಅತ್ಯಂತ ಕಟುವಾದ ಟೀಕೆಗಳಿಗೆ ಗುರಿಯಾಗಿವೆ. ವಿಶ್ವಸಂಸ್ಥೆಯ ಓಲಗವು ಇರುತ್ತಿದ್ದಾಗ್ಗೆ ಅದರ ಮೂಲಕ ಪ್ರಯತ್ನಿಸುವ ಸರಿಯಾದ ಮಾರ್ಗವನ್ನು ತ್ಯಜಿಸಿ, ಈ ರೀತಿ ವಾಮಮಾರ್ಗಕ್ಕೆ ತೆರಳುವ ಮನೋಭಾವವು ಸರಿಯಾದುದಲ್ಲ ಎಂಬ ಉಪದೇಶವನ್ನು ವಿಶ್ವಸಂಸ್ಥೆಯ ಸದಸ್ಯರಾಷ್ಟ್ರಗಳೇ ನೀಡುತ್ತಿವೆ. ಆದರೆ ಮಾಡಬೇಕಾದ ಒಂದು ಸತ್ಕಾರ್ಯವನ್ನು, ಮಾಡಬೇಕಾದ ಒಂದು ಸಂಸ್ಥೆಯಾಗಲಿ, ವ್ಯಕ್ತಿಯಾಗಲಿ ಕಾರಣಾಂತರದಿಂದ ಮಾಡದಿದ್ದಾಗ್ಗೆ ಅದರ ಕರ್ತವ್ಯದ ಸ್ಮರಣೆಯನ್ನು ತಂದುಕೊಡುವದು ಅನ್ಯರ ಕೆಲಸವಲ್ಲವೆ ? ವಿಶ್ವಸಂಸ್ಥೆಯ ಅಧಿಕಾರ ಮತ್ತು ಗೌರವಗಳಿಗೆ ಭಂಗಬರುವಂತಹ ಕಾರ್ಯವನ್ನು ಮಾಡದೆ, ಅದರ ಗೊತ್ತುಗುರಿಗಳನ್ನು ಹೆಚ್ಚು ಅರ್ಥಪೂರ್ಣವಾಗಿ ಸಾಧಿಸುವಂತೆ ದಾರಿಯನ್ನು ತೋರಿಸಿಕೊಡುವದು ಹೇಯವಾದುದು ಹೇಗೆ? ಹಾಗೆ ಮಾಡುವಾಗ್ಗೆ ಕೆಲವೊಂದು ಸ್ಥಾಪಿತ ಶಕ್ತಿಗಳ ಮತ್ತು ಪ್ರಬಲರಾಷ್ಟ್ರಗಳ ದುರ್ಲಕ್ಷ್ಯ ಮತ್ತು ಅಪಮಾನವಾಗುವದೇನೋ ನಿಜ; ಆದರೆ ಅದರ ಬದಲಾಗಿ ಜಗತ್ತಿನ ಬಹುಜನರ ಬೆಂಬಲ ದೊರೆತು, ಅವರ ಹಿತವು ಸಾಧಿಸುವಂತಿದ್ದರೆ ಅಂತಹ ಉಪಕ್ರಮಗಳನ್ನು ಕೈಕೊಳ್ಳುವದು ಎಂದಿಗೂ ಸ್ತುತ್ಯವಾದ ಕಾರ್ಯವೆನಿಸುವದು. ಇದೇ ಬಗೆಯ ನೀತಿಯನ್ನು ಭಾರತವು ಅಂತರ್ರಾಷ್ಟ್ರೀಯ ಕ್ಷೇತ್ರದಲ್ಲಿ ಟ್ಯೂನಿಸಿಯಾ, ಮೊರೋಕೋ, ಬ್ರಿಟಿಶ್ ಗಯಾನಾ ಇಜಿಪ್ತ ಮೊದಲಾದ ರಾಷ್ಟ್ರಗಳ ಸ್ವಾತಂತ್ರ್ಯಸಾಧನೆಯ ವಿಷಯದಲ್ಲಿ ಸ್ಪಷ್ಟವಾಗಿ ವ್ಯಕ್ತಗೊಳಿಸಿದೆ. ಪ್ರಬಲರಾಷ್ಟ್ರಗಳ ಯಾವ ಪಕ್ಷಕ್ಕೂ ಅಧೀನವಾಗದೆ, ತಾನು ವಿಶ್ವಸಂಸ್ಥೆಯ ಧ್ಯೇಯಗಳಿಗೆ ತನ್ನ ಹಾರ್ದಿಕ ಬೆಂಬಲವನ್ನು ನೀಡಿರುತ್ತದೆ. ಅಷ್ಟಕ್ಕೆ ತೃಪ್ತಿಯನ್ನು ಹೊಂದದೆ ಸಂಯುಕ್ತ ರಾಷ್ಟ್ರಸಂಘದ ಅಧಿಲೇಖನಕ್ಕೆ ಒಳಪಟ್ಟ ಅಂತಹ ಅಂಶಗಳನ್ನು ಪ್ರಪಂಚದ ಮಿಕ್ಕರಾಷ್ಟ್ರಗಳ ಅವಗಾಹನೆಗೆ ತಂದು, ಅದಕ್ಕೆ ಅನುಕೂಲ ವಾತಾವರಣವನ್ನು ಕಲ್ಪಿಸಿಕೊಟ್ಟಿದೆ.

ಇಂತಹ ಪ್ರಯತ್ನದಿಂದ ವಿಶ್ವಸಂಸ್ಥೆಯ ಆದರ್ಶವನ್ನು ಸಾಧಿಸಲಿಕ್ಕೆ ಭಾರತವು ನೆರವನ್ನು ನೀಡಿದ ಉದಾಹರಣೆಗಳಂತೆಯೆ ಪ್ರತ್ಯಕ್ಷವಾಗಿ ಕಾರ್ಯ

ರಂಗಕ್ಕೆ ಇಳಿದು ಪ್ರಮಾಣಿಸಿ ತೋರಿಸಿದ ಇನ್ನೊಂದು ಸನ್ನಿವೇಶವೆಂದರೆ ಕೋರಿಯದ ಪ್ರಮೇಯವಾಗಿದೆ. ಈ ಸಂದರ್ಭದಲ್ಲಿ ಭಾರತವು, ಮತ್ತು ಭಾರತದಂತೆಯೆ ವಿಶ್ವಶಾಂತಿಯ ರಕ್ಷಣೆಗಾಗಿ ತವಕಪಡುತ್ತಿರುವ ಮಿಕ್ಕ ರಾಷ್ಟ್ರಗಳು ಕೈಕೊಂಡ ಯೋಜನೆಯು ಹಿರಿಯ ರಾಷ್ಟ್ರಗಳಿಗೆ ಪ್ರತಿಭಟನೆಯ ಸ್ವರೂಪದಲ್ಲಿ ಕಂಡರೂ, ಅವರನ್ನು ಕಡೆಗಣಿಸದೆ ಸಂಯುಕ್ತ ರಾಷ್ಟ್ರಸಂಘದ ಉದ್ದೇಶಗಳನ್ನು ಈಡೇರಿಸಲಿಕ್ಕೆ ಯಶಸ್ವಿಯಾಗಿ ಜರುಗಿಸಿದ ಕಾರ್ಯವಾಗಿದೆ. ಮಹಾಯುದ್ಧವು ಮುಗಿದು, ಸಂಯುಕ್ತ ರಾಷ್ಟ್ರಸಂಘದ ಅಂಗರಚನೆಯು ಸಿದ್ಧವಾಗುತ್ತಿದ್ದಾಗ ನಡೆದ ಮಹತ್ವದ ಇನ್ನೊಂದು ಘಟನೆಯೆಂದರೆ ಚೀನರಾಷ್ಟ್ರವು ಸ್ವಾತಂತ್ರ್ಯವನ್ನು ಗಳಿಸಿ ಅಲ್ಲಿ ಸಾಮ್ಯವಾದ ಪಕ್ಷದ ಆಡಳಿತವು ಅಸ್ತಿತ್ವದಲ್ಲಿ ಬಂದುದಾಗಿದೆ. ಜಪಾನವನ್ನು ಸೋಲಿಸಿ, ಅದರ ಮೇಲೆ ತಮ್ಮ ಸೈನಿಕ ಪ್ರಭುತ್ವವನ್ನು ಸ್ಥಾಪಿಸಿದ ಅಮೇರಿಕೆಯು ಅಷ್ಟಕ್ಕೆ ಸಮಾಧಾನಹೊಂದದೆ ತನ್ನ ಮೇಲೆ ಸಾಮ್ಯವಾದೀರಾಷ್ಟ್ರಗಳ ದಾಳಿಯು ಆಗದಂತೆ ಏಶಿಯದಲ್ಲಿ ತಾನು ಕೆಲವು ಕೀಲದ ಸ್ಥಳಗಳನ್ನು ಕೈವಶಪಡಿಸಿಕೊಳ್ಳಬೇಕು, ಎಂಬ ಹವಣಿಕೆಯಲ್ಲಿದ್ದಿತು; ಇತ್ತ ಹೊಸದಾಗಿ ರಾಜ್ಯಸೂತ್ರಗಳನ್ನು ಪಡೆದ ಚೀನ ಸರಕಾರವು ತನ್ನ ಗಡಿಗಳನ್ನು ಭದ್ರಪಡಿಸಿಕೊಳ್ಳುವ ಸಿದ್ಧತೆಯನ್ನು ನಡೆಯಿಸಿತ್ತು. ಇಂತು ಇವೆರಡೂ ಗುಂಪುಗಳು ಕೋರಿಯದ ಮೇಲೆ ತಮ್ಮ ವಕ್ರದೃಷ್ಟಿಯನ್ನು ಚೆಲ್ಲಿದವು. ಚಿಕ್ಕಪುಟ್ಟ ಕಾರ್ಯಗಳಿಂದ, ಒಳಗಿನಿಂದೊಳಗೆ ಹೊತ್ತಿದ ಈ ಜಗಳದ ಹೊಗೆಯು ಕ್ರಮವಾಗಿ ಹಬ್ಬಿ ಒಂದು ದೊಡ್ಡ ಉರಿಯೆ ಆಗಿ ಪರಿಣಮಿಸಿತು. ಅಲ್ಪ ಸಮಯದಲ್ಲಿಯೆ ಕೋರಿಯದ ವಿಷಯವು ಜಟಲ ಸಮಸ್ಯೆಯಾಗಿ ಕಂಡಿತು. ಒಂದು ಕಡೆಯಿಂದ ಸಾಮ್ರಾಜ್ಯವಾದಿಗಳ ಒತ್ತಡ, ಇನ್ನೊಂದು ಕಡೆಯಿಂದ ಸಾಮ್ಯವಾದಿಗಳ ಅಬ್ಬರ ಇವುಗಳ ನಡುವೆ ಕೋರಿಯದ ಪ್ರಜೆಗಳು ಕಂಗೆಟ್ಟರು; ಕಷ್ಟಕ್ಕೀಡಾದರು, ಕಳವಳಗೊಂಡರು. ಅಲ್ಲಿಯ ಸರಕಾರದಲ್ಲಿ ಕೂಡ ಇಂತಹ ಇಬ್ಬಣಗಳು ನಿರ್ಮಾಣಹೊಂದಿ, ಕೋರಿಯವು ಎಂದಾದರೂ ಶಾಂತಿಯಿಂದ ಇರಬಹುದೇ ಎಂಬ ಬಗೆಯು ನಿರಾಸೆಗೆ ಕಾರಣವಾಯಿತು. ಆದರೆ ಅದೇ ಒಂದು ಮಹಾಯುದ್ಧದಿಂದ ಹಣ್ಣಾಗಿ ಹೊರಗೆ ಬಂದ ಹಿರಿಯರಾಷ್ಟ್ರಗಳಿಗೆ ಈ ಪ್ರಚ್ಛನ್ನಕದನವು ಉಗ್ರರೂಪವನ್ನು ತಳೆದು ಮುಕ್ತಸಮರವಾಗು

ವದು ಬೇಕಾಗಿರಲಿಲ್ಲ. ಅತ್ತ ಕೋರಿಯ ದೇಶವು ಎರಡು ಪಕ್ಷಗಳ ಅದ್ಭುತವಾದ ಕಾಳಗಕ್ಕೆ ರಣರಂಗವಾಗಿ ಅತ್ಯಂತ ಅನ್ಯಾಯ–ಅಪಮಾನಗಳಿಗೆ ಈಡಾದಂತೆ,ಇತ್ತ ಅದೇ ಪ್ರಶ್ನೆಯು ಶಾಂತಿಸ್ಥಾಪನೆಯ ಆವಶ್ಯಕತೆಯ ರೂಪದಲ್ಲಿ ತಲೆಯೊಡೆಯುವಂತಹ ವಾದ ವಿವಾದಕ್ಕೆ ಕ್ಷೇಮಮಂಡಲದಲ್ಲಿ ಕಾರಣವಾಗಿತ್ತು—ಪರಸ್ಪರ ವಿರುದ್ಧವಾದ ಆ ಪಂಗಡಗಳಿಗೆ! ಮಾತಿನ ಜಾಲವು ಹಾಗೆಯೆ ಹಬ್ಬುತ್ತ, ಯಾವ ನಿರ್ಣಯವೂ ರೂಪುಗೊಳ್ಳದಂತಹ ಬಿಕ್ಕಟ್ಟು ವಾದರಂಗದಲ್ಲಿ ನಿರ್ಮಾಣವಾಗಿದ್ದರೆ, ಕೃತಿಗೆ ಬೇಸತ್ತು ಕೇವಲ ಕಾಟಕ್ಕೆ ಕೈಹಾಕುತ್ತಿದ್ದ ಎರಡೂ ಪಕ್ಷಗಳಿಗೆ ಕೋರಿಯವು ಆಡುಂಬೋಲವಾಗಿ ದೊರೆತ ತೊಡಕು ಯುದ್ಧರಂಗದಲ್ಲಿ ಪರಿಣಮಿಸಿತ್ತು. ವರ್ಷಾನುವರ್ಷ ಈ ಈ ಬಗೆಯ ದುರ್ಗಮ ಪರಿಸ್ಥಿತಿಯು ಪ್ರಪಂಚದ ಎಲ್ಲ ರಾಷ್ಟ್ರಗಳಿಗೂ ಒಂದು ಸಮಸ್ಯೆಯಾಗಿ ಉಳಿದಿತ್ತು.

ಒಮ್ಮೆ ಈ ತೊಂದರೆಯನ್ನು ತೀರಿಸಿಯೆ ಬಿಡಬೇಕು ಎಂಬ ಹಟದಿಂದೇನೊ ಎನ್ನುವಂತೆ ಸಂಯುಕ್ತ ರಾಷ್ಟ್ರಸಂಘದ ಕ್ಷೇಮಮಂಡಲದಲ್ಲಿ ಈ ಯುದ್ಧವನ್ನು ನಿಲ್ಲಿಸಬೇಕಾದರೆ ಸಂಯುಕ್ತ ರಾಷ್ಟ್ರಸಂಘವೇ ಉಚಿತ ಕಾರ್ಯವನ್ನು ಕೈಕೊಳ್ಳಬೇಕು ಎಂಬ ಆಶಯದ ಒಂದು ಗೊತ್ತುವಳಿಯನ್ನು ಪ್ರಧಾನಕಾರ್ಯದರ್ಶಿಯವರ ವಿಶಿಷ್ಟ ಆಸಕ್ತಿ ಮೇರೆಗೆ ಸ್ವೀಕರಿಸಲಾಯಿತು. ಆ ನಿರ್ಣಯದ ಮೇರೆಗೆ ಉತ್ತರ ಕೋರಿಯವು ಆಕ್ರಮಣವನ್ನು ಮಾಡಿದೆಯೆಂಬ ದೂರನ್ನು ಹೂಡಿ, ಅದನ್ನು ಸದೆಬಡೆಯುವದಕ್ಕಾಗಿ ಸಂಯುಕ್ತ ರಾಷ್ಟ್ರಸಂಘದ ಎಲ್ಲ ಸದಸ್ಯರಾಷ್ಟ್ರಗಳು ತಮ್ಮ ಸೇನಾಬಲವನ್ನು ನೀಡಿ, ಹೋರಬೇಕು ಎಂದು ಗೊತ್ತುಮಾಡಲಾಯಿತು. ರಶಿಯವು ಇಂತಹ ಮಾತಿಗೆ ಮರುಳಾಗದಿದ್ದರೂ, ಅನಿವಾರ್ಯವಾದ ಆ ಸಂದರ್ಭದಲ್ಲಿ ತನ್ನ ವಿರೋಧವನ್ನು ಸ್ಪಷ್ಟಪಡಿಸಿತು. ಪ್ರಧಾನಕಾರ್ಯದರ್ಶಿಗಳ ಕರೆಯ ಮೇರೆಗೆ ಕೆಲವು ರಾಷ್ಟ್ರಗಳು, ಅದರಲ್ಲಿ ಪ್ರಾಮುಖ್ಯವಾಗಿ ಅಮೇರಿಕೆಯು ಸೇನೆಗಳನ್ನು ಕಳಿಸಿದವು. ಇದರ ಪರಿಣಾಮವಾಗಿ ಯುದ್ಧವು ತಡೆಯುವ ಬದಲಾಗಿ ಸಂಯುಕ್ತ ರಾಷ್ಟ್ರಸಂಘದ ಕಾರ್ಯಾಲಯ ಪ್ರಧಾನಕಾರ್ಯದರ್ಶಿಗಳು ಅಮೇರಿಕೆಯೇ ಮೊದಲಾದ ಸಾಮ್ರಾಜ್ಯವಾದೀ ರಾಷ್ಟ್ರಗಳ ಕೈಗೊಂಬೆಯಾಗಿವೆ. ಎಂಬ ಆರೋಪವು ಹೊರಿಸಲ್ಪಟ್ಟಿತು. ಸಕಲ ರಾಷ್ಟ್ರಗಳಿಂದ ಸಾಕಷ್ಟು ಸೇನಾಬಲವು ದೊರೆಯದ ಕಾರಣ ಮತ್ತು ಅದಕ್ಕೆ ಮೂಲವಾಗಿ

ಯಾವ ರಾಷ್ಟ್ರಕ್ಕೂ ಆ ಕದನವನ್ನು ದೊಡ್ಡ ಕಾಳಗದಲ್ಲಿ ಪರಿವರ್ತಿಸುವ ಇಚ್ಛೆಯಿಲ್ಲದುದರಿಂದ, ಆಕ್ರಮರಾಷ್ಟ್ರ ಮತ್ತು ಗುಂಪುಗಳನ್ನು ಸದೆಬಡೆಯುವ ಕಾರ್ಯವು ಸ್ಥಗಿತವಾಗಿಯೇ ನಿಂತಂತಾಯಿತು.

ಇಂತಹ ಬವಣೆಯು ಹೆಚ್ಚು ಚಲನವಲನವಿದ್ದ ರಣರಂಗದಲ್ಲಿಯೆ ಕಂಡು ಬಂದರೆ ಕೇವಲ ಮಾತಿನ ಮೋಡಿಯು ನಡೆಯುತ್ತಿದ್ದ ವಾದರಂಗದಲ್ಲಿ ಇದಕ್ಕಿಂತ ಹೆಚ್ಚಿನ ದಿಗ್ಬಂಧನವು ಕಂಡು ಬರುವಂತಾಗಿದ್ದರೆ ಆಶ್ಚರ್ಯವೇನು! ವಿಶ್ವಸಂಸ್ಥೆಯ ಉದ್ದೇಶವು ಶಾಂತಿಯನ್ನು ರಕ್ಷಿಸಿ ಪೋಷಿಸಿಕೊಳ್ಳುವದೇ ಆಗಿರುವದರಿಂದ ಸಕಲಪ್ರಯತ್ನಗಳನ್ನು ಕೈಕೊಂಡು ವಿರುದ್ಧ ಪಕ್ಷಗಳಲ್ಲಿ ಸಂಧಾನವಾಗುವಂತೆ ಮಾಡಬೇಕು ಮತ್ತು ಅದಕ್ಕೆ ಪೂರ್ವಭಾವಿಯಾಗಿ ಕದನವು ನಿಲ್ಲಿಸಲ್ಪಟ್ಟು, ಶಾಂತಿಯ ಪುನಃಸ್ಥಾಪನೆಗಾಗಿ ಮಾತುಕತೆಗಳನ್ನು ಆರಂಭಿಸಬೇಕು ಎಂಬ ಆಶಯದ ಎತ್ತುಗಡೆಯು ಕ್ಷೇಮಮಂಡಲದಲ್ಲಿ ನಡೆಯಿತು. ಆದರೆ ಕ್ಷೇಮಮಂಡಲದ ಶಾಶ್ವತ ಸದಸ್ಯರಲ್ಲಿರುವ ಚೀನದ ಪ್ರತಿನಿಧಿಗಳು ನವೀನಚೀನದವರಾಗಿರದೆ, ರಾಷ್ಟ್ರೀಯ ಚೀನಪಕ್ಷದ ಪ್ರತಿನಿಧಿಯಾಗಿದ್ದರು. ಇತ್ತ ಚೀನದಲ್ಲಿ ರಾಜಕೀಯ ಕ್ರಾಂತಿಯು ನಡೆದು ಸಾಮ್ಯವಾದೀ ರಾಷ್ಟ್ರವು ಸ್ಥಾಪಿಸಲ್ಪಟ್ಟಿದ್ದರೂ, ಈ ಸ್ಥಿತ್ಯಂತರವನ್ನು ಲಕ್ಷ್ಯಕ್ಕೆ ತಂದುಕೊಳ್ಳಲಿಕ್ಕೆ ಕೂಡ, ಅಮೇರಿಕೆಯು ಸಿದ್ಧವಾಗಿರಲಿಲ್ಲ. ಅಂತೆಯೆ ಈ ಕೋರಿಯದ ಕದನಕ್ಕೆ ಸಂಬಂಧಿಸಿದ ಪ್ರಶ್ನೆಯನ್ನು ಚರ್ಚಿಸುವದಿದ್ದರೆ, ಅದಕ್ಕೆ ಮೊದಲು ಸಾಮ್ಯವಾದೀ ಚೀನವನ್ನು ಅಧಿಕೃತ ಸರಕಾರವೆಂದು ಒಪ್ಪಬೇಕು ಮತ್ತು ಆ ಸರಕಾರದ ಪ್ರತಿನಿಧಿಯು ಕ್ಷೇಮಮಂಡಲದ ಸದಸ್ಯತ್ವವನ್ನು ವಹಿಸಿಕೊಳ್ಳುವಂತೆ ಮಾಡಬೇಕು; ಅವರು ಪ್ರತಿನಿಧ್ಯವನ್ನು ಸ್ವೀಕರಿಸಿದನಂತರ ಮಾತ್ರ ಕದನವನ್ನು ತಡೆಯುವ, ಸಂಧಾನವನ್ನು ಸಾಗಿಸುವ ಮತ್ತು ಶಾಂತಿಯನ್ನು ನೆಲೆಸುವ ಪ್ರಯತ್ನಕ್ಕೆ ಕೈಹಾಕಬಹುದು ಎಂದು ರಸಿಯವು ವಾದವನ್ನು ಹೂಡಿತು. ಈ ಬಗೆಯ ಕಾರ್ಯಾಚರಣೆಯ ಹಿಂಬದಿಯಲ್ಲಿ ಯಾವ ಯಾವ ಘೋರ ಪರಿಣಾಮಗಳು ನಿಂತಿರಬಹುದು ಎಂಬುದನ್ನು ಅರಿತ ಅಮೇರಿಕನ್ ಪ್ರತಿನಿಧಿಗಳು ಇಂತಹ ಸೂಚನೆಗಳಿಗೆ ಒಪ್ಪುವಂತಿರಲಿಲ್ಲ. ಅಂತೆಯೆ ಈ ದಿನದ ವರೆಗೆ ನವೀನಚೀನದ ಅಸ್ತಿತ್ವವನ್ನು ಒಪ್ಪದ ಅಮೇರಿಕೆಯು ಒಂದುಕಡೆ, ಉತ್ತರ ಕೋರಿಯಾದ

ಆಕ್ರಮಣವನ್ನೇ ವಿರೋಧಿಸುವ ನವೀನ–ಚೀನ ಮತ್ತು ರಸಿಯಗಳು ಒಂದು ಕಡೆ ಉಳಿದು ಈ ಸಮಸ್ಯೆಯು ಕೊನೆಯಿಲ್ಲದೆ ಕೊಳೆಯುತ್ತಲಿದೆ.

ವಿಶ್ವಶಾಂತಿಗೆ ಭಂಗವನ್ನುಂಟು ಮಾಡುವಂತಹ, ವಿಶ್ವಸಂಸ್ಥೆಯ ಗೌರವಕ್ಕೆ ಕುಂದನ್ನುಂಟು ಮಾಡುವಂತಹ ಈ ಸಂದರ್ಭವು ಪ್ರಪಂಚದ ವಿವೇಕಕ್ಕೆ ಒಂದು ಆಹ್ವಾನವಾದಂತೆ ಕಂಡರೆ ಸೋಜಿಗವಲ್ಲ. ಅದರಲ್ಲಿಯೂ ಇಂಗ್ಲಂಡ, ಭಾರತ ಮೊದಲಾದ ರಾಷ್ಟ್ರಮಂಡಲ ( Common-wealth of nations ) ದ ಸದಸ್ಯರಾಗಿದ್ದ ರಾಷ್ಟ್ರಗಳು ಪರಿಸ್ಥಿತಿಯ ಪರಿವರ್ತನೆಗಳನ್ನು ಗಮನಕ್ಕೆ ತಂದುಕೊಂಡು ನವೀನ ಚೀನದ ಅಧಿಕಾರ ಮತ್ತು ಲೋಕಪ್ರಿಯತೆಗಳನ್ನು ಒಪ್ಪಿದ್ದ ಕಾರಣ, ಅವುಗಳಿಗೆ ಈ ಬಗೆಯ ಸ್ಥಗಿತವಾದ ವಾತಾವರಣದಿಂದ ಅತ್ಯಂತ ವ್ಯಸನವುಂಟಾಯಿತು. ಅಂತೆಯೆ ಮೊದಲು ಅಮೇರಿಕೆಯ ಅಧಿಕಾರಿಗಳು ನವೀನ ಚೀನವನ್ನು ಒಪ್ಪುವಂತೆ, ಆ ಮೇಲೆ ಕ್ಷೇಮಮಂಡಲದಲ್ಲಿ ಈ ಕದನದ ಕೊನೆಯಾಗುವಂತಹ ಗೊತ್ತುವಳಿಯನ್ನು ಸ್ವೀಕರಿಸುವಂತೆ, ಮತ್ತು ಚೀನ ಮೊದಲಾದ ರಾಷ್ಟ್ರಗಳೊಡನೆ ಸಂಧಾನದ ಮಾತುಗಳನ್ನಾಡುವಂತೆ ಮನವೊಲಿಸಲಿಕ್ಕೆ ಈ ರಾಷ್ಟ್ರಗಳು ಪ್ರಯತ್ನವನ್ನು ಮಾಡಿದವು. ಆದರೆ ಅದೆಲ್ಲ ವಿಫಲವಾದುದನ್ನು ಕಂಡು, ಮತ್ತು ಆ ಬಗೆಯ ವಿಫಲತೆಗೆ ಕೆಲವು ಶಾಶ್ವತ ಸದಸ್ಯರಾಷ್ಟ್ರಗಳ ವಿಶಿಷ್ಟಾಧಿಕಾರವು ಕಾರಣವಾಗಿದ್ದುದನ್ನು ಅರಿತು, ಜಿನೀವಾದಲ್ಲಿ ಒಂದು ಪ್ರತ್ಯೇಕವಾದ ಸಮ್ಮೇಲನವನ್ನು ಈ ರಾಷ್ಟ್ರಗಳು ಕೂಡಿಸಿದವು. ಸಂಯುಕ್ತ ರಾಷ್ಟ್ರಸಂಘದ ಉದ್ದೇಶಗಳನ್ನು ಈಡೇರಿಸಲಿಕ್ಕೆ ಸಂಘದ ಸಭೆಗಳಲ್ಲಿ ಸಾಧ್ಯವಾಗದ ಮೂಲಕ, ಅದನ್ನು ಬಿಟ್ಟು ಹೊರಗೆ ತತ್ಸಂಬಂಧದ ವಿಷಯಗಳನ್ನು ಚರ್ಚಿಸಿ, ಪ್ರಪಂಚದ ಜನಮತವನ್ನು ಅದಕ್ಕೆ ಪೋಷಕವಾಗುವಂತೆ ಮಾರ್ಪಡಿಸಿ, ಸಂಘದ ಧ್ಯೇಯವು ಕೈಗೂಡುವಂತಹ ಯೋಜನೆಯೊಂದನ್ನು ನಿರ್ದಿಷ್ಟಗೊಳಿಸಿ, ಅದನ್ನು ಸಂಘದ ಮುಖಾಂತರವಾಗಿಯೇ ಕಾರ್ಯರೂಪಕ್ಕೆ ತಂದು ಸಂಯುಕ್ತ ರಾಷ್ಟ್ರಸಂಘದ ಪ್ರತಿಷ್ಠೆಯನ್ನು ಹೆಚ್ಚಿಸಬೇಕು ಎಂಬುದೇ ಈ ಸಮ್ಮೇಳನದ ಅಭಿಪ್ರಾಯವಾಗಿತ್ತು.

ಈ ಸಂದರ್ಭದಲ್ಲಿ ಭಾರತವು ಒಂದು ಅಭೂತಪೂರ್ವ ಮತ್ತು ಅನುಕರಣೀಯ ಕಾರ್ಯದ ಹೊಣೆಯನ್ನು ಅಂಗೀಕರಿಸಿತು. ಜಿನೀವಾದಲ್ಲಿ

ಜರುಗಿದ ಸಮ್ಮೇಲನಕ್ಕೆ ನವೀನ ಚೀನದ ಪ್ರತಿನಿಧಿಗಳೇ ನೇತಾರರಾದವರು ಆಗಮಿಸಿದ್ದು ಅಲ್ಲಿ ಕೋರಿಯದ ಕದನವನ್ನು ನಿಲ್ಲಿಸುವ ಮತ್ತು ಶಸ್ತ್ರವಿರಾಮವಾಗಿ ಸಂಧಿಯನ್ನು ಮಾಡಿಕೊಳ್ಳುವ ನಿರ್ಣಯವು ಮನ್ನಣೆಯನ್ನು ಪಡೆಯಿತು. ಮತ್ತು ಈ ಸಂಧಿಯ ವಿವರಗಳು ನಿಶ್ಚಿತವಾಗುವಾಗ್ಗೆ ಅದರ ಮೇಲ್ವಿಚಾರಣೆಯನ್ನು ಮಾಡುವ ಹೊಣೆಯು ಭಾರತಕ್ಕೆ ಒಪ್ಪಿಸಲಾಯಿತು. ಮೊದಲು ಸಂಯುಕ್ತ ರಾಷ್ಟ್ರಸಂಘದ ಧ್ಯೇಯದಂತೆ, ಅದರ ಹೊರಗಿನಿಂದಾದರೂ ಅಡ್ಡಿಯಿಲ್ಲ, ಸಾಧಿಸುವಂತೆ ಈ ಸಮ್ಮೇಳನವನ್ನು ಜರುಗಿಸಲಿಕ್ಕೆ ಮತ್ತು ಅದು ಯಶಸ್ವಿಯಾಗಿ ಪರಿಣಮಿಸುವಂತೆ ಪ್ರಯತ್ನಿಸಲಿಕ್ಕೆ ಕಾರಣವಾದ ಭಾರತವು, ಶಾಂತಿಯ ಸಂರಕ್ಷಣೆಗಾಗಿ ಶಾಂತಿಪಾಲಕಕಾರ್ಯವನ್ನು ಕೈಕೊಳ್ಳಲಿಕ್ಕೆ ಸಂತೋಷದಿಂದ ಸಿದ್ಧವಾಯಿತು.

ಇಂತಹ ಶಾಂತಿಸನ್ನಾಹವು ಪ್ರಪಂಚದ ಇತಿಹಾಸದಲ್ಲಿಯೇ ಅಪರಿಚಿತವಾದುದು; ಬೇರೆ ನಾಡುಗಳನ್ನು ಆಕ್ರಮಿಸಲಿಕ್ಕೆ ಸೋತದೇಶಗಳನ್ನು ಪ್ರವೇಶಿಸಲಿಕ್ಕೆ ಸಾಮರ್ಥ್ಯವಿಲ್ಲದ ರಾಷ್ಟ್ರಗಳ ಮೇಲೆ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಲಿಕ್ಕೆ ತಮ್ಮ ಸೇನಾಬಲವನ್ನು ಉಪಯೋಗಿಸುವುದು ಜಗತ್ತಿನ ರಾಷ್ಟ್ರಗಳಿಗೆ ಗೊತ್ತಿದ್ದ ರೂಢಿ. ಆದರೆ ಯುದ್ಧದಿಂದ ಜರ್ಜರಿತವಾದ ಒಂದು ರಾಷ್ಟ್ರದಲ್ಲಿ ಸಂಧಾನದ ಮಾತುಗಳು ನಡೆಯುವಂತೆ, ಜೀವನದ ಹಂಗನ್ನು ತೊರೆದು ಹೋರಾಡುವ ವಿಶ್ವದ ಎರಡು ಪಕ್ಷಗಳಲ್ಲಿ ಮಧ್ಯಸ್ಥಿಕೆಯು ಜರುಗುವಂತೆ, ಎಲ್ಲರೂ ಅತ್ಯಂತ ನೆಚ್ಚಿನಿಂದ ಸ್ವೀಕರಿಸಿದ ವಿಶ್ವಸಂಸ್ಥೆಯ ಆದರ್ಶವು ಸತ್ಕೃತಿಯನ್ನು ಪಡೆಯುವಂತೆ, ಶಾಂತಿಯ ವಾತಾವರಣವನ್ನು ನಿರ್ಮಿಸುವದಕ್ಕಾಗಿ ಭಾರತವು ಒಪ್ಪಿಸಿಕೊಂಡ ಈ ಕಾರ್ಯಭಾರವು ಇಡಿಯ ವಿಶ್ವದ ಚರಿತ್ರೆಗಳಲ್ಲಿಯೇ ಶಾಶ್ವತವಾದ ಗೌರವಕ್ಕೆ ಪಾತ್ರವಾಗುವಂತಹದು. ಕೆಲವು ರಾಷ್ಟ್ರಗಳು ಭಾರತವೇ ಮೊದಲಾದ ರಾಷ್ಟ್ರಗಳು ನವೀನ ಚೀನ ಮತ್ತು ರಶಿಯದಂತಹ ಸಾಮ್ಯವಾದೀ ಆಡಳಿತಗಳಿಗೆ ಮನಸೋತು, ಪ್ರಪಂಚಸಂಸ್ಥೆಯ ಪ್ರತಿಭಟನೆಯನ್ನು ಮಾಡುತ್ತಿರುವವು ಎಂಬ ದೋಷಾರೋಪಣೆಯನ್ನು ಮಾಡಿದರೂ ಅಲ್ಪಾವಧಿಯಲ್ಲಿಯೇ ಭಾರತದ ಶಾಂತಿಸೇನೆಯು ಕೋರಿಯದಲ್ಲಿ ಗೈದ ಅದ್ಭುತರಮ್ಯವಾದ ಕಾರ್ಯವನ್ನು ಕಂಡು ಭಾರತದ ಉದ್ದೇಶದ ವಿಷಯವಾಗಿ ತುಸು ಸಂಯಮದಿಂದ ಮಾತನಾಡತೊಡಗಿದವು. ಪೂರ್ವಾಗ್ರಹದಿಂದ

ದೂಷಿತವಾಗಿ ಜಗತ್ತಿನ ಪ್ರಬಲರಾಷ್ಟ್ರಗಳ ಗುಂಪುಗಳು ತಮ್ಮ ಮುತ್ಸದ್ದಿ ತನವೇ ಮೇಲು ಎಂಬ ಹೆಮ್ಮೆಯಲ್ಲಿ ವಿಶ್ವಶಾಂತಿಯನ್ನು ಆಹುತಿಮಾಡಿಸು ವದಕ್ಕೂ ಹೇಸದ ಸ್ಥಿತಿಯಲ್ಲಿದ್ದಾಗ್ಗೆ ಭಾರತವು ತನ್ನ ಉದಾತ್ತ ಪರಂಪರೆಯ ಮೇರೆಗೆ ವಿಶ್ವಸಂಸ್ಥೆಯ ಲೋಕಪ್ರಿಯತೆಯು ಹೆಚ್ಚುವಂತಹ ಅಪೂರ್ವವಾದ ಕಾರ್ಯವನ್ನು ಕೈಕೊಂಡಿತು.

ಈ ಪ್ರಸಂಗದಿಂದ ಒಂದೆರಡು ವಿಶಿಷ್ಟ ವಿಷಯಗಳು ಜನರ ಅವಗಾಹ ನೆಗೆ ಬಂದಿರುತ್ತವೆ. ಮೊದಲನೆಯದಾಗಿ ಹಿಂದೆ ಇದ್ದ ರಾಷ್ಟ್ರಸಂಗವುವು ಆಗಿನ ರಾಜಕೀಯ ಪರಿಸ್ಥಿತಿಗೆ ಅನುರೂಪವಾಗಿ ಮತ್ತು ಅಂದಿನ ಕಾರ್ಯಾಧಿ ಕಾರಿಗಳ ಮೂಲಕ ಹೆಚ್ಚಾಗಿ ಬ್ರಿಟಿಶ್ ಜನರ ಸೊತ್ತು ಎಂಬ ಅಭಿಪ್ರಾಯವು ಪ್ರಚಲಿತವಾಗಿತ್ತು; ಆದರೆ ಸಂಯುಕ್ತ ರಾಷ್ಟ್ರಸಂಘವು ಜನ್ಮವೆತ್ತುವಷ್ಟರಲ್ಲಿ ಪ್ರಪಂಚದಲ್ಲಿ ಇಂತಹದೊಂದೇ ರಾಷ್ಟ್ರದ ಪ್ರತಿಷ್ಠೆಯು ಅಲ್ಲಿ ನಡೆಯ ಬಹುದು ಎಂಬಂತಹ ಸಂಭವವು ಉಳಿಯಲಿಲ್ಲ. ಇತ್ತ ವರ್ಚಸ್ಸಿನ ವರ್ಜ್ಯವಾಗಿ ಎಲ್ಲ ವಿಷಯಗಳು ಸಂಯುಕ್ತ ರಾಷ್ಟ್ರಸಂಘದ ತಾಮ್ರ ಪಟದಲ್ಲಿ ನಿರ್ದಿಷ್ಟವಾದ ಉಜ್ವಲವಾದ ತತ್ವಗಳ ಮೇರೆಗೆ ನಡೆಯುವಂತಹ ಪ್ರಸಂಗವೂ ಪ್ರಾಪ್ತವಾಗಲಿಲ್ಲ. ಅದರ ಬದಲಾಗಿ ವಿಶ್ವದ ರಾಷ್ಟ್ರಗಳಲ್ಲಿ ಎರಡು ಪಡೆ ಗಳಾಗಿ ಕೇವಲ ಅರ್ಹತೆಯ ದೃಷ್ಟಿಯಿಂದ ಯಾವುದೊಂದು ಸಮಸ್ಯೆಯ ಪರಿಹಾರವೂ ಆಗುವಂತೆ ಅನುವು ಉಂಟಾಗಲಿಲ್ಲ. ವಿಶ್ವಸಂಸ್ಥೆಯ ಉನ್ನತ ವಾದ ಧ್ಯೇಯಗಳು ಎಲ್ಲಿಯೋ ಉಳಿದು ಶಾಬ್ದಿಕ ಆಡಂಬರದಲ್ಲಿಯೋ, ಪ್ರಭಾವದ ಮೋಹಕ್ಕೊಳಗಾಗಿಯೋ ಆ ಸಂಗಡಗಳು ಒಬ್ಬರನ್ನೊಬ್ಬರು ಪ್ರತಿಬಂಧಿಸುತ್ತ ಯಾವುದೊಂದು ಪ್ರಶ್ನೆಯ ಚರ್ಚೆಯೂ ಅಲ್ಲಿ ಸುಗಮ ವಾಗಿ ಸಾಗುವಂತಹ ಸೌಲಭ್ಯವು ಉಳಿಯಲಿಲ್ಲ. ಆದರೆ ಈ ಬಗೆಯ ಪ್ರಯತ್ನದಿಂದ ವಿಶ್ವಸಂಸ್ಥೆಯು ಪ್ರಮುಖ ರಾಷ್ಟ್ರಗಳ ಕುಸ್ತಿಯ ಕಣವೂ ಅಲ್ಲ, ಆಟದ ಬಯಲೂ ಅಲ್ಲ; ಅದು ಎಲ್ಲ ರಾಷ್ಟ್ರಗಳ ಹಿತವನ್ನು ಕಾಪಾಡ ಲಿಕ್ಕೆಂದು ವಿಶ್ವದಲ್ಲಿ ಶಾಂತಿಯನ್ನು ಪಾಲಿಸುವ ಹೊಣೆಯುಳ್ಳದ್ದಾಗಿರುವದ ರಿಂದ, ಆ ಬಗೆಯ ಪ್ರಯತ್ನವನ್ನು ಸಾಗಿಸಲಿಕ್ಕೆ ಹಿರಿಯ ರಾಷ್ಟ್ರಗಳಂತೆ ಕಿರಿಯ ರಾಷ್ಟ್ರಗಳಿಗೂ ಅಧಿಕಾರ, ಅವಕಾಶ ಮತ್ತು ಅರ್ಹತೆಗಳಿರುತ್ತವೆ ಎಂಬುದು ಸ್ಪಷ್ಟವಾಯಿತು.

ಎರಡನೆಯದಾಗಿ ಸಂಯುಕ್ತ ರಾಷ್ಟ್ರಸಂಘವು ಕಾಲಗತಿಯ ಪರಿಣಾಮ ವಾಗಿ ಅಸ್ತಿತ್ವದಲ್ಲಿ ಬಂದ ಬದಲಾವಣೆಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕೇ ಹೊರತು, ಎಂದೋ ಒಂದು ಕಾಲದಲ್ಲಿ ಹಾಕಿಟ್ಟ ನಿಯಮ ಮತ್ತು ನಿಬಂಧನೆ ಗಳನ್ನು ಚಾಚೂ ಕಣ್ಣುಕಟ್ಟಿಕೊಂಡು ಅನುಸರಿಸುವದು ಉಚಿತವಲ್ಲ ಎಂಬ ಮಾತನ್ನು ಎಲ್ಲ ರಾಷ್ಟ್ರಗಳ ದೃಷ್ಟಿಗೆ ಈ ಸಂದರ್ಭವು ತಂದು ತೋರಿಸಿತು. ಯಾವುದೊಂದು ಸಂಘ-ಸಂಸ್ಥೆಯನ್ನು ಸುಲಭ ರೀತಿಯಲ್ಲಿ ನಡೆಯಿಸ ಬೇಕಾದರೆ ಅದಕ್ಕೆ ನಿಯಮ-ನಿರ್ಬಂಧಗಳು ಅಗತ್ಯ ಎಂಬ ಮಾತಿನಲ್ಲಿ ತಥ್ಯಾಂಶವಿದೆ; ಆದರೆ ಒಂದು ಸಮಯಕ್ಕೆ ಉಚಿತವೆಂದು ಕಂಡ ಆ ರೀತಿ ಮತ್ತು ನೀತಿಗಳು ಶಾಶ್ವತವಾಗಿ ಅಷ್ಟೇ ಪರಿಣಾಮಕಾರಕ ಆಗಬಹುದು ಎಂದು ಭಾವಿಸುವದು ತಪ್ಪಾಗುವದು. ಹಿಂದಿನ ಕಾಲದಲ್ಲಿ ಪ್ರಪಂಚದ ಎಲ್ಲ ಪ್ರಾಬಲ್ಯವು ಯುರೋಪಖಂಡದೊಳಗಿನ ರಾಷ್ಟ್ರಗಳದಾಗಿತ್ತು; ಐದೂ ಖಂಡಗಳೊಳಗಿನ ಭೂಮಿಯನ್ನು ತಮ್ಮ ತಮ್ಮೊಳಗೆ ಹಂಚಿಕೊಂಡು ಸಾಮ್ರಾಜ್ಯಗಳನ್ನು ನಡೆಯಿಸುತ್ತಿದ್ದ ಆ ರಾಷ್ಟ್ರಗಳ ರಾಜಕೀಯವೆಂದರೆ ವಿಶ್ವದಲ್ಲಿಯ ಬಲಾಬಲಗಳನ್ನು ಸಮತೋಲವಾಗಿ ಹಿಡಿಯುವದೇ ಆಗಿತ್ತು. ಅಂತೆಯೆ ಒಂದು ಪಕ್ಷದಲ್ಲಿ ಇಂದು ಕಾಣುವ ರಾಷ್ಟ್ರವು ಮರುದಿನ ಎರಡೂ ಪಕ್ಷಗಳ ತೂಕವನ್ನು ಸರಿಪಡಿಸಲಿಕ್ಕೆಂದು ಇನ್ನೊಂದು ಪಕ್ಷದಲ್ಲಿ ಕಾಣುತ್ತಿತ್ತು. ಆದರೆ ಇಂದು ಸಾಮ್ರಾಜ್ಯವಾದ, ಸಾಮಂತವಾದ ಮತ್ತು ಉಪನಿವೇಶವಾದಗಳು ನಿರ್ನಾಮವಾಗುತ್ತಿದ್ದರೂ ಬಂಡವಲುವಾದ ಮತ್ತು ಸಾಮ್ಯವಾದ ಎಂಬ ಎರಡು ಪಂಗಡಗಳಲ್ಲಿ ಪರಿವರ್ತನೆಯನ್ನು ಹೊಂದಿವೆ. ಇಂತಹ ಪರಿಸ್ಥಿತಿಯಲ್ಲಿ ಹೊಸದಾಗಿ ಸ್ವಾತಂತ್ರ್ಯವನ್ನು ಗಳಿಸಿಕೊಂಡು, ಸ್ವಪ್ರಯತ್ನದಿಂದ ಮತ್ತು ಸ್ವಂತದ ಪ್ರೇರಣೆಯಂತೆ ತನ್ನ ಭವಿತವ್ಯವನ್ನು ಮಾರ್ಪಡಿಸಿಕೊಳ್ಳಬೇಕು ಎಂದು ಹವಣಿಸುತ್ತಿದ್ದ ರಾಷ್ಟ್ರಗಳು, ಪ್ರಪಂಚ ಶಾಂತಿಯ ರಕ್ಷಣೆಗಾಗಿ ತಮ್ಮ ಕಾಣಿಕೆಯನ್ನು ಸಲ್ಲಿಸಲಿಕ್ಕೆ ಆತುರರಾಗಿರ ದಿದ್ದರೂ ಸಿದ್ಧವಾಗಿರುತ್ತವೆ. ಅಂತೆಯೇ ಕೇವಲ ಎರಡು ಪಕ್ಷಗಳಲ್ಲಿ ಪ್ರಪಂಚ ವನ್ನು ಹರಿದು ಹಂಚಿ ಉಳಿದ ರಾಷ್ಟ್ರಗಳು ನಿಷ್ಪ್ರಯೋಜಕ ಎಂದು ಭಾವಿಸು ವದು ಸರಿಯೆನಿಸುವದಿಲ್ಲ. ಕಾಲಕ್ಕೆ ತಕ್ಕ ಪರಿವರ್ತನೆಯು ರೂಪು ಗೊಂಡಾಗ್ಗೆ ಆ ಸ್ಥಿತ್ಯಂತರವನ್ನು ನಾವು ಗಮನಿಸಲಿಕ್ಕೇ ಬೇಕು ಎಂಬ

ಮಾತಿನ ಸತ್ಯತೆಯನ್ನು, ಆ ಸತ್ಯದ ಸಾರ್ಥಕತೆಯನ್ನು ವಿಶದವಾಗಿ ಈ ಸನ್ನಿವೇಶವು ತೋರಿಸಿಕೊಟ್ಟಿತು.

ಅದರಂತೆಯೇ ಇನ್ನೊಂದು ಅಸಾಧಾರಣವಾದ ಪಾಠವನ್ನು ಈ ಸಂದರ್ಭದಿಂದ ಪ್ರಪಂಚವು ಕಲಿತಂತಾಯಿತು; ಅದೆಂದರೆ ಸೈನ್ಯವನ್ನು ಶಾಂತಿಪಥಕವನ್ನಾಗಿ ಉಪಯೋಗಿಸಿದ ರೀತಿ. ಶಾಂತಿಯನ್ನು ಸ್ಥಾಪಿಸುವದೆಂದರೆ ಶತ್ರುವನ್ನು ನಾಶಗೊಳಿಸುವದು, ಸಂಧಾನವನ್ನು ಮಾಡಿಕೊಳ್ಳುವದೆಂದರೆ ಶಸ್ತ್ರಾಸ್ತ್ರಗಳ ಬಲವನ್ನು ಪ್ರದರ್ಶಿಸುವದು, ಎಂಬ ಹಿಂದಿನ ಕಾಲದ ರೀತಿಗೆ ವಿರುದ್ಧವಾಗಿ ಸೇನೆಯನ್ನು ಮತ್ತು ಶಸ್ತ್ರಗಳನ್ನು ಶಾಂತಮಯ ವಾತಾವರಣವು ಹಬ್ಬುವಂತೆ ಸಹಾಯವನ್ನು ನೀಡುವದಕ್ಕಾಗಿ, ಎಂಬ ಹೊಸನೋಟವನ್ನು ಈ ಸಂದರ್ಭವು ಪ್ರಪಂಚಕ್ಕೆ ಬೀರಿತು. ಶಾಂತಿಯನ್ನು ಸ್ಥಾಪಿಸುವದೆಂದರೆ ಯುದ್ಧದಲ್ಲಿ ಜಯವನ್ನು ಸಂಪಾದಿಸಿಯೇ, ವೈರಿಗಳಾದವರವನ್ನು ಎದುರಿಸುವದೆಂದರೆ ಸೈನ್ಯ ಮತ್ತು ಶಸ್ತ್ರಬಲಗಳನ್ನು ಹೆಚ್ಚು ಮಾಡಿಕೊಂಡನಂತರ, ಸಂಧಾನಕ್ಕೆ ಒಪ್ಪುವದೆಂದರೆ ಸೇನಾ ಬಲವನ್ನು ಬೆಳೆಯಿಸಿಕೊಳ್ಳುವ ಕಾರಣದಿಂದ ಮಾತ್ರ ಎಂಬ ಹಿಂದಿನ ಶತಮಾನದ ರಾಜನೀತಿಗೆ ವಿರುದ್ಧವಾಗಿ ಇಂದಿನ ಧ್ಯೇಯವು ಸೈನ್ಯವನ್ನು ಸೇವಾಪಥಕವನ್ನಾಗಿ ಪರಿವರ್ತಿಸಿದುದಾಗಿದೆ.

ವಿಶ್ವಸಂಸ್ಥೆಯ ನಿರ್ಮಾಣವು ಈ ಶತಮಾನದ ಅಂತರ್‍ರಾಷ್ಟ್ರೀಯ ಸಂಘಟನೆಯಲ್ಲಿಯ ಕ್ರಾಂತಿಕಾರಕ ವಿಷಯವಾದಂತೆಯೇ ಆ ಸಂಸ್ಥೆ ಆದರ್ಶ ಮತ್ತು ಉದ್ದೇಶಗಳು ಚಿರಸ್ಥಾಯಿಯಾದ ಫಲವನ್ನು ನೀಡುವಂತೆ ಮಾಡಿದ ಈ ಪ್ರತಿಭಟನೆಯ ಪರಿವರ್ತನೆಗಳು ಅಷ್ಟೇ ಗಾಂಭೀರವಾಗಿವೆ; ಅಷ್ಟೇ ಉಪಯುಕ್ತ ಆಗಿವೆ. ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಹೇಗೆ ನಾವು ಸರಿಸಮಾನರು ಎಂಬ ಉದಾತ್ತವಾದ ದೃಷ್ಟಿಯಿಂದ ನಡೆಯುವದು ಅಗತ್ಯವಾಗಿದೆಯೋ ಹಾಗೆಯೇ ರಾಜಕಿಯ ಕ್ಷೇತ್ರದಲ್ಲಿಯೂ ಪ್ರತಿಯೊಂದು ರಾಷ್ಟ್ರವು ಅಷ್ಟೇ ಗೌರವಕ್ಕೆ ಪಾತ್ರವಾಗಿರುವದು ಎಂಬ ವಿಚಾರವನ್ನು ಇಂದು ಈ ಸಂಸ್ಥೆಯ ಮುಖಾಂತರ ನಾವು ತಿಳಿದುಕೊಳ್ಳಬೇಕಾಗಿದೆ.



# ೫. ಮನೋರಥಕ್ಕೆ ಯತ್ನಾಶ್ವಗಳು

ಸಂಯುಕ್ತ ರಾಷ್ಟ್ರಸಂಘವು ಮನುಷ್ಯನ ಅತ್ಯುಚ್ಚವಾದ ಮನೋರಥ. ಶತಕಾನುಶತಕಗಳಿಂದ ಮಾನವನು ತನಗೆ ಅತ್ಯಂತ ಉದಾತ್ತ ಮತ್ತು ಉನ್ನತ ಎನಿಸುವಂತಹ ವಿಚಾರಗಳನ್ನು ರಾಜನೈತಿಕ ಸಂಬಂಧವನ್ನು ಸುಗಮ ಗೊಳಿಸುವ ಈ ಸಂಘಟನೆಯಲ್ಲಿ ಪವಣಿಸಿದ್ದಾನೆ. ಆದರೆ ಈ ಮನೋರಥ ವನ್ನು ಮುಂದೆ ಸಾಗಿಸಿ ಅದರಲ್ಲಿ ಶಾಂತಿಯ ಪ್ರತಿಷ್ಠಾಪನೆಯಾಗುವಂತೆ ಮಾಡುವ ವಿಷಯದಲ್ಲಿ ಆತನಿಗೆ ಸಾಕಷ್ಟು ಯಶಸ್ಸು ಇನ್ನೂ ಪ್ರಾಪ್ತವಾಗಿಲ್ಲ. ಕಾರಣಾಂತರದಿಂದ ಯುದ್ಧ ಪ್ರಸಂಗದಲ್ಲಿ ತೋರಿಸುವ ಹಗೆತನಕ್ಕಿಂತ ಆ ಹೆಚ್ಚಿನ ವೈರತ್ವವನ್ನು ಶಾಂತವಾತಾವರಣದಲ್ಲಿ ತಳೆಯುವದೊಂದು ಮಾನವನ ವಿಚಿತ್ರ ಸ್ವಭಾವವೆಂದೇ ಹೇಳಬಹುದು. ಅದರಂತೆಯೇ ಶತ್ರು ಗಳನ್ನು ಸದೆಬಡಿಯುವ ಕಾರ್ಯದ ಧ್ಯೇಯಕ್ಕಾಗಿ ಹೇಗೆ ಒಕ್ಕಟ್ಟು ಸಾಧಿಸು ವದೋ ಹಾಗೆ, ವೈರಿಗಳು ನಿರ್ನಾಮವಾದನಂತರ, ಶಾಂತಿ— ಸುಭಿಕ್ಷ— ಸಮಾನತೆಗಳು ಜಗತ್ತಿನಲ್ಲಿ ತಲೆದೋರುವಂತೆ ಮಾಡುವ ವಿಧಾಯಕ ಕಾರ್ಯದಲ್ಲಿ ಐಕ್ಯವು ಕಂಡು ಬರುವದಿಲ್ಲ.

ಈ ಬಗೆಯ ಆಭಾಸಕ್ಕೆ ಕೆಲವರು ಸಂಯುಕ್ತ ರಾಷ್ಟ್ರಸಂಘದ ಸಂವಿ ಧಾನವು ದೋಷದಿಂದ ತುಂಬಿರುವದೇ ಕಾರಣ ಎಂದು ಹೇಳುತ್ತಿದ್ದರೆ, ಇನ್ನೂ ಇತರರು ಅದು ಮಾನವ ಸ್ವಭಾವದ ಒಂದು ವಿಲಕ್ಷಣರೂಪ ಅಥವಾ ಸ್ವಾರ್ಥ, ಎಂಬ ವಿವರಣೆಯನ್ನು ಕೊಡುತ್ತಾರೆ. ಯಾವ ಉದ್ದೇಶ ಗಳಿಗಾಗಿ ವಿಶ್ವಸಂಸ್ಥೆಯ ಸ್ಥಾಪನೆಯಾಗಿರುವದೋ ಅದರ ಮುಖ್ಯಾಂಶವೇ ಕಾರ್ಯರೂಪಕ್ಕಿಳಿಯಲೊಲ್ಲದು ಎಂಬ ವಸ್ತು—ಸ್ಥಿತಿಯನ್ನು ಮಾತ್ರ ಎಲ್ಲರೂ ಒಪ್ಪಬೇಕಾಗಿದೆ. ಒಮ್ಮೆ ಈ ಬಗೆಯ ನ್ಯೂನತೆಯು ಕಂಡು ಬಂದಿತೆಂದರೆ ಅದನ್ನು ಸರಿಪಡಿಸುವದು ಸುಲಭ ಎಂದು ಕೆಲವರು ವಾದಿಸಬಹುದುದು, ಭಾವಿಸಿರಬೇಕು. ಆದರೆ ಜಾಗತಿಕ ರಾಜನೀತಿಯ ರಂಗದಲ್ಲಿ ಈಗ ಬೆಳೆದು ನಿಂತಿರುವ ಸಮಸ್ಯೆಗಳನ್ನು ಪರೀಕ್ಷಿಸಿ ನೋಡಿದರೆ ಈ ಮಾತು ಆಡಲಿಕ್ಕೆ ಎಷ್ಟು ಸಹಜವಾಗಿ ತೋರುವದೋ ಅಷ್ಟು ಆಚರಿಸಲಿಕ್ಕೆ ಕಠಿಣವಾದುದು ಎಂಬುದೂ ಸ್ಪಷ್ಟವಾಗುವದು. ಇಡಿಯ ಪ್ರಪಂಚವು ತಮ್ಮ ವಿಚಾರ



೧೯೫೩ ರಲ್ಲಿ ಸಂಯುಕ್ತರಾಷ್ಟ್ರಸಂಘದ ಅಧ್ಯಕ್ಷಸ್ಥಾನವನ್ನಲಂಕರಿಸಿದ
ಭಾರತೀಯ ಮಹಿಳೆಯರಾದ
ಶ್ರೀಮತಿ ವಿಜಯಲಕ್ಷ್ಮೀ ಪಂಡಿತರು

(ಯು. ರಾ. ಸ. ಕೃಪೆಯಿಂದ)

ಪ್ರಣಾಲಿಯ ಸಹಾಯದಿಂದ ಮಾತ್ರ ಉದ್ಧಾರವಾಗಬಹುದು ಎಂದು ಒಂದು ಪಂಗಡವು ಸಾರುತ್ತಿದ್ದರೆ, ಇಂದು ಕಾಣುವ ಎಲ್ಲ ಆರ್ಥಿಕ-ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳಿಗೆ, ಪರಿಹಾರವನ್ನು ಒದಗಿಸುವದು ತಮ್ಮ ಧ್ಯೇಯವಾದ್ದರಿಂದ ಮಾತ್ರ, ಎಂದು ಇನ್ನೊಂದು ಪಂಗಡದವರು ಘೋಷಿಸುತ್ತಿದ್ದಾರೆ. ಈ ಬಗೆಯ ವಾದ ವಿವಾದದಲ್ಲಿ ಪ್ರಚಲಿತ ಪ್ರಶ್ನೆಯು ಹಾಗೆಯೆ ಉಳಿದಿರುವದಲ್ಲದೆ ಅದರಿಂದ ತೊಳಲಾಟಕ್ಕೆ ಗುರಿಯಾದ ಜನರು ಮತ್ತಷ್ಟು ಕಂಗೆಡುತ್ತಿದ್ದಾರೆ, ಎಂಬ ಮಾತು ಮಾತ್ರ ನಿಜ.

ಎರಡನೆಯ ಮಹಾಯುದ್ಧವು ಮುಕ್ತಾಯ ಹೊಂದಿದ ನಂತರ ಐತಿಹಾಸಿಕ ಘಟನೆಗಳ ಮೂಲಕ ಪ್ರಪಂಚದ ಪ್ರಮುಖ ರಾಷ್ಟ್ರಗಳಲ್ಲಿ ಎರಡು ಪಕ್ಷಗಳಾದರೂ ಆ ಪರಿಸ್ಥಿತಿಯನ್ನು ಹದಗೆಡಿಸಲಿಕ್ಕೆ ಕೆಲವು ಪ್ರಮಾಣದಲ್ಲಿ ಸಂಯುಕ್ತ ರಾಷ್ಟ್ರಸಂಘದ ಸಂವಿಧಾನವೂ—ಅದರಲ್ಲಿ ವಿಶಿಷ್ಟವಾಗಿ ಕ್ಷೇಮ ಮಂಡಲದ ರಚನೆಯು-ಕಾರಣವಾದುದರಲ್ಲಿ ಯಾವ ಸಂಶಯವೂ ಇಲ್ಲ. ಯುದ್ಧವನ್ನು ಗೆಲ್ಲಲಿಕ್ಕೆ ಅಯ್ದು ಪ್ರಮುಖರಾಷ್ಟ್ರಗಳ ಐಕ್ಯವೆ ಕಾರಣವಾದುದು ನಿಜ; ಮುಂದೆ ಪ್ರಪಂಚದಲ್ಲಿ ಮತ್ತೆ ಯುದ್ಧವು ಜರುಗದಂತೆ ಮಾಡಲಿಕ್ಕೂ ಈ ಅಯ್ದು ರಾಷ್ಟ್ರಗಳು ಬಹ್ವಂಶದಲ್ಲಿ ಸಮರ್ಥವಾಗಿರುವವು ಎಂಬ ವಿಷಯದಲ್ಲಿಯೂ ತಥ್ಯವಿದೆ. ಆದರೆ ವಿಶ್ವಶಾಂತಿಯು ಕೇವಲ ಆ ಅಯ್ದು ರಾಷ್ಟ್ರಗಳ ವಿಶಿಷ್ಟ ಅಧಿಕಾರಕ್ಕೆ ಮತ್ತು ಶಾಶ್ವತ ಸ್ಥಾನಬಲಕ್ಕೆ ಅಧೀನವಾಗಿರಬೇಕು ಎಂದು ಹೇಳುವದು ಧಾರ್ಷ್ಟ್ಯದ ಮಾತೆನಿಸಬಹುದು. ಯಾವುದೇ ಒಂದು ಚಿಕ್ಕ ವಿಷಯವು ಕ್ಷೇಮಮಂಡಲದ ಸಭೆಯಲ್ಲಿ ಚರ್ಚೆಗೆ ಬಂದಿರಲಿ ಅದನ್ನು ಶಾಶ್ವತರಾಷ್ಟ್ರ ಪಂಚಕರಲ್ಲಿ ಯಾರಾದರೊಬ್ಬರು ತಮ್ಮ ವಿಶಿಷ್ಟ ಅಧಿಕಾರದ ಅಸ್ತ್ರದಿಂದ ಸಾಯಗೊಳಿಸಬಹುದು ಎಂಬ ಭೀಕರ ಪರಿಸ್ಥಿತಿಯು ಈಗಿನ ಸಂವಿಧಾನದ ಮೇರೆಗೆ ಪ್ರಾಪ್ತವಾಗಿದೆ.

ಅಂತಹ ವಿದ್ಯಮಾನಗಳನ್ನು ತಪ್ಪಿಸುವ ಉದ್ದೇಶದಿಂದ, ಕೆಲವು ರಾಷ್ಟ್ರಗಳು ಸಂಯುಕ್ತ-ರಾಷ್ಟ್ರಸಂಘದ ಘಟನೆಯು ರೂಪುಗೊಳ್ಳುತ್ತಿರುವಾಗ್ಗೆ ಒಂದೆರಡು ಸುಧಾರಣೆಗಳನ್ನು ಮತ್ತು ತಿದ್ದುಪಡೆಗಳನ್ನು ಸೂಚಿಸಿ, ಅಂಗೀಕರಿಸುವಂತೆ ಮಾಡಿದವು. ಅದರಲ್ಲಿ ಹೆಚ್ಚಾಗಿ ಕ್ಷೇಮಮಂಡಲದ ಸದಸ್ಯತ್ವವನ್ನು ಕೇವಲ ಐದು ರಾಷ್ಟ್ರಗಳ ಶಾಶ್ವತ ಪ್ರತಿನಿಧಿಗಳಿಗಷ್ಟೆ ಮೀಸಲಾಗಿರಿಸದೆ

ಅನುವರ್ತಿಯಾಗಬಹುದಾದ ಬೇರೆ ಕೆಲವು ರಾಷ್ಟ್ರಗಳು ಸದಸ್ಯತ್ವವನ್ನು ಪಡೆಯುವಂತೆ ಮಾಡಿದುದು ವಿಶಿಷ್ಟ ಪ್ರಗತಿಯ ಲಕ್ಷಣವಾಗಿದೆ. ಮುಂದೆ ಆ ಸದಸ್ಯರಿಗೆ ಮತಾಧಿಕಾರವನ್ನು ಗೊತ್ತು ಪಡಿಸುವಾಗ್ಗೆ ಸಾಮಾನ್ಯ ವಿಷಯಗಳ ಚರ್ಚೆಯಲ್ಲಿ ನಿರ್ಣಯವಾಗಬೇಕಾದರೆ ಏಳು ಜನ ಪ್ರತಿನಿಧಿಗಳ ಮತಗಳು ಮತ್ತು ವಿಶಿಷ್ಟ ಸಮಸ್ಯೆಯ ನಿರ್ಣಯವನ್ನು ಸ್ವೀಕರಿಸಬೇಕಾದರೆ ಶಾಶ್ವತ ಸದಸ್ಯರಾಷ್ಟ್ರಗಳ ಒಪ್ಪಿಗೆ ಅಗತ್ಯ, ಎಂಬ ನಿಬಂಧನೆಯನ್ನು ನಿರ್ಧರಿಸಿದುದು ಅತ್ಯಂತ ಧೂರ್ತ ಮತ್ತು ಮುತ್ಸದ್ದಿತನದ ವಿಷಯವಾಗಿದೆ. ಆದರೆ ಇಷ್ಟಾಗಿಯೂ ಇದು ಒಂದು ಒಪ್ಪಂದದ ಪರಿಣಾಮ ಎಂಬ ಮಾತನ್ನು ನಾವು ಈ ಸಂದರ್ಭದಲ್ಲಿ ಮರೆಯುವಂತಿಲ್ಲ. ಪ್ರಮುಖ ಪ್ರಶ್ನೆಗಳ ಪರ್ಯಾಲೋಚನೆಗೆ ಪ್ರಬಲರಾಷ್ಟ್ರಗಳಷ್ಟೆ ಅರ್ಹತೆಯನ್ನು ಪಡೆದಿರಬೇಕು ಎಂಬ ಆ ರಾಷ್ಟ್ರಗಳ ಸ್ಪಷ್ಟವಾದಕ್ಕೂ, ಶಾಂತಿಸ್ಥಾಪನೆಯಂತಹ ಜೀವಾಳದ ಪ್ರಮೇಯವಿದ್ದಾಗ್ಗೆ ಪ್ರಪಂಚದ ಎಲ್ಲ ರಾಷ್ಟ್ರಗಳು ಸಮಾನ ಅಧಿಕಾರಗಳನ್ನು ಪಡೆದಿರಬೇಕು ಎಂಬ ಮಿಕ್ಕರಾಷ್ಟ್ರಗಳ ಆದರ್ಶವಾದಕ್ಕೂ ಆದ ಒಡಂಬಡಿಕೆಯ ಫಲವೇ ಈಗ ಪ್ರಚಲಿತವಾಗಿರುವ ನಿಯಮವಾಗಿದೆ. ಆದರೆ ಇಂತಹ ನಿಯಂತ್ರಿತ ವಿಶಿಷ್ಟ ಅಧಿಕಾರವು ಕೂಡ ಆಚರಣೆಯಲ್ಲಿ ಭೀಕರ ಆಕಾರವನ್ನೇ ತಳೆದಮೂಲಕ ಕಾರ್ಯರೂಪದಲ್ಲಿ ಅವನ್ನು ಇನ್ನೂ ಸಂಕುಚಿತಗೊಳಿಸಬೇಕು ಎಂಬ ಆಶಯದ ಮಾತುಗಳು ಅಲ್ಲಲ್ಲಿ ಕೇಳಬರತೊಡಗಿದವು. ಅದರಪರಿಣಾಮವಾಗಿ ವಿಶಿಷ್ಟ ಅಧಿಕಾರವುಳ್ಳ ಯಾವುದೊಂದು ರಾಷ್ಟ್ರವು ತನ್ನ ಅಸಮ್ಮತಿಯನ್ನು ಚರ್ಚೆಗೆಬಂದ ವಿಷಯದಬಗೆಗೆ ವ್ಯಕ್ತಗೊಳಿಸುವದಿದ್ದರೂ, ಅದಕ್ಕೆ ಸರ್ವಾನುಮತವು ದೊರೆಯಬೇಕು, ಎಂಬ ಅಪೇಕ್ಷೆಯಿಂದ, ಆ ಚರ್ಚೆಯು ನಡೆದ ಸಭೆಯಿಂದ ನಿಷ್ಕ್ರಮಣ ಮಾಡಿದರಾಯಿತು, ಎಂಬ ಹೊಸ ಪರಂಪರೆಯನ್ನು ರೂಢಿಯಲ್ಲಿ ತರಲಾಯಿತು. ವಿಶಿಷ್ಟ ಅಧಿಕಾರವನ್ನು ನಿರ್ಮೂಲಗೊಳಿಸಬೇಕು ಎಂಬ ಪ್ರಯತ್ನದಲ್ಲಿ ಇದೊಂದು ಮಹತ್ವದ ಗೆಲುವು !

ಈ ವಿಷಯದ ಪ್ರತ್ಯಕ್ಷ ಆಚರಣೆಯು ಶಾಂತಿಯ ಸಂರಕ್ಷಣೆಯ ಕಾರ್ಯದಲ್ಲಿ ಅತ್ಯಂತ ಹಿತಕರವಾಗಿದೆ. ಅದರಲ್ಲಿಯೂ ಭಾರತಕ್ಕೆ ಈ ಸುಧಾರಣೆಯ ಸಂಪ್ರದಾಯದಿಂದ ವಿಶೇಷ ಸಮಾಧಾನವಾಗಿದೆ. ಯಾವುದೊಂದು ರಾಷ್ಟ್ರವು ಶಾಂತಿಯನ್ನು ಭಂಗಗೊಳಿಸಿರುವದು ಅದನ್ನು ದಂಡಿಸ

ಬೇಕು ಎಂಬ ಚರ್ಚೆಯು ಕ್ಷೇಮಮಂಡಲದಲ್ಲಿ ನಡೆದಾಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳು ಎರಡು ಪ್ರಮುಖರಾಷ್ಟ್ರಗಳ ಗುಂಪುಗಳಲ್ಲಿ ಕಂಡು ಬರುತ್ತಿದ್ದರೂ, ಆ ಚರ್ಚೆಯ ನಿರ್ಣಯವು ನಡೆದಾಗ್ಗೆ ಆಕ್ರಮಣವನ್ನು ಮಾಡಿದ, ಇಲ್ಲವೆ ಅನ್ಯ ಕಾರಣದಿಂದ ಶಾಂತಿಭಂಗಕ್ಕೆ ಕಾರಣವಾದ, ರಾಷ್ಟ್ರವನ್ನು ದಂಡಿಸುವ ಮೊದಲು ಅದಕ್ಕೆ ತನ್ನ ವಾದ ಸಮರ್ಥನೆಯನ್ನು ಮಾಡಿಕೊಳ್ಳಲಿಕ್ಕೆ ಇಲ್ಲವೆ ಆಪ್ತಾಲೋಚನೆಯಲ್ಲಿ ಆ ತೊಡಕಿನ ಪರಿಸಮಾಪ್ತಿಯನ್ನು ಮಾಡಿಕೊಳ್ಳಲಿಕ್ಕೆ ಸಂಧಾನ, ಪಂಚಾಯತಿ, ಮಧ್ಯಸ್ತಿಕೆ ಮತ್ತು ಒಪ್ಪಂದಗಳ ಮೂಲಕ ಸೌಲಭ್ಯಗಳನ್ನು ಒದಗಿಸಿಕೊಡುವ, ಸಂಯುಕ್ತ ರಾಷ್ಟ್ರಸಂಘದ ಅಭ್ಯಾಸವು ಪರಮಕಲ್ಯಾಣದ ವಿಷಯವಾಗಿದೆ. ಶತ್ರುವಿಗೆ ಆಗಲಿ, ನಮ್ಮ ಸಂಗಡ ಭಿನ್ನಾಭಿಪ್ರಾಯವಿದ್ದ ಬೇರೆ ಪಕ್ಷಕ್ಕೇ ಆಗಲಿ, ಮುಕ್ತ ಕಲಹವು ಜರುಗಬೇಕಾದ ಮೊದಲು ಅದನ್ನು ತಪ್ಪಿಸಲಿಕ್ಕೆ ಸಕಲಪ್ರಯತ್ನಗಳನ್ನು ಮಾಡಲು ಅವಕಾಶ ನೀಡುವ ರೂಢಿಯನ್ನು ಭಾರತವು ತನ್ನ ಸ್ವಾತಂತ್ರ್ಯ ಸಮರದಲ್ಲಿ ರೂಪಿಸಿಕೊಂಡು ಬಂದಿಲ್ಲವೆ? ಅದೇ ಮಾರ್ಗದ ಅನುಸರಣೆಯು ಈ ಅಂತರಾಷ್ಟ್ರೀಯ ಸಂಬಂಧದಲ್ಲಿ ನಡೆದುದನ್ನು ಕಂಡು ಭಾರತೀಯನಿಗೆ ಸಂತಸವಾಗದಿರದೆ?

ಸಂಯುಕ್ತ ರಾಷ್ಟ್ರಸಂಘದ ಉದ್ದೇಶಗಳು ಸುಲಭವಾಗಿಯೂ, ಸರಲವಾಗಿಯೂ ಸಾಧಿಸಬೇಕಾದರೆ ಕ್ಷೇಮಮಂಡಲದ ಶಾಶ್ವತ ಸದಸ್ಯರಿಗಿರುವ ವಿಶಿಷ್ಟ ಅಧಿಕಾರಗಳನ್ನು ತಗ್ಗಿಸಬೇಕು ಎಂಬ ವಾದ ವೈಖರಿಯನ್ನು ಪ್ರಪಂಚದ ಕೆಲವು ರಾಷ್ಟ್ರಗಳ ಪ್ರತಿನಿಧಿಗಳು ಬೆಳೆಸುತ್ತಲಿದ್ದ ಸಂಗತಿಯು ಹಿಂದೆಬಂದಿದೆ. ಆದರೆ ಈ ವಿಶಿಷ್ಟ ಅಧಿಕಾರವನ್ನು ಕಸಿದುಕೊಳ್ಳುವ ಮೊದಲು ಅದು ಅಸ್ತಿತ್ವದಲ್ಲಿ ಏಕೆ ಬಂದಿತು ಮತ್ತು ಅದನ್ನು ಆ ಕಾಲಕ್ಕೆ ಪೂರ್ಣ ನಾಶಗೊಳಿಸದೆ ನಿಯಂತ್ರಣಗೊಳಿಸಿರುವದೇಕೆ? ಎಂಬ ಚರಿತ್ರೆಯ ಭಾಗವನ್ನು ನೆನಪಿಗೆ ತಂದುಕೊಳ್ಳುವದು ಉಪಯುಕ್ತವೆನಿಸಬಹುದು. ಸಂಯುಕ್ತ ರಾಷ್ಟ್ರಸಂಘವು ಸ್ವಯಂ ಸಂತೋಷದಿಂದ ಒಟ್ಟುಗೂಡಿರುವದಕ್ಕಾಗಿ ಕಟ್ಟಿಕೊಂಡ ಒಂದು ಸಂಸ್ಥೆ. ಅದರಲ್ಲಿ ಸದಸ್ಯರಾಗಿರಲಿಕ್ಕೆ ಮತ್ತು ಆ ಸದಸ್ಯತ್ವದ ನಿಯಮ-ನಿಬಂಧನೆಗಳಿಗೆ ಆಧೀನರಾಗಿ ನಡೆಯಲಿಕ್ಕೆ ಬೇರೆ ಯಾವ ಒತ್ತಾಯವಾಗಲಿ ನಿಯಂತ್ರಣವಾಗಲಿ ಇರದೆ, ಕೇವಲ ರಾಷ್ಟ್ರಗಳ ಸ್ವಯಂಪ್ರೇರಣೆ ಮತ್ತು

ಸಂಯುಕ್ತ ಜೀವನಕ್ಕಾಗಿ ಅವುಗಳ ಸಹಕಾರಗಳು ಮಾತ್ರ ಕಾರಣವಾಗಿವೆ. ಬಲಪ್ರಯೋಗದ ಸಾಧನದಿಂದಾಗಲಿ, ವಿಶ್ವಾಧಿಪ ಎಂಬ ಅಧಿಕಾರದ ದರ್ಪದಿಂದಾಗಲಿ ತಪ್ಪುಮಾಡಿದ ರಾಷ್ಟ್ರವನ್ನು ದಂಡಿಸಿ, ಇಲ್ಲವೆ ಆರ್ಥಿಕ ಮತ್ತು ಸಾಮಾಜಿಕ ಬಹಿಷ್ಕಾರದಿಂದ ಅದನ್ನು ಸದೆಬಡೆದು ದಾರಿಗೆ ತರುವಂತಹ ಉಪಾಯ ಯೋಜನೆಯು ವಿಶ್ವಸಂಸ್ಥೆಯ ಸದ್ಯದ ವಸ್ತುಸ್ಥಿತಿಯಲ್ಲಿ ಅಸಾಧ್ಯವಾಗಿರುತ್ತದೆ. ಶಾಂತಿಪೂರ್ಣ ಮಾರ್ಗದಿಂದ ನಾವು ಎಲ್ಲ ರಾಷ್ಟ್ರಗಳಲ್ಲಿ ಸೌಹಾರ್ದವನ್ನು ಉಂಟುಮಾಡಬೇಕು ಎಂಬ ಆದರ್ಶದ ಮಾತುಗಳನ್ನು ಎಷ್ಟೆ ಉತ್ಸಾಹದಿಂದ ಹೇಳಿದರೂ ಅದನ್ನು ಯಶಸ್ವಿಯಾಗಿ ಕೈಗೂಡಿಸಲಿಕ್ಕೆ ಪ್ರಪಂಚದಲ್ಲಿ ಪ್ರಬುದ್ಧವಾಗಿರುವ ರಾಷ್ಟ್ರಗಳ ಅನುಮತಿ, ಸಹಕಾರ ಮತ್ತು ಸಹಾಯಗಳ ಆವಶ್ಯಕತೆಯು ಇರುವದು ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ. ಅಂತೆಯೆ ಆಗಿನ ಸಂದರ್ಭದಲ್ಲಿ ಪ್ರಬಲ ರಾಷ್ಟ್ರಗಳಿಗೆ ಪ್ರತಿಷ್ಠೆಯ ಸ್ಥಾನವನ್ನು ಕೊಡಬೇಕಾಗಿ ಬಂದಿತು. ಆದರೆ ಅದನ್ನು ಶಾಶ್ವತಗೊಳಿಸಬೇಕು ಎಂಬ ಅರ್ಥವು ಮಾತ್ರ ವಿಚಾರಣೀಯ.

ಈ ಬಗೆಯ ಸ್ಥಿತ್ಯಂತರವನ್ನು ಬಯಸುವವರು ಕ್ರಮಬದ್ಧವಾದ ಕಾರ್ಯವನ್ನು ಕೈಕೊಳ್ಳಬೇಕು ಎಂಬ ಮಾತನ್ನು ನಾವು ಲಕ್ಷ್ಯದಲ್ಲಿಡಬೇಕು. ಶಾಂತಿಯನ್ನು ಕಾಪಾಡಲಿಕ್ಕೆ ಶ್ರೀಮಂತರ ಸಹಾಯವು ಅಗತ್ಯ ಎಂಬ ವಿಷಯವನ್ನು ಇಂದಿನವರೆಗೆ ನಾವು ಎತ್ತಿ ತೋರಿಸುತ್ತಿದ್ದರೂ ಇನ್ನು ಮುಂದೆ ಆ ಬಗೆಯ ಮನೋಭಾವವನ್ನೆ ಪರಿವರ್ತಿಸುವಂತೆ ಹೆಣಗುವದು ಇಂದು ಅಗತ್ಯವಾಗಿದೆ. ಧನ, ಅಧಿಕಾರ, ಸಾಮರ್ಥ್ಯ, ಪ್ರತಿಷ್ಠೆ ಮೊದಲಾದ ವಿಷಯಗಳು ಕೇವಲ ಸ್ವಾರ್ಥಕ್ಕಾಗಿ ಇರದೆ ಪರೋಪಕಾರಕ್ಕಾಗಿ ಇರುತ್ತವೆ. ಎಂಬ ಮಾತನ್ನು ಈಗ ಅನೇಕ ಶತಕಗಳಿಂದ ನಾವು ಕೇಳುತ್ತ ಬಂದಿದ್ದರೂ ಆ ಸೌಕರ್ಯಗಳ ಪ್ರಯೋಗವನ್ನು ಸ್ವಂತದ ಲಾಭವನ್ನು ಹೆಚ್ಚಿಸಿಕೊಳ್ಳುವ ದೃಷ್ಟಿಯಿಂದ ಮಾಡದೆ, ಕೇವಲ ನಿರಪೇಕ್ಷಭಾವದಿಂದ ಜರುಗಿಸಬೇಕಾದ ಪ್ರಾಮಾಣಿಕತೆ ಇಂದು ಜಗತ್ತಿನಲ್ಲಿ ಒಡಮೂಡಬೇಕಾಗಿದೆ. ಅಂತೆಯೆ ಶಾಂತಿಯ ಸ್ಥಾಪನೆ ಮತ್ತು ಸಂರಕ್ಷಣೆಗಾಗಿ, ಸೈನ್ಯಬಲ-ಶಸ್ತ್ರಬಲಗಳನ್ನು ನೀಡಲಿಕ್ಕೆ ಯಾವ ಪ್ರಬಲರಾಷ್ಟ್ರವಾದರೂ ಸಿದ್ಧವಾಗಬಹುದು; ಆದರೆ ಆ ಉದ್ದೇಶವನ್ನು ಶಾಂತಮಯವಾಗಿಯೂ, ನಿಃಸ್ವಾರ್ಥಬುದ್ಧಿಯಿಂದಲೂ

ಕೈಗೂಡಿಸಲಿಕ್ಕೆ ಮುಂದೆ ಬರುವಂತಹ ಸನ್ನಿವೇಶವು ಇಂದು ಪ್ರಪಂಚದಲ್ಲಿ ಪ್ರಾಪ್ತವಾಗಬೇಕಾಗಿದೆ. ಇದು ಭಾರತವು ಕೋರಿಯಾ ಸಂಧಾನ ಪ್ರಕರಣದಲ್ಲಿ ವಹಿಸಿದ ಧ್ಯೇಯ ಮತ್ತು ಆಚರಣೆಗೆ ತಂದ ಧೋರಣೆಯಿಂದ ವ್ಯಕ್ತವಾಗುವಂತಹ ವಿಷಯ. ಸೇನಾಬಲವನ್ನು ಶಾಂತಿದಲವನ್ನಾಗಿ ಮಾರ್ಪಡಿಸಿ ರಾಜನೀತಿಯ ತತ್ವಗಳಲ್ಲಿಯೆ ಒಂದು ಕ್ರಾಂತಿಯನ್ನು ಮಾಡಿದಂತೆ ಆಗಿದೆ. ಅದಕ್ಕೆ ಮೂಲವಾದ ಕಾರಣ ಪ್ರಪಂಚ ಸಂಸ್ಥೆಯು ಆದರ್ಶದಲ್ಲಿ ಕೇವಲ ವಿಶ್ವಾಸವಿದ್ದುದರ ಪರಿಣಾಮವಲ್ಲ. ಅದನ್ನು ಸಪ್ರಮಾಣವಾಗಿ ಆಚರಣೆಯಲ್ಲಿ ತರಬೇಕೆಂದು ಮಾಡಿದ ಪ್ರಯತ್ನವಾಗಿದೆ. ಸಂಯುಕ್ತ ರಾಷ್ಟ್ರಸಂಘವು ಸ್ಥಾಪನೆಯಾಗಿ ಹತ್ತು ವರ್ಷಗಳ ಅವಧಿಯಲ್ಲಿ ಅದರ ಸಂವಿಧಾನದಲ್ಲಿ ತಿದ್ದುಪಡೆಯನ್ನು ಮಾಡುವ ಯೋಚನೆಯನ್ನು ಕೈಕೊಳ್ಳಬಹುದು ಎಂಬ ಸೌಲಭ್ಯವಿದೆ. ಆದರೆ ಆ ಬಗೆಯ ತಿದ್ದುಪಡೆಯನ್ನು ಶಾಬ್ದಿಕ ನಿಬಂಧನೆಗಳಲ್ಲಿ ತಂದುಕೊಳ್ಳುವದಕ್ಕಿಂತ ಕಾರ್ಯತಃ ಆಚರಣೆಯಲ್ಲಿ ತಂದು ಮೌಲಿಕವಾಗಿಯೆ ರಾಜಕೀಯ ಮನೋಭಾವದಲ್ಲಿ ಬದಲಾವಣೆಯನ್ನುಂಟು ಮಾಡಿದುದು ಶ್ಲಾಘನೀಯವಾಗಿದೆ. ಆದರೆ ಈ ಬಗೆಯ ಸೂಕ್ಷ್ಮ ಮತ್ತು ಅಪ್ರತ್ಯಕ್ಷ ಪ್ರಭಾವವನ್ನು ಭಾರತವು ಬೀರಿತೆಂದು ಸಂವಿಧಾನದಲ್ಲಿ ತಿದ್ದುಪಡೆಯನ್ನೆ ಮಾಡಲಾಗದು ಎಂದು ಯಾರೂ ತಿಳಿಯಬೇಕಾಗಿಲ್ಲ. ರಾಜಕೀಯ ಸ್ವಾತಂತ್ರ್ಯ, ಆರ್ಥಿಕ ವಿಕಾಸ, ಮತ್ತು ಸಾಮಾಜಿಕ ಸಮಾನತೆಗಳ ದೃಷ್ಟಿಯಿಂದ ಪ್ರಪಂಚದ ಎಲ್ಲ ರಾಷ್ಟ್ರಗಳು ಮತ್ತು ಅವುಗಳ ಪ್ರಜೆಗಳು ಒಂದೇ ಎಂದು ಭಾವಿಸಬೇಕು, ಎಂಬ ಘೋಷಣೆಯನ್ನು ಸಂಯುಕ್ತ ರಾಷ್ಟ್ರಸಂಘವು ಮಾಡಿತು. ಈ ಆದರ್ಶವನ್ನು ನಾವು ಅತ್ಯಂತ ವಿಶ್ವಾಸದಿಂದ ಕಂಡುಕೊಂಡೆವು. ಆದರೆ ಪ್ರಪಂಚದ ಪ್ರಮುಖ ರಾಷ್ಟ್ರಗಳಲ್ಲಿ ಇಬ್ಬಣಗಳನ್ನು ಕಲ್ಪಿಸಿಕೊಡಲಿಕ್ಕೆ ಕಾರಣವಾಯಿತು ಈ ವಿಶಿಷ್ಟ ಅಧಿಕಾರದ ಸೂತ್ರ. ಯಾವುದೊಂದು ಮಹತ್ವದ ನಿರ್ಣಯವನ್ನು ಕೈಕೊಳ್ಳಬೇಕಾದರೂ ರಾಷ್ಟ್ರಪಂಚಕದ ಸಮ್ಮತಿ ಅವಶ್ಯ ಎಂಬ ವಿಶಾಲ ದೃಷ್ಟಿಯಿಂದ ಈ ವಿಶಿಷ್ಟ ಅಧಿಕಾರಕ್ಕೆ ಮಿಕ್ಕ ಸದಸ್ಯರಾಷ್ಟ್ರಗಳು ತಮ್ಮ ಒಪ್ಪಿಗೆಯನ್ನು ನೀಡಿದವು; ಆದರೆ ಅದವರ ಬದಲಾಗಿ ಚಿಕ್ಕ-ಪುಟ್ಟ ವಿಷಯಗಳ ಚರ್ಚೆಯನ್ನು ಮುಂಡಿಸಲಿಕ್ಕೆ ಕೊಡತ, ಆತಂಕವಾಗಿ ಪರಿಣಮಿಸಿತು—ಈ ವಿಶಿಷ್ಟ ಅಧಿಕಾರದ ಅಸ್ತ್ರ.

ವಿಶ್ವಸಂಸ್ಥೆಯ ಜನ್ಮವಾಗಿ ಕೆಲವೇ ವರ್ಷಗಳಲ್ಲಿ ಅದರ ಯಾವ ಸಭೆಯಲ್ಲಿಯೂ ತಡೆಯಿಲ್ಲದೆ ನಡೆಯುವಂತಹ ಸೌಲಭ್ಯ ಉಳಿಯಲಿಲ್ಲ. ಅಂತೆಯೆ ಅದರಲ್ಲಿ ಆಮೂಲಾಗ್ರ ಪರಿವರ್ತನೆಯಾಗುವದು ಅಪರಿಹಾರ್ಯವೆನಿಸಿತು.

ಆದರೆ ಈ ಪರಿವರ್ತನೆಯನ್ನು ವಿಶಿಷ್ಟ ಅಧಿಕಾರವನ್ನು ಹಿರಿಯ ರಾಷ್ಟ್ರಗಳು ಪಡೆಯದಂತೆ ಮಾಡುವದರಲ್ಲಿ ಹೆಚ್ಚಿನ ಸಾರ್ಥಕತೆಯಿಲ್ಲ ಎಂಬ ಮಾತನ್ನು ರಾಜನೀತಿಯ ರಹಸ್ಯವನ್ನು ಬಲ್ಲವರು ಸುಲಭವಾಗಿ ಗುರುತಿಸಬಹುದು. ಇಂದಿನ ರಾಜಕೀಯ ಪರಿಸ್ಥಿತಿಯಲ್ಲಿ, ಯುದ್ಧಸಾಮಗ್ರಿಯ ಉತ್ಪಾದನವು ಅಪರಿಮಿತವಾಗಿ ಬೆಳೆಯುತ್ತಿದ್ದಾಗ್ಗೆ ಮತ್ತು ದಿನದಿನಕ್ಕೆ ಹೊಸ ಹೊಸ ಮತ್ತು ಹೆಚ್ಚು ವಿಧ್ವಂಸಕ ಶಸ್ತ್ರಾಸ್ತ್ರಗಳ ನಿರ್ಮಾಣವಾಗುತ್ತಿದ್ದಾಗ್ಗೆ, ಪ್ರಬಲ ರಾಷ್ಟ್ರಗಳ ಈ ಅಧಿಕಾರವನ್ನು ಇಲ್ಲದಂತೆ ಮಾಡುವದರಿಂದ ಮಿಕ್ಕ ರಾಷ್ಟ್ರಗಳಿಗಾಗಲಿ, ಅಥವಾ ಇಡಿಯ ಪ್ರಪಂಚಕ್ಕೆ ಆಗಲಿ ಹೆಚ್ಚಿನ ಪ್ರಯೋಜನವಾಗಲಿಕ್ಕಿಲ್ಲ. ಅದರ ಬದಲಾಗಿ ಕ್ಷೇಮಮಂಡಲದಲ್ಲಿ ಸದಸ್ಯರಾಗಿರುವ ಎಲ್ಲ ರಾಷ್ಟ್ರಗಳಿಗೆ ಹೆಚ್ಚು ಸಾಮರ್ಥ್ಯ ಮತ್ತು ಗೌರವಗಳು ಪ್ರಾಪ್ತವಾಗುವಂತೆ ಮಾಡುವದೇ ಯೋಗ್ಯ. ಸಂಯುಕ್ತ ರಾಷ್ಟ್ರಸಂಘದ ಸದಸ್ಯತ್ವವು ಪ್ರತಿಯೊಂದು ರಾಷ್ಟ್ರಕ್ಕೆ ಸುಲಭವಾಗಿ ದೊರೆಯುವಂತೆ ಮತ್ತು ವಿಶ್ವಶಾಂತಿಯನ್ನು ಸಂರಕ್ಷಿಸುವ ಯೋಗ್ಯತೆಯು, ಶಸ್ತ್ರಾಸ್ತ್ರಗಳ ಬಲದಷ್ಟೇ, ನೈತಿಕ ಸಾಮರ್ಥ್ಯದಿಂದ ಪ್ರಾಪ್ತವಾಗುವಂತೆ ಮಾಡುವದು ಹೆಚ್ಚು ಫಲಪ್ರದವೆನಿಸಬಹುದು. ಈ ಬಗೆಯ ಕ್ರಾಂತಿಕಾರಕ ಬದಲಾವಣೆಯನ್ನು ತಂದುಕೊಳ್ಳಲಿಕ್ಕೆ ಸಾಕಷ್ಟು ಸಮಯವೂ, ಶಕ್ತಿಮೀರಿದ ಪ್ರಯತ್ನವೂ ಬೇಕು ಎಂಬ ಮಾತು ನಿಜ. ಆದರೆ ಮನಸ್ಸಿದ್ದಲ್ಲಿ ಮಾರ್ಗವಿದೆಯಷ್ಟೆ! ಪ್ರಬಲವಾದ ಮನೋರಥವು ನಮ್ಮದಾಗಿದ್ದರೆ ಅದಕ್ಕೆ ತಕ್ಕ ಯತ್ನಾಶ್ವಗಳನ್ನು ನಾವು ಹೂಡುವದು ಅಗತ್ಯವಾಗಿದೆ.

ಭಾರತವು ಸ್ವೀಕರಿಸಿ, ಅನುಸರಿಸುತ್ತಿರುವ, ಶಾಂತಿಯ ಕ್ಷೇತ್ರವನ್ನು ವಿಸ್ತರಿಸುವ ನೀತಿಯು ಇಂದು ವಿಶ್ವಸಂಸ್ಥೆಯ ಗೌರವವನ್ನು ಕಡಿಮೆ ಮಾಡದೆ, ಅದರ ಪ್ರಯೋಜನವು ಬೆಳೆಯುವಂತೆ ಸಹಾಯಕವಾಗಿರುತ್ತದೆ. ಭಾರತವು ಪವಿತ್ರವೆಂದು ಭಾವಿಸಿ, ಮೈಗೂಡಿಸಿಕೊಂಡ ಉದಾತ್ತ ತತ್ವಗಳನ್ನು ಸಂಯುಕ್ತ ರಾಷ್ಟ್ರಸಂಘವು ಪ್ರತಿಬಿಂಬಿಸುತ್ತಿದ್ದುದನ್ನು ಕಂಡು ಭಾರತಕ್ಕೆ ಸಮಾಧಾನದ ಮತ್ತು ಧೈರ್ಯದ ವಿಷಯವಾಗಿತ್ತು. ಆದರೆ ಪ್ರಪಂಚ

ಸಂಸ್ಥೆಯಲ್ಲಿ ಎರಡು ಪ್ರಬಲ ಪಕ್ಷಗಳು ನಿರ್ಮಾಣ ಹೊಂದಿದವು; ಇತ್ತ ಭಾರತವು ಅಲಿಪ್ತತೆಯ ನೀತಿಯನ್ನು ಮಾರ್ಪಡಿಸಿಕೊಂಡಿತು. ಮೊದಲ ನೆಯ ಪರಿಸ್ಥಿತಿಯಿಂದ ಭಾರತಕ್ಕೆ ವಿಶ್ವಸಂಸ್ಥೆಯ ಕಾರ್ಯರೂಪದಲ್ಲಿ ಅವಿಶ್ವಾಸ ಮತ್ತು ನಿರಾಶೆಯೆನಿಸಿದರೆ, ಭಾರತದ ಧೋರಣೆಯಿಂದ ಪ್ರಪಂಚದ ಪ್ರಮುಖ ರಾಷ್ಟ್ರಗಳಿಗೆ ಸಂಶಯ ಮತ್ತು ಅಸಮಾಧಾನಗಳು ಹುಟ್ಟಿಕೊಂಡವು. ಆದರೆ ವಿಶ್ವಸಂಸ್ಥೆಯ ಆದರ್ಶದಲ್ಲಿ ತೃಪ್ತಿ ಮತ್ತು ಆಸಕ್ತಿಯನ್ನು ಕಂಡ ಭಾರತವು ಆ ಸಂಸ್ಥೆಯ ಬಗ್ಗೆ ಯಾವಾಗಲೂ ಅಭಿಮಾನವನ್ನೇ ಇಟ್ಟುಕೊಂಡು ಅತ್ಯಂತ ಅನನುಕೂಲವಾದರೂ ಅದರ ಪ್ರಯತ್ನದಲ್ಲಿ ಶ್ರದ್ಧೆ ಮತ್ತು ನಿರ್ಣಯದಲ್ಲಿ ತಾಳ್ಮೆಯನ್ನು ವಹಿಸುತ್ತ ಮುಂದುವರೆಯಿತು. ಪಾಕಿಸ್ತಾನವು ಮಾಡಿದ ಆಕ್ರಮಣ ಮತ್ತು ದಕ್ಷಿಣ ಆಫ್ರಿಕೆಯು ಗೈಯುತ್ತಿರುವ ಅಪಚಾರ ಇವುಗಳ ವಿಷಯವಾಗಿ ಭಾರತವು ಸಂಯುಕ್ತ ರಾಷ್ಟ್ರಸಂಘದ ಧೋರಣೆಯನ್ನು ಅತೃಪ್ತಿಕರ, ಮತ್ತು ಪರಿಣಾಮವನ್ನು ನಿರಾಶಾಪೂರ್ಣ ಎಂದು ತಿಳಿದರೂ ವಿಶ್ವಸಂಸ್ಥೆಯ ಭವಿಷ್ಯದಲ್ಲಿ ಅನಾಸ್ಥೆಯನ್ನು ತಳೆಯಲಿಲ್ಲ. ವಿಶ್ವಸಂಸ್ಥೆಯು ಕೈಕೊಂಡ ಮಹತ್ಕಾರ್ಯದಲ್ಲಿ ತನ್ನ ಕಾಣಿಕೆಯನ್ನು ವಿಧಾಯಕವಾಗಿ ಸಲ್ಲಿಸುವ ಪ್ರಯತ್ನವನ್ನು ನಿಲ್ಲಿಸಲಿಲ್ಲ.

ಇಂತಹ ಕಾರ್ಯಕ್ರಮಗಳಲ್ಲಿ ರಾಷ್ಟ್ರಮಂಡಲದ (Common wealth) ಸ್ವರೂಪವನ್ನು ಬದಲಿಸಿ, ಅದರ ಸದಸ್ಯತ್ವವನ್ನು ಉಳಿಸಿಕೊಂಡು, ತನ್ಮೂಲಕ ವಿಶ್ವಶಾಂತಿಯ ಪ್ರತಿಪಾದನೆಗೆ ಸಮರ್ಥನೆಯು ದೊರೆಯುವಂತೆ ಭಾರತವು ಮಾಡಿದ ಕೆಲಸವು ಇತ್ತೀಚೆಗೆ ಪರಮಾದರವನ್ನು ಪಡೆಯುತ್ತಲಿದೆ. ಸ್ವಾತಂತ್ರ್ಯವು ಪ್ರಾಪ್ತವಾದ ಕೂಡಲೆ ಬ್ರಹ್ಮದೇಶದಂತೆ ಭಾರತವೂ ಬ್ರಿಟಿಶ್ ರಾಷ್ಟ್ರಮಂಡಲವನ್ನು ಬಿಟ್ಟು ಹೊರಗೆ ಬರಬೇಕು; ಅಂದರೆ ಮಾತ್ರ ಪ್ರಪಂಚದ ರಾಜಕೀಯ ಕ್ಷೇತ್ರದಲ್ಲಿ ಭಾರತವು ತನ್ನ ಉಚಿತವಾದ ಕಾಣಿಕೆಯನ್ನು ಸಲ್ಲಿಸಬಹುದು, ಮತ್ತು ಪ್ರಭಾವವನ್ನು ಬೀರಬಹುದು, ಎಂದು ಕೆಲವು ಭಾರತದ ರಾಜಕೀಯ ಪಕ್ಷಗಳು ಸೂಚಿಸಿದವು; ಟೀಕಿಸಿದವು; ಆದರೆ ಭಾರತವು ಅನುಸರಿಸಿದ ರಚನಾತ್ಮಕ ಧೋರಣೆಯೇ ಬೇರೆ. ಅತ್ಯಂತ ಸ್ನೇಹಭಾವದಿಂದ ಮತ್ತು ಗೌರವಪೂರ್ಣವಾಗಿ ತಮ್ಮ ಸ್ವಾಮಿತ್ವವನ್ನು ಬಿಟ್ಟುಕೊಟ್ಟು, ಭಾರತಕ್ಕೆ ಸ್ವಾತಂತ್ರ್ಯ ದೊರೆಯುವಂತೆ ಮಾಡಿದ, ಬ್ರಿಟಿಶ್

ಸರಕಾರ ಮತ್ತು ಪ್ರಜಾಕುಲವನ್ನು ವ್ಯರ್ಥವಾಗಿ ವಿರೋಧಿಸುವದೇಕೆ ಎಂಬ ವಿವೇಕವು ಭಾರತದ್ದಾಗಿದೆ. ಯಾವ ಜನರ ಅಥವಾ ಪಕ್ಷದ ಹಗೆತನವನ್ನೂ ನಾವು ನಿಷ್ಕಾರಣವಾಗಿ ಮಾಡಿಕೊಳ್ಳಬಾರದು, ಎಂಬುದೇ ಅದರ ಧೋರಣೆ ಯಾಯಿತು. ಈ ಸಂದರ್ಭದಲ್ಲಿ ಅಮೇರಿಕೆಯ ಬಂಡವಲುವಾದದ ಭೀಕರತೆ ಮತ್ತು ರಶಿಯದ ಸಾಮ್ಯವಾದದ ಸಂಕರತೆಗಳು ವಿಶ್ರಾಂತಿಯನ್ನು ಕದಡಲಿಕ್ಕೆ ಸಾಕಷ್ಟು ಕಾರಣವಾದ ಮೂಲಕ, ಸಂಯುಕ್ತ ರಾಷ್ಟ್ರಸಂಘಕ್ಕೆ ಅದರ ಉದಾತ್ತವಾದ ತತ್ವಗಳನ್ನು ನೆನಪುಮಾಡಿಕೊಡಲಿಕ್ಕೂ ಅದು ಮತ್ತು ಕರ್ತವ್ಯ ತತ್ಪರವಾಗುವಂತೆ, ಮಾಡಲಿಕ್ಕೂ ಒಂದು ಸಾಧನವು ಆವಶ್ಯಕವೆಂಬ ದೃಷ್ಟಿ ಯಿಂದ ಬ್ರಿಟಿಶ ರಾಷ್ಟ್ರಮಂಡಲದ ಮೂಲ ರೂಪವನ್ನು ಬದಲಿಸಿ, ರಾಷ್ಟ್ರ ಮಂಡಲವೆಂದು ಅದನ್ನು ಮಾರ್ಪಡಿಸಿಕೊಂಡು ತನ್ನ ಸ್ವಾತಂತ್ರ್ಯ ಹಾಗು ಗೌರವಗಳಿಗೆ ಕಳೆಬರುವಂತೆ ತನ್ನ ಸದಸ್ಯತ್ವವನ್ನು ಕಾಯ್ದುಕೊಂಡಿತು. ಭಾರತದ ಈ ಧೋರಣೆಯು ಇಂದು ಕಾರ್ಯಕಾರಿಯಾಗಿದೆ. ಜಗತ್ತಿನ ರಾಜಕೀಯ ರಂಗದಲ್ಲಿ ಆಗಾಗ ಏಳುತ್ತಿರುವ ಸಮಸ್ಯೆಗಳನ್ನು ಪರ್ಯಾಲೋಚಿಸಿ, ಮಾಡುತ್ತಿದ್ದ ರಾಷ್ಟ್ರಮಂಡಲದ ಸೂಚನೆಗಳನ್ನು ಮೊದಮೊದಲು ಉಪೇಕ್ಷಿಸುತ್ತಿದ್ದ ಸಂಯುಕ್ತ ರಾಷ್ಟ್ರಸಂಘವು ಇಬ್ಬಣಗಳಾಗಿ ಹೋರಾಡುತ್ತಿರುವ ಎರಡೂ ಪಕ್ಷಗಳಲ್ಲಿ ಬಿಕ್ಕಟ್ಟು ಬೆಳೆದು ಬಂದ ಸಮಯದಲ್ಲಿ ರಾಷ್ಟ್ರ ಮಂಡಲದ ಸಲಹೆಗಳು ಅತ್ಯಂತ ಸಂಪನ್ನವಾದ ಸ್ವಾಗತವನ್ನು ಪಡೆಯುತ್ತಿರುವದು ಭಾರತದ ಧೋರಣೆಯ ಫಲವಲ್ಲದೇ ಮತ್ತೇನು ?

ಈ ರೀತಿ ಸಂಯುಕ್ತ ರಾಷ್ಟ್ರಸಂಘದ ಸಭೆಗಳ ಹೊರಗೆ, ಪ್ರಪಂಚದ ಸಮಸ್ಯೆಗಳನ್ನು ಯೋಚಿಸಬಾರದು; ಅದರಿಂದ ವಿಶ್ವಸಂಘದ ಮಹತ್ವವು ಕಡಿಮೆಯಾಗುತ್ತದೆ, ಎಂಬ ಆಶಯದ ಉದ್ಗಾರಗಳನ್ನು ಕೆಲವರು ತೆಗೆದರೇನೋ ನಿಜ. ಆದರೆ ಪ್ರಪಂಚ ಸಂಸ್ಥೆಯಲ್ಲಿ ಯಾವ ವಿಷಯದ ಚರ್ಚೆಯೂ ನಡೆಯದಂತಹ ದಿಗ್ಬಂಧನವು ಗೋಚರಿಸುತ್ತಿದ್ದರೆ, ವಿಶ್ವ ಸಂಸ್ಥೆಯ ಆದರ್ಶದಲ್ಲಿ ಆಸಕ್ತಿಯಿದ್ದ ರಾಷ್ಟ್ರಗಳು ಮಾಡಬೇಕಾದರೂ ಏನು ! ಎಂಬುದು ಅದಕ್ಕಿಂತ ಮಹತ್ವದ ಅಂಶವಾಗಿದೆ. ಶಾಂತಿಯ ಕ್ಷೇತ್ರ ವನ್ನು ವಿಸ್ತರಿಸಲಿಕ್ಕೆ ಮತ್ತು ವಿಶ್ವಸಂಸ್ಥೆಯ ಗೌರವವು ಹೆಚ್ಚಾಗುವಂತೆ ಮಾಡಲಿಕ್ಕೆ ರಾಷ್ಟ್ರಮಂಡಲದಂತಹ ನಿಷ್ಪಕ್ಷ ಸಂಯೋಗವು ಹೆಚ್ಚು ಯಶಸ್ವಿ

ಯಾಗಬಹುದು, ಉಪಯುಕ್ತವೆನಿಸಬಹುದು. ಎಂಬುದು ಭಾರತದ ನಿಲುವೆ ಯಾಗಿದೆ.

ಕಾರಣವಿಲ್ಲದೆ ಯಾರ ವೈರವನ್ನೂ ಕಟ್ಟಿಕೊಳ್ಳದೆ ಎಲ್ಲರೊಡನೆ ಮಿತ್ರ ಭಾವದಿಂದಿರುವದು ಭಾರತದ ಪರಂಪರಾಗತ ರಾಜನೀತಿಯ ದ್ಯೋತಕವೇ ಆಗಿದೆ. ಪ್ರಪಂಚಸಂಸ್ಥೆಯ ಗುರಿಗಳು ಸಹಜವಾಗಿಯೂ, ಸುಲಭವಾಗಿಯೂ ಸಾಧಿಸುವಂತೆ, ಅದಕ್ಕೆ ಪೂರ್ವಭಾವಿಯಾಗಿ ಶಾಂತಿಯ ಕ್ಷೇತ್ರವು ಹೆಚ್ಚು ಹೆಚ್ಚು ವಿಸ್ತಾರಗೊಳ್ಳುವಂತೆ ಯೋಚಿಸುವದು; ಪ್ರಬಲ ರಾಷ್ಟ್ರಗಳ ಜಾಲದಲ್ಲಿ ಸಿಲುಕದೆ, ನಿರ್ಲಿಪ್ತ ಭಾವನೆಯಿಂದ ದೂರ ಉಳಿದು, ಅವುಗಳು ಮತ್ತು ವಿಶ್ವಸಂಸ್ಥೆಯು ತಮ್ಮ ದೃಷ್ಟಿಯಲ್ಲಿಟ್ಟುಕೊಂಡ ರಾಷ್ಟ್ರಕಲ್ಯಾಣದ ಕಾರ್ಯವನ್ನು ತಾತ್ಪೂರ್ತಿಕವಾಗಿ ಮರೆತರೆ ಅದರ ಸ್ಮರಣೆಯಾಗುವಂತೆ ಸ್ವಂತದ ಪ್ರಯತ್ನದಿಂದ ತೋರಿಸುವದು ಭಾರತದ ರಾಜನೀತಿಯ ಹಿರಿಯ ಅಂಶಗಳಾಗಿವೆ. ವಿಶ್ವಸಂಸ್ಥೆಯ ಸದಸ್ಯರಾಷ್ಟ್ರಗಳ ತತ್ವಪ್ರೇಮವು ಅಗಾಧವೂ ಅದ್ಭುತವೂ ಆಗಿರಬಹುದು; ಆದರೆ ಆ ಮನೋರಥಗಳಿಗೆ ತಕ್ಕ ಪ್ರಯತ್ನಗಳು ಅಲ್ಲಿ ಇರದಿದ್ದರೆ, ಇಡಿಯ ರಥವೆ ಜೀವನ ಯುದ್ಧರಂಗದಲ್ಲಿ ಮುಗ್ಗರಿಸಬಹುದು. ಅಂತಹ ಘೋರ ಪ್ರಸಂಗವು ಒದಗಿದರೆ, ಈ ಇಪ್ಪತ್ತು ಶತಮಾನಗಳಿಂದ, ಅದೇಕೆ ಅದಕ್ಕೂ ಪೂರ್ವಕಾಲದಿಂದ ಮಾನವನು ರಚಿಸಿಕೊಂಡು ಬಂದ ಉನ್ನತ ಸೌಧವು ಮಣ್ಣುಗೂಡಿದಂತಾಗುವದು, ಎಂಬ ಕಳವಳವು ಭಾರತದ ಈ ಧೋರಣೆಗೆ ಚಾಲನೆಯನ್ನು ಕೊಟ್ಟಿರುತ್ತದೆ. ಇದರಲ್ಲಿ ಯಾವ ಬಗೆಯ ಸ್ವಾರ್ಥದ ಆಟವೂ ಇಲ್ಲ; ಮೋಸದ ಮಾಟವು ಇಲ್ಲ.

ಇದೇ ಬಗೆಯ ನೀತಿಯು ದಕ್ಷಿಣಪೂರ್ವ ಏಶಿಯದ, ಮತ್ತು ಮಧ್ಯ ಏಶಿಯದ ರಾಷ್ಟ್ರಗಳ ಸಂಗಡ ಭಾರತವು ಇಟ್ಟುಕೊಂಡು ಬೆಳೆಯಿಸಿದ ಸೌಹಾರ್ದ ಮತ್ತು ಸ್ನೇಹಗಳ ನೆಲಗಟ್ಟಾಗಿದೆ. ಮೊದಲನೆಯದಾಗಿ ಆ ರಾಷ್ಟ್ರಗಳು ಪರಕೀಯ ಸತ್ತೆಯಿಂದ ಮುಕ್ತವಾಗಿ ತಮ್ಮ ರಾಷ್ಟ್ರಗಳಲ್ಲಿ ಶಾಂತಿಮಯ ಮತ್ತು ಪ್ರಗತಿಶೀಲ ಆಡಳಿತವು ಜರುಗುವಂತೆ ಮಾಡುವದು ಮತ್ತು ಅಂತರ್ರಾಷ್ಟ್ರೀಯ ಸಂಬಂಧದಲ್ಲಿ ಅವು ಯಾವುದೊಂದು ಪ್ರಬಲ ರಾಷ್ಟ್ರಗಳ ಪಕ್ಷಕ್ಕೂ ಒಳಪಡದೆ, ಸ್ವಂತ ಸಾಮರ್ಥ್ಯದಿಂದ ನಿಷ್ಪಕ್ಷಪಾತ ಮಾರ್ಗವನ್ನು ಅನುಸರಿಸುವಂತೆ ಮಾಡಿದುದು ಮತ್ತು ಮಾಡುತ್ತಿರುವದು ಅನೇಕ ದೃಷ್ಟಿ

ಯಿಂದ ಭಾರತದ ನೀತಿಯ ಹಿರಿಮೆಯನ್ನು ತೋರಿಸುತ್ತಿವೆ. ಆ ಆ ರಾಷ್ಟ್ರಗಳು ಸ್ವತಃದ ಪ್ರಯತ್ನದಿಂದ, ಮತ್ತು ಅನಾಸಕ್ತಿಯಿಂದ ನೀಡುವವರ ಸಹಾಯದಿಂದ, ಸ್ವತಂತ್ರವಾಗಿ ಆತ್ಮದರ್ಶನವನ್ನು ಮಾಡಿಕೊಳ್ಳುವಂತೆ ನೋಡಿಕೊಳ್ಳುವದು, ಇಡಿಯ ವಿಶ್ವದ ಈ ವರೆಗಿನ ರಾಜನೀತಿಯ ಚರಿತ್ರೆಯಲ್ಲಿಯೆ ಹೊಸದೊಂದು ಅಧ್ಯಾಯವಾಗಿದೆ, ಇಲ್ಲಿಯ ವರೆಗೆ ಸಹಾನುಭೂತಿಯೆಂದರೆ ನಂಬಿಕೊಂಡ ರಾಷ್ಟ್ರಗಳ ಸತ್ವವನ್ನು ಕಡಿಮೆ ಮಾಡುವದು, ಸಹಕಾರವೆಂದರೆ ತಮ್ಮ ಪ್ರಭುತ್ವವನ್ನು ಅವುಗಳ ಮೇಲೆ ಹೇರುವದು, ಮತ್ತು ಸಹಾಯವೆಂದರೆ ಅವರನ್ನು ಸಂಪೂರ್ಣವಾಗಿ ಶೋಷಿಸುವದು, ಎಂಬ ಅರ್ಥವೇ ಸಾಮಾನ್ಯವಾಗಿ ರಾಜಕಾರಣದಲ್ಲಿದ್ದ ಪರಿಪಾಠವಾಗಿದೆ. ಆದರೆ ಭಾರತದ ಇಂದಿನ ಧೋರಣವು ತಾನು ತನ್ನ ಪ್ರಯತ್ನದಿಂದ ಮುಕ್ತಿಯನ್ನು ಪಡೆದಂತೆಯೆ, ತಾನು ಸ್ವಯಂಪ್ರೇರಣೆಯಿಂದ ರಾಜನೀತಿಯನ್ನು ರೂಪಿಸಿಕೊಂಡಂತೆಯೆ, ತಾನು ತನ್ನ ಪ್ರಜಾಕೋಟಿಯ ಬೆಂಬಲದಿಂದ ತನ್ನ ವೈಶಿಷ್ಟ್ಯ ಮತ್ತು ವ್ಯಕ್ತಿತ್ವವನ್ನು ಕಾಪಾಡಿಕೊಳ್ಳುತ್ತಿರುವಂತೆಯೆ, ಅನ್ಯ ರಾಷ್ಟ್ರಗಳೂ ಮಾಡಿಕೊಳ್ಳಬೇಕು ಎಂಬದಾಗಿದೆ. ಪ್ರತಿಯೊಂದು ರಾಷ್ಟ್ರವು ಸ್ವಯಂಸಿದ್ಧವಾಗಿರಬೇಕು. ಅಧಿನಿರ್ಣಯದ ಮೇರೆಗೆ ತನ್ನ ಮಾರ್ಗ ಕ್ರಮಣವನ್ನು ಗೊತ್ತುಪಡಿಸಿಕೊಳ್ಳಬೇಕು ಎಂಬುದು ಭಾರತವು ಹೂಡಿದ ಕಾರ್ಯ ಯೋಜನೆಯಾಗಿದೆ. ಅಂತೆಯೆ ತಮ್ಮ ಮಟ್ಟಿಗೆ ತಾವು ಹೊಣೆಗಾರರಾದಂತೆ, ಅಂತರ್ರಾಷ್ಟ್ರೀಯ ವಿಷಯಗಳಲ್ಲಿ ಯಾವ ಪಕ್ಷದ ವರ್ಚಸ್ಸಿಗೂ ಈ ರಾಷ್ಟ್ರಗಳು ಒಳಗಾಗದೆ, ಅಲಿಪ್ತವಾಗಿದ್ದು ಪ್ರಪಂಚ ಸಂಸ್ಥೆಯು ಇಟ್ಟುಕೊಂಡ ಧ್ಯೇಯವನ್ನು ಸಾಧಿಸುವಂತೆ ಪ್ರಯತ್ನಿಸುವದಾಗಿದೆ. ಇದರ ಪರಿಣಾಮವಾಗಿಯೆ ಹೊಡೆದಾಡಲಿಕ್ಕೆ ಆತುರರಾಗಿರುವಂತೆ ತೋರುವ ವಿರುದ್ಧ ಪಕ್ಷಗಳನ್ನು ಬಿಟ್ಟು, ಸರಿಯಾದ ದಾರಿಯನ್ನು ತೋರಿಸಿಕೊಡುವಂತಹ ಶಾಂತಿಯ ಕ್ಷೇತ್ರವನ್ನು ನಿರ್ಮಿಸುವ ಮತ್ತು ವಿಸ್ತರಿಸುವ ಭಾರತದ ಧೋರಣೆಯು ಅನ್ಯಾದೃಶವಾಗಿದೆಯೆಂದೇ ಹೇಳಬಹುದು.

ಸಂಯುಕ್ತರಾಷ್ಟ್ರಸಂಘದ ಉದ್ದೇಶಗಳನ್ನು ಸಾರ್ಥಕಗೊಳಿಸುವಂತೆ ಈ ಬಗೆಯಾಗಿ, ನಡೆದ ಪ್ರಯತ್ನಗಳಲ್ಲಿ ಭಾರತವು ಸಾಕಷ್ಟು ಸಹಭಾಗಿಯಾಗಿದೆಯೇನೋ ನಿಜ. ಆದರೆ, ಭಾರತ ಮೊದಲಾದ ಕೆಲವು ರಾಷ್ಟ್ರಗಳಿಗೆ

ಅಲ್ಪ ಪ್ರಮಾಣದ ಯಶಸ್ಸು ಪ್ರಾಪ್ತವಾಗಿದ್ದರೂ ತಮಗೆ ನೇರವಾಗಿ ಸಂಬಂಧಿಸಿದ ಕೆಲವು ಜೀವಾಳದ ವಿಷಯಗಳಲ್ಲಿ ಸಂಯುಕ್ತ ರಾಷ್ಟ್ರಸಂಘದ ಏಕಮತವಾಗಿದ್ದರೂ ಅವುಗಳನ್ನು ಕಾರ್ಯಗತಮಾಡುವದಾಗಿಲ್ಲವಲ್ಲ? ಎಂದು ಕೆಲವರು ವಾದಿಸುತ್ತಾರೆ. ಅವರಲ್ಲಿಯೂ ವಿಶಿಷ್ಟವಾದ ದಕ್ಷಿಣ ಆಫ್ರಿಕದ ವರ್ಣಭೇದದ ಪ್ರಶ್ನೆ ಮತ್ತು ಗೋವಾ ದೀವ ದಮಣಗಳಲ್ಲಿ ಅಸ್ತಿತ್ವದಲ್ಲಿರುವ ಪೋರ್ಚುಗಾಲದ ಉಪನಿವೇಶಗಳ ಪ್ರಮೇಯಗಳನ್ನು ಅವರು ಎತ್ತಿ ತೋರಿಸುತ್ತಾರೆ.

ಈ ಎರಡು ವಿಷಯಗಳು ಸಾಮಾನ್ಯವಾಗಿ ಕಾಣುವಷ್ಟು ಸುಲಭವಾಗಿಲ್ಲ; ವರ್ಣದ್ವೇಷದ ಶಾಸನದ ವಿಷಯವಾಗಿ ತಮ್ಮ ನಿಷೇಧವನ್ನು ಪ್ರಕಟಗೊಳಿಸಿ, ಭಾರತೀಯರು ಸಂಯುಕ್ತರಾಷ್ಟ್ರ ಸಂಘದ ಸಭೆಯಲ್ಲಿ ನ್ಯಾಯವಾದ ಮಾರ್ಗದರ್ಶನಕ್ಕೆಂದು ಈ ಪ್ರಶ್ನೆಯನ್ನೊಯ್ದರು. ಅಲ್ಲಿಯ ಸಭೆಯು ಅಲ್ಪಕಾಲದ ನಂತರವಾದರೂ ಸ್ಪಷ್ಟವಾದ ಶಬ್ದಗಳಲ್ಲಿ ದಕ್ಷಿಣ ಆಫ್ರಿಕೆಯ ಸರಕಾರದ ಧೋರಣೆಯನ್ನು ಖಂಡಿಸುವ ಗೊತ್ತುವಳಿಯನ್ನು ಸರ್ವಾನುಮತದಿಂದ ಸ್ವೀಕರಿಸಿತು. ಆದರೆ ದಕ್ಷಿಣ ಆಫ್ರಿಕೆಯ ಧೋರಣದಲ್ಲಿ ಇದರಿಂದ ಎಂತಹ ಸ್ಥಿತ್ಯಂತರವೂ ಆಗಲಿಲ್ಲ. ಇಷ್ಟೇ ಅಲ್ಲ, ಯೋಚಿಸಿದ ಶಾಸನವನ್ನು ಆ ರಾಷ್ಟ್ರವು ಕಾರ್ಯರೂಪಕ್ಕಿಳಿಸಿಯೇಬಿಟ್ಟಿತು. ಈ ವಿಷಯವು ತಮ್ಮ ಒಳ ಆಡಳಿತಕ್ಕೆ ಸಂಬಂಧಪಟ್ಟ ಮಾತು, ಸಂಯುಕ್ತ ರಾಷ್ಟ್ರಸಂಘವು ತನ್ನ ತತ್ವಗಳ ಮೇರೆಗೆ ಈ ವಿಷಯದಲ್ಲಿ ಕೈಹಾಕಬಾರದು ಎಂದು ಸಾರಿತು.

ಅದರಂತೆಯೆ ಉಪನಿವೇಶನಗಳ ಸ್ಥಿತಿಯೂ ಇರುತ್ತದೆ. ಸಂಯುಕ್ತ ರಾಷ್ಟ್ರಸಂಘದಲ್ಲಿ ಇಂತಹ ಅಭಿಪ್ರಾಯವು ಇನ್ನು ಯಾವ ನಿರ್ದಿಷ್ಟರೂಪವನ್ನು ತಳೆಯದಿದ್ದರೂ ಪ್ರಪಂಚದ ಜನಮತವು ಸಂಘಟಿತವಾಗುವಂತೆ ಪ್ರಯತ್ನಿಸುವದು ಉಚಿತ ಎಂದು ಭಾರತವು ಖಚಿತವಾಗಿ ತಿಳಿದಿದೆ. ಆ ಮೇರೆಗೆ ಯತ್ನಿಸುತ್ತಲಿದೆ. ಸಂಯುಕ್ತ ರಾಷ್ಟ್ರಸಂಘವು ತಾತ್ವಿಕ ತಳಹದಿಯ ಮೇಲೆ ಚರ್ಚೆಯನ್ನು ಮುಂದುವರಿಸಿ, ಸ್ಥೂಲವಾಗಿ ಉಪನಿವೇಶನ ವಾದವನ್ನು ಖಂಡಿಸಿ, ಆ ವಿಷಯದ ಪ್ರತ್ಯಕ್ಷ ಕಾರ್ಯರೂಪವನ್ನು ತಪ್ಪಿಸಿಕೊಂಡ ಉದಾಹರಣೆಗಳು ಇರುತ್ತವೆ. ಇತ್ತ ಇಂತಹ ತಾತ್ವಿಕ ನಿರ್ಣಯಗಳ ಅಧಾರದ ಮೇಲೆ, ಬಲಪ್ರಯೋಗ ಮಾಡಿ, ಆ ಉಪನಿವೇಶನಗಳನ್ನು ಸಂಬಂಧಪಟ್ಟ

ರಾಷ್ಟ್ರಗಳು ಕೈವಶ ಮಾಡಿಸಿಕೊಳ್ಳಬಹುದು; ಆದರೆ ಬಲಪ್ರಯೋಗ ದಿಂದ ಇಲ್ಲವೆ ಬೇರೆ ಬಗೆಯ ಒತ್ತಾಯದಿಂದ ಕೈಗೂಡಿಸಿಕೊಂಡ ಯಾವುದೆ ಕೆಲಸವು ಸಾಕಷ್ಟು ಶುದ್ಧ, ಮತ್ತು ಬಂಧುರವಾಗುವದಿಲ್ಲ. ಎಂಬ ವಿಷಯವು ಭಾರತಕ್ಕೆ ಮನದಟ್ಟಾಗಿದೆ. ಅಂತೆಯೆ ಕ್ರಮವಾಗಿ ಜನಮತವನ್ನು ಮಾರ್ಪ ಡಿಸಿ, ಉಪನಿವೇಶನವಾದವು ನಿಂದ್ಯವು ಎಂಬ ನೈತಿಕ ವಾತಾವರಣವನ್ನುಂಟು ಮಾಡಿ ಅಲ್ಲಿಯ ಜನರಿಗೆ ಸಂಬಂಧಪಟ್ಟ ಸಮಸ್ಯೆಗಳ ಪರಿಹಾರವನ್ನು ಅಲ್ಲಿಯ ಜನರು ಸ್ವಪ್ರಯತ್ನದಿಂದಲೇ ಮಾಡಿಕೊಳ್ಳಬೇಕು ಎಂದು ಎಂದಿ ನಿಂದಲೂ ಭಾರತವು ಸ್ಪಷ್ಟವಾಗಿ ಸಾರಿದೆ. ಯಾವುದೊಂದು ತತ್ವದ ಸಲು ವಾಗಿ ಎಷ್ಟೇ ವಿಶದವಾದ ಅಭಿಪ್ರಾಯವು ನಮ್ಮದಾಗಿರಲಿ, ಅದು ವಿಶ್ವರಂಗ ದಲ್ಲಿ ಸ್ವೀಕೃತವಾಗಿ, ಆ ಅಭಿಮತದ ಬೆಂಬಲವು ಕಷ್ಟದಲ್ಲಿದ್ದ ಜನರಿಗೆ ಸಿಗುವಂತಹ ನೈತಿಕ ಸಹಾಯದ ಸೇವೆಯನ್ನು ಮಾತ್ರ ಭಾರತವು ಸಲ್ಲಿಸ ಬಹುದು. ಈ ಧೋರಣದಿಂದಲೇ ಭಾರತವು ಯಾವ ಬಗೆಯ ಒಳದಾರಿಗೆ ಇಲ್ಲವೆ ಕಳ್ಳದಾರಿಗೆ ಹಾತೊರೆಯದೆ ಆತ್ಮಬಲದ ರಾಜಮಾರ್ಗವನ್ನು, ಸ್ವಯಂನಿರ್ಣಯದ ಹೆದ್ದಾರಿಯನ್ನು ಅದು ಎಷ್ಟೆ ಅನನುಕೂಲವಾದರೂ ಅನುಸರಿಸಿಕೊಂಡು ಬಂದಿದೆ.

ರಾಜಕೀಯ ಕ್ಷೇತ್ರಗಳಲ್ಲಿ ಇಂತಹ ಧೋರಣೆಯನ್ನು ಭಾರತವು ಅನು ಸರಿಸಿದೆ; ಇತ್ತ ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಅದು ಕೈಕೊಂಡ ಕಾರ್ಯವು ಅದೇ ನೀತಿಯ ಇನ್ನೊಂದು ಮುಖವಾಗಿದೆ. ಆರ್ಥಿಕ ದೃಷ್ಟಿಯಿಂದ ಹಿಂದು ಳಿದ ಮತ್ತು ಸಾಮಾಜಿಕ ನ್ಯೂನತೆಗಳಿಂದ ಬಳಲುತ್ತಿರುವ ರಾಷ್ಟ್ರಗಳಿಗೆ ಮತ್ತು ಪ್ರದೇಶಗಳಿಗೆ, ಪ್ರಗತಿಯ ಸಲುವಾಗಿ ಉಚಿತವಾದ ಸಹಾಯವನ್ನು ಸಲ್ಲಿಸಬೇಕು ಎಂಬುದೇ ಭಾರತದ ನಿಲುಮೆಯಾಗಿದೆ. ಆದರೆ ಅದರ ಜೊತೆ ಯಲ್ಲಿಯೆ ಅಂತಹ ಸಹಾಯವನ್ನು ಸಲ್ಲಿಸುವ ರಾಷ್ಟ್ರಗಳ ದೃಷ್ಟಿ ಮತ್ತು ಅದನ್ನು ಪಡೆಯುವ ಗುಂಪುಗಳ ಉದ್ದೇಶ ಸುಸ್ಪಷ್ಟವಾಗಿರಬೇಕು. ಯಾವ ರೀತಿಯಿಂದಾಗಲಿ ತಮ್ಮ ಪ್ರಭಾವವನ್ನು ಬೀರಬೇಕು. ಪ್ರಭುತ್ವವನ್ನು ಮುಂದುವರಿಸಿಕೊಳ್ಳಬೇಕು ಎಂಬುದು ನೀಡುವವರದಾಗಿರಬಾರದು; ಪರರಿಂದ ಬರುವ ಸಹಾಯ, ಅದನ್ನು ಪಡೆದರಾಯಿತು. ಅದರ ಉಪಯೋಗ ಹೇಗೆಯೆ ಆಗಲಿ ಎಂಬ ಭಾವನೆಯು ಪಡೆಯುವವರದಾಗಿರಬಾರದು.

ಕೊಡುವವರು ಅನಾಸಕ್ತಿಯಿಂದ ಕೊಡಬೇಕಾದರೂ ಸತ್ಪಾತ್ರದಲ್ಲಿ ಕೊಡಬೇಕು; ಪಡೆಯುವವರು ಸ್ವಂತದ ಪ್ರಯೋಜನಕ್ಕಾಗಿ ತೆಗೆದುಕೊಳ್ಳುತ್ತಿದ್ದರೂ, ಆ ಸಹಾಯದಿಂದ ಕ್ಷಿಪ್ರದಲ್ಲಿಯೆ ಸ್ವಸಮರ್ಥ ಆಗುವ ಉದ್ದೇಶದಿಂದ ಸ್ವೀಕರಿಸಬೇಕು ಎಂಬುದು ಭಾರತವು ಅಂತರ್ರಾಷ್ಟ್ರೀಯ ಸಹಾಯದ ವಿಷಯವಾಗಿ ಇಟ್ಟುಕೊಂಡ ವಿಶದವಾದ ಅಭಿಪ್ರಾಯವಾಗಿದೆ.

ಈ ದೃಷ್ಟಿಯಿಂದ ಪ್ರಪಂಚದ ಆರ್ಥಿಕ ವಿಕಾಸ ಮತ್ತು ಸಾಮಾಜಿಕ ಪ್ರಗತಿಗಳ ಬಗ್ಗೆ ಭಾರತವು ಮುಂದುವರೆದಿದ್ದುದೇನೋ ನಿಜ; ಆದರೆ ಆ ನೀತಿಯನ್ನು ಪ್ರಚಲಿತವಾಗಿರುವ ಪಾಶ್ಚಾತ್ಯ ರಾಷ್ಟ್ರಗಳ ನೀತಿಯೊಡನೆ ಹೋಲಿಸಿ ನೋಡಿದರೆ, ಭಾರತದ ಉದಾತ್ತ ಧ್ಯೇಯವನ್ನು ಸ್ಪಷ್ಟಪಡಿಸಲು ಇನ್ನಷ್ಟು ಸಹಾಯಕವಾಗಬಹುದು. ಆರ್ಥಿಕ ಸಹಾಯ ಮತ್ತು ಸಾಮಾಜಿಕ ಸಹಕಾರಗಳನ್ನು ನೀಡುವ ಮೊದಲು ಪಾಶ್ಚಾತ್ಯ ರಾಷ್ಟ್ರಗಳು, ವೈಯಕ್ತಿಕವಾಗಿ ತಾವು ನೀಡುವ ಸಂದರ್ಭದಲ್ಲಿಯೆ ಆಗಲಿ, ಸಂಘಟಿತವಾಗಿ ವಿಶ್ವಸಂಸ್ಥೆಯ ಅಂಗಗಳ ಮೂಲಕ ಕೊಡುವ ಪ್ರಸಂಗದಲ್ಲಿಯೆ ಆಗಲಿ ಎರಡು ಬಗೆಯ ಫಲಪ್ರಾಪ್ತಿಯ ದೃಷ್ಟಿಯನ್ನು ಇಟ್ಟುಕೊಂಡಿರುತ್ತವೆ. ಮೊದಲನೆಯದಾಗಿ ಅಂತಹ ಸಹಾಯದಿಂದ ದಾನಿಗಳಿಗೆ ಯಾವ ಪ್ರಮಾಣದಲ್ಲಿ ಲಾಭವು ದೊರೆಯಬಹುದು ಎಂಬುದಾಗಿದೆ. ಇದನ್ನು ಅವು ಬಡ್ಡಿಯ ರೂಪದಲ್ಲಿಯೆ ಆಗಲಿ, ಪ್ರಭಾವದ ದೃಷ್ಟಿಯಿಂದಾಗಲಿ ತೂಗಿ ನೋಡಿಕೊಳ್ಳುವವು. ಸಹಾಯವನ್ನು ಪಡೆಯದ ರಾಷ್ಟ್ರಗಳು ಅಥವಾ ಸಂಸ್ಥೆಗಳು ಅದರ ಸರಿಯಾದ ವಿನಿಯೋಗವನ್ನು ಹೇಗೆ ಮಾಡಿಕೊಳ್ಳಬಹುದು ಎಂಬುದನ್ನು ತಿಳಿಯಬೇಕಾದುದು ಅಗತ್ಯವೇನೊ ಸರಿ. ಅದರಿಂದ ಅಂತಹ ದಾನವನ್ನು ಅಥವಾ ಸಾಲವನ್ನು ಪಡೆಯುವ ಆ ಸಂಸ್ಥೆಯು ಅಥವಾ ರಾಷ್ಟ್ರವು ಯಾವ ಬಗೆಯ ಸಾಮರ್ಥ್ಯವುಳ್ಳದ್ದಾಗಿದೆ ಎಂಬುದನ್ನು ನಿರೀಕ್ಷಿಸುವದೆಂದರೆ ಅದರ ಪಾತ್ರತೆಯನ್ನು ಪರೀಕ್ಷಿಸಿದಂತೆಯೆ ಸೈ. ಆದರೆ ಅನಂತರ ಅದು ಪಡೆದ ಸಹಾಯದಿಂದ ತಮ್ಮ ವರ್ಚಸ್ಸನ್ನು ಹೇಗೆ ಬೆಳೆಯಿಸಿಕೊಳ್ಳಬಹುದು. ಎಂಬುದನ್ನು ಅಳೆದು ನೋಡಬಯಸುವದೆಂದರೆ, ಅದು ಸಾಂಸ್ಕೃತಿಕ ಸಹಾಯದಿಂದ ರಾಜಕೀಯ ಧೋರಣೆಯಾಗಿ ಪರಿಣಮಿಸುತ್ತದೆ. ಇತ್ತ ಲಾಭದ ದೃಷ್ಟಿಯಿಂದ ನೆರವಿನ ಕೈಯನ್ನು ಚಾಚುವದೆಂದರೆ ಅದು ಕೇವಲ ಆರ್ಥಿಕ ಸಾಮ್ರಾಜ್ಯವಾದದ ಬೇರೆಯೊಂದು ಸ್ವರೂಪವಾಗಿ ಕಾಣುತ್ತದೆ.

ಎರಡನೆಯದಾಗಿ ಪಡುವಣ ರಾಷ್ಟ್ರಗಳು ಧನದ ಬಲವನ್ನು ನೀಡುವಾಗ್ಗೆ ಮತ್ತು ಸೇವೆಯ ಸಲಕರಣೆಗಳನ್ನು ಸಲ್ಲಿಸುವಾಗ್ಗೆ ಪ್ರಪಂಚದ ರಾಜಕೀಯ ಪಂಗಡಗಳಲ್ಲಿ ತಮ್ಮ ಪಕ್ಷಕ್ಕೆ ಅಂತಹ ಸಹಾಯವನ್ನು ಪಡೆದ ರಾಷ್ಟ್ರವು ಅಧೀನವಾಗಿರುವಂತೆ ಅಪೇಕ್ಷಿಸುತ್ತವೆ. ಇದು ಸ್ವಯಂಪ್ರೇರಣೆಯಿಂದ ಕೊಡಮಾಡಿದ ಬೆಂಬಲ ಎಂದು ತೋರಿಸಲಿಕ್ಕೆ ಆ ರಾಷ್ಟ್ರಗಳು ವಿಶ್ವಪ್ರಯತ್ನವನ್ನು ಮಾಡುತ್ತಿದ್ದರೂ, ಸಹಾಯವನ್ನು ಪಡೆಯಬೇಕಾದ ರಾಷ್ಟ್ರಗಳನ್ನು ಅರಿಸುವಾಗ್ಗೆ ತಮ್ಮ ಪಕ್ಷಕ್ಕೆ ಬಲವನ್ನು ನೀಡುವ ಪರಿಸ್ಥಿತಿಯೆ ಅವುಗಳ ದೃಷ್ಟಿಯಲ್ಲಿರುವದೇ ಹೊರತು ಕಷ್ಟಸಮಯದಲ್ಲಿದ್ದ ರಾಷ್ಟ್ರಗಳ ಬೇಡಿಕೆಯ ಕಡೆಗಿರುವದಿಲ್ಲ. ಒಂದು ರಾಷ್ಟ್ರದ ಔದ್ಯೋಗಿಕ ಪ್ರಗತಿಗೆ ಬೇಕಾಗುವ ಉಪಕರಣಗಳು ತಮ್ಮ ಕಡೆಯಲ್ಲಿ ಮಾತ್ರ ದೊರೆಯುವಂತಿದ್ದಾಗ್ಗೆ ಬೇಡುವ ರಾಷ್ಟ್ರವು ಎದುರು ಪಕ್ಷದಲ್ಲಿದ್ದುದೇ ಆದರೆ, ಅದನ್ನು ಪಡೆಯಬೇಕೆಂಬ ರಾಷ್ಟ್ರವು ಎಂದೂ ಪಡೆಯುವದಾಗಲಿಕ್ಕಿಲ್ಲ. ಅದರಂತೆಯೆ ತಮ್ಮ ಪಕ್ಷವನ್ನು ಪ್ರಬಲಗೊಳಿಸುವ ಕೀಲದ ಸ್ಥಾನದಲ್ಲಿದ್ದ ರಾಷ್ಟ್ರಕ್ಕೆ ಯಾವ ಸಹಾಯವನ್ನಾದರೂ ಸಲ್ಲಿಸಿ, ಅದರ ಪ್ರಗತಿಗೆ ಸಕಲ ಸಲಕರಣೆಗಳನ್ನು ನೀಡಿ, ಆವಶ್ಯಕವಾಗಿದ್ದ ಮಾತ್ರೆಗಿಂತ ಹೆಚ್ಚಿನ ಸಹಾಯಧನವನ್ನು ಕೊಟ್ಟು, ಅದನ್ನು ತಮ್ಮ ಪ್ರಭಾವಳಿಯಲ್ಲಿರಿಸಿಕೊಳ್ಳಲಿಕ್ಕೆ ಆ ರಾಷ್ಟ್ರಗಳು ಹೆಣಗುತ್ತವೆ. ಇದು ಹಿಂದಿನ ಕಾಲದಿಂದ ರಾಜಕೀಯ ಕ್ಷೇತ್ರದಲ್ಲಿ ನಡೆದು ಬಂದ ಶಕ್ತಿಯ ಸಮತೋಲವನ್ನು ಪಾಲಿಸುವ ಧೋರಣೆಯೆ ಆರ್ಥಿಕ ಮತ್ತು ಸಾಮಾಜಿಕ ರಂಗಗಳಲ್ಲಿ ಪಡೆದ ಸ್ವರೂಪವಾಗಿದೆ. ಇಂದು ಎಲ್ಲ ರಾಷ್ಟ್ರಗಳ ಸಮಾನಾಧಿಕಾರವನ್ನು ಒಪ್ಪಿದ ಸಂಯುಕ್ತ ರಾಷ್ಟ್ರಸಂಘದ ಸಹಾಯದಾನದ ಪ್ರಸಂಗಗಳಲ್ಲಿ ಅದು ಬೃಹದಾಕಾರವನ್ನು ಪಡೆದು ನಿಂತುದು ಕಾಣಿಸುತ್ತದೆ. ಒಂದು ವಿಮಾನ ಸಂಚಾರದ ಪ್ರಶ್ನೆಯೆ ಆಗಿರಲಿ, ಅಂಚೆಯ ಸೌಕರ್ಯಗಳನ್ನು ಹಂಚುವ ಸಮಸ್ಯೆಯೆ ಆಗಿರಲಿ, ಒಂದು ದಲಿತರ ಸೇವೆಯನ್ನು ಗೈಯುವ ಪ್ರಮೇಯವೆ ಆಗಿರಲಿ, ವ್ಯಾಪಾರದ ಸವಲತ್ತುಗಳನ್ನು ನಿರ್ಧರಿಸುವ ಸಮಯವೆ ಆಗಿರಲಿ, ಇಂದು ಮೇಲೆ ಕಾಣಿಸಿದ ಎರಡು ಪರಿಣಾಮಗಳ ದೃಷ್ಟಿಯಿಂದ ನಿರ್ಧರಿಸಲಾಗುತ್ತಿವೆ. ಈ ಬಗೆಯ ಕಾರ್ಯಾಚರಣೆಯು ಬಹಿರಂಗವಾಗಿ ನಡೆದಿದ್ದರೂ, ಅದಕ್ಕೆ ಕಾರ್ಯನೀತಿ ಎಂಬ ಹೆಸರಿನಲ್ಲಿ

ಯಾಗಲಿ, ತಾತ್ವಿಕ ಸಮರ್ಥನೆ ಎಂಬ ಸಮಾಧಾನವಾಗಲಿ ಸಂಯುಕ್ತ ರಾಷ್ಟ್ರಸಂಘದ ಸಂವಿಧಾನದ ಯಾವ ಭಾಗದಲ್ಲಿಯೂ ನೋಡಲಿಕ್ಕೆ ದೊರೆಯುವದಿಲ್ಲ.

ಅಂತೆಯೆ ಈ ಬಗೆಯ ಪರಿಸ್ಥಿತಿಯನ್ನು ಕೇವಲ ಶಾಬ್ದಿಕ ನಿರ್ಣಯ ಗಳಿಂದ ಖಂಡಿಸದೆ ಸ್ಪಷ್ಟವಾದ ಕಾರ್ಯದಿಂದ ನಿಷೇಧಿಸಿ, ಸಂಯುಕ್ತ ರಾಷ್ಟ್ರಸಂಘದ ಆಶಯವನ್ನು ತಿಳಿಸಿಕೊಡುವದು ಅಗತ್ಯವಾಗಿದೆ. ಇಂತಹ ಕಾರ್ಯಪ್ರವೃತ್ತಿಯನ್ನು ತೋರಿಸುವದರಿಂದ ಪ್ರತಿಯೊಂದು ರಾಷ್ಟ್ರದ ಸಾಮರ್ಥ್ಯವು ಹೆಚ್ಚಾಗುವದಲ್ಲದೆ ಆ ಮೂಲಕ ಪ್ರಪಂಚ ಸಂಸ್ಥೆಯ ಆದರ್ಶವು ಸಾಧಿಸಲಿಕ್ಕೆ ಕೂಡ ಸುಲಭವಾದ ಪರಿಸ್ಥಿತಿಯು ಪ್ರಾಪ್ತವಾಗು ತ್ತದೆ. ಪಾತ್ರಾಪಾತ್ರತೆಯ ದೃಷ್ಟಿಯಿಂದ ದಾನ–ಋಣಗಳನ್ನು ಕೊಡುವ ನಿರ್ಣಯವು ಕೈಕೊಳ್ಳಬೇಕಾದುದೇನೋ ಸರಿ. ಆದರೆ ಅದರ ಹಿಂಬದಿಯಲ್ಲಿ ಪಕ್ಷಪಂಗಡಗಳ ಪ್ರಭಾವ ಸೂತ್ರವಿರುವದಾಗಲಿ, ಸ್ವಾರ್ಥಸಾಧನೆಯ ಸಂಕುಚಿತ ಭಾವನೆಯಾಗಿರಲಿ ಕಂಡುಬಂದರೆ, ತಮ್ಮ ಸ್ಥಿತಿಯು ಇನ್ನಷ್ಟು ಶೋಚನೀಯವಾದರೂ ಅಡ್ಡಿಯಿಲ್ಲ, ನಿಷಿದ್ಧವೆನಿಸುವ ನಿಧಿಯನ್ನು ನಾವು ಮುಟ್ಟಲಿಕ್ಕಿಲ್ಲ. ಎಂಬ ದೃಢನಿಶ್ಚಯವು ಅಪ್ರಬುದ್ಧ ರಾಷ್ಟ್ರಗಳಲ್ಲಿ ಕೂಡ ಕಂಡುಬರಬೇಕಾಗಿದೆ. ಇಂತಹ ದೃಷ್ಟಾಂತಗಳು ಭಾರತದ ಇತ್ತೀಚಿನ ಪ್ರಗತಿಯ ಇತಿಹಾಸದಲ್ಲಿ ಅನೇಕವಾಗಿ ದೊರೆಯುತ್ತವೆ. ನೆರವನ್ನು ಪಡೆಯು ವಾಗ್ಗೆ ಕೃತಜ್ಞತೆಯನ್ನು ವ್ಯಕ್ತಪಡಿಸಲಿಕ್ಕೆ ಭಾರತವು ಹಿಂಜರಿಯದಿದ್ದರೂ, ಆ ನೆರವಿನ ಮೂಲಕ ತನ್ನ ಸ್ವಾತಂತ್ರ್ಯ ಸ್ವಾಭಿಮಾನಗಳಿಗೆ ಧಕ್ಕೆಯಾಗು ವಂತಿದ್ದರೆ ಆ ಸಹಾಯವನ್ನು ನಿರಾಕರಿಸಲಿಕ್ಕೆ ಕೂಡ ಅನುಮತಿಸಿಲ್ಲ. ಅದರಂತೆಯೆ ನೆರೆಹೊರೆಯ ಮತ್ತು ಕಷ್ಟಕ್ಕೀಡಾದ ರಾಷ್ಟ್ರಗಳಿಗೆ ತನ್ನ ಶಕ್ತಿಗೆ ಸಾಧ್ಯವಾದಷ್ಟು ಸಹಾಯವನ್ನು ಯಾವ ಫಲದ ಆಸ್ಥೆಯನ್ನೂ ಇಟ್ಟುಕೊಳ್ಳದೆ ನೀಡಲಿಕ್ಕು ಹಿಂಜರಿದಿಲ್ಲ. ಇಷ್ಟೆ ಅಲ್ಲದೆ ತಾನು ಪರಿಹಾರ ಪಡೆದ ಸಹಾ ಯದ ಸಾರ್ಥಕತೆಯನ್ನು, ಬೇರೆ ಬೇಡಿಕೆಯಿದ್ದ ಸ್ಥಾನಗಳಲ್ಲಿ ನೀಡಿ, ಅಂತಹ ರಾಷ್ಟ್ರಗಳ ಬಲ ಮತ್ತು ಪ್ರತಿಷ್ಠೆಗಳು ಹೆಚ್ಚುವಂತೆ ಅನೇಕ ಸಂದರ್ಭಗಳಲ್ಲಿ ಭಾರತವು ಯತ್ನಿಸಿದೆ. ಸಮಾಜದಲ್ಲಿ ಸ್ವತಂತ್ರವಾದ ಸ್ಥಾನವನ್ನು ಗಳಿಸುವ ಮೊದಲು ಮನುಷ್ಯನು ಅನ್ಯರ ನೆರವನ್ನು ಪಡೆದು ಮುಂದೆ ತಾನು ಸ್ವಯಂ

ಪೂರ್ಣ ಆದನೆಂದರೆ ತನ್ನಂತೆ ತೊಂದರೆಯಲ್ಲಿದ್ದ ಬೇರೆ ಸಾಮಾಜಿಕರ ಸಹಾಯಕ್ಕೆ ತಾನು ನಿಲ್ಲವದು ಸಮಾಜ ನಿಯಮವಿದ್ದಂತೆಯೆ, ರಾಷ್ಟ್ರಗಳ ಸಂಬಂಧದಲ್ಲಿಯೂ ಇರಬೇಕು. ಎಂಬುದನ್ನು ಭಾರತವು ಪ್ರತ್ಯಕ್ಷ ಪ್ರಯತ್ನದಿಂದ ತೋರಿಸಿದೆ.

ಈ ನೀತಿಯ ಮೂರ್ತಸ್ವರೂಪವನ್ನು ನಾವು ಕೋಲಂಬೋ ಯೋಜನೆಯಲ್ಲಿ ಕಾಣಬಹುದಾಗಿದೆ. ರಾಜಕೀಯದಲ್ಲಿ, ಸಂಯುಕ್ತ ರಾಷ್ಟ್ರಸಂಘದ ಉದ್ದೇಶಗಳನ್ನು ಈಡೇರಿಸಲಿಕ್ಕೆ ಪ್ರಬಲ ರಾಷ್ಟ್ರಗಳು ಪಕ್ಷದ ಪ್ರಭಾವಕ್ಕೆ ಒಳಗಾಗಿ ಹಿಂಜರಿಯುತ್ತಿದ್ದಾಗ, ಭಾರತವು ಆಗ್ನೆಯ ಏಶಿಯದ ರಾಷ್ಟ್ರಗಳ ಸಮ್ಮೇಲನವೊಂದನ್ನು ನೆರವೇರಿಸಿ, ಅದರಲ್ಲಿ ಉಪನಿವೇಶನವಾದವನ್ನು, ಸಾಮ್ರಾಜ್ಯವಾದವನ್ನು ಖಂಡಿಸಿ, ಅವು ಜಗತ್ತಿನಿಂದ ಅದೃಶ್ಯವಾಗುವಂತೆ ಮಾಡಬೇಕು ಎಂದು ಸೂಚಿಸಿದಂತೆಯೆ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿಯೂ ಭಾರತವು ತನ್ನ ದೃಷ್ಟಿಯನ್ನು ಕೋಲಂಬೋ ಯೋಜನೆಯಂತಹ ಸಂಘಟನೆಯಿಂದ ಪ್ರಪಂಚದ ಆರ್ಥಿಕ ಪುನರ್ರಚನೆ ಮತ್ತು ಸಾಮಾಜಿಕ ಪುನರುಜ್ಜೀವನದತ್ತ ಹೊರಳಿಸಿದೆ. ಪಾಶ್ಚಾತ್ಯ ಆರ್ಥಿಕ ಶೋಷಣೆ ಮತ್ತು ಸಾಮಾಜಿಕ ಅನುಕರಣೆಗಳನ್ನು ತಪ್ಪಿಸಿ ಆತ್ಮ ವಿಕಾಸದ ಯೋಜನೆಗಳನ್ನು ಹಿಂದುಳಿದ ರಾಷ್ಟ್ರಗಳು ಮಾಡಿಕೊಳ್ಳಬೇಕು ಎಂಬ ವಿಚಾರದಿಂದ ಈ ಕೋಲಂಬೋ ಯೋಜನೆಯತ್ತ ಭಾರತವು ಒಲಿದಿರುತ್ತದೆ.

ಕೋಲಂಬೋ ಯೋಜನೆಯು ಕೇವಲ ಒಂದು ಆರ್ಥಿಕ ಅಭಿವೃದ್ಧಿಯ ಮತ್ತು ಸಾಮಾಜಿಕ ಪ್ರಗತಿಯ ಯೋಜನೆಯಾಗಿದೆ. ಈ ಯೋಜನೆಗೆ ಒಳಪಟ್ಟ ರಾಷ್ಟ್ರಗಳು ಕೆಲವು ರಾಷ್ಟ್ರಮಂಡಲದ ಸದಸ್ಯತ್ವವನ್ನು ಉಳಿಸಿಕೊಂಡಿರುತ್ತವೆ; ಇನ್ನು ಕೆಲವು ಸ್ವತಂತ್ರವಾಗಿದ್ದರೂ ಈ ಯೋಜನೆಯಲ್ಲಿ ಸಹಭಾಗಿಗಳಾಗಿವೆ. ಆರು ವರ್ಷಗಳ ಆರ್ಥಿಕ ಅಭಿವೃದ್ಧಿಯ ಈ ಯೋಜನೆಯು ಸಂಯುಕ್ತ ರಾಷ್ಟ್ರಸಂಘವು ಇಟ್ಟುಕೊಂಡ ಉದ್ದೇಶಗಳನ್ನೇ ತನ್ನ ಧ್ರುವತಾರೆಯನ್ನಾಗಿ ಗೊತ್ತುಪಡಿಸಿಕೊಂಡಿದೆ. ಪ್ರಪಂಚದೊಳಗಿನ ಕೆಲವು ರಾಷ್ಟ್ರಗಳ ಜೀವನಸ್ತರವನ್ನು ಉನ್ನತಗೊಳಿಸುವ ಧ್ಯೇಯವು ಈ ಯೋಜನೆಯದಾಗಿದೆ. ಆದರೆ ಇಂತಹ ಬೇರೆ ಒಂದು ಸಂಘಟನೆಯನ್ನು ನಿರ್ಮಿಸಿಕೊಳ್ಳುವ ಅವಶ್ಯ

ಕತೆಯು ಏನು ? ಎಂದು ಯಾರಾದರೂ ಕೇಳಬಹುದು. ಈ ಬಗೆಯ ಪ್ರಶ್ನೆಗೆ ಉತ್ತರವನ್ನು ಕೊಡಬೇಕಾದರೆ, ನಾವು ಎರಡು ವಿಧಾನದಿಂದ ಈ ಸಮಸ್ಯೆಯನ್ನು ಪರೀಕ್ಷಿಸಬೇಕಾಗುತ್ತದೆ. ಮೊದಲನೆಯದಾಗಿ ಯಾವುದೊಂದು ರಾಷ್ಟ್ರದ ಇಲ್ಲವೆ ರಾಷ್ಟ್ರಸಂಯೋಗದ ಆರ್ಥಿಕ ವಿಕಾಸವು ಸಂಯುಕ್ತ ರಾಷ್ಟ್ರ ಸಂಘದ ಕಾರ್ಯವೆಂದು ಸಮ್ಮತವಾದಾಗ್ಗೆ, ಅದಕ್ಕೆ ಬೇಕಾಗುವ ಸಾಮಗ್ರಿಗಳನ್ನು ಧನಸಹಾಯ, ತಾಂತ್ರಿಕ ಸೇವೆ, ಮತ್ತು ಯಂತ್ರಗಳ ಸೌಕರ್ಯಗಳನ್ನು ಒದಗಿಸಬೇಕಾದರೆ, ಎಷ್ಟು ತೊಡಕು ತೊಂದರೆಗಳನ್ನು ಎದುರಿಸಬೇಕಾಗುವದು ಎಂಬುದನ್ನು ಆ ಕ್ಷೇತ್ರದ ಪರಿಚಯವಿದ್ದವರಿಂದ ಸ್ಪಷ್ಟವಾಗಿ ತಿಳಿದು ಅಂತಹ ಒಂದು ಸೂಚನೆಯು ವಿಶ್ವರಂಗದೆದುರು ಬಂದಾಗ್ಗೆ, ಬೇಡುವ ರಾಷ್ಟ್ರದ ರಾಜಕೀಯ ಸ್ಥಾನಮಾನವೆಂತಹದಿರುವದು, ಅದಕ್ಕೆ ಬೇಕಾಗುವ ಸಲಕರಣೆಗಳು ಬೇರೆ ರಾಜಕೀಯ ಗುಂಪಿನಲ್ಲಿ ದೊರೆಯಬಹುದೊ ಹೇಗೆ, ಆ ಬಗೆಯ ಸಹಾಯವನ್ನು ಪಡೆದ ಮೇಲೆ ಆ ರಾಷ್ಟ್ರವು ವಿಕಾಸ ಹೊಂದಿ ತಮ್ಮ ಪ್ರಭಾವಳಿಯಲ್ಲಿಯೆ ಉಳಿಯಬಹುದೋ, ಹೇಗೆ, ಮತ್ತು ನೀಡಿದ ಸೌಕರ್ಯಗಳ ಉಪಯೋಗವನ್ನು ತನಗಷ್ಟೆ ಮಾಡಿಕೊಳ್ಳಬಹುದೇ ? ಅಥವಾ ಆ ರಾಷ್ಟ್ರವು ವಿರುದ್ಧ ಪಕ್ಷದ ಯಾವುದೊಂದು ಬೇರೆ ರಾಷ್ಟ್ರಕ್ಕೆ ಮಾಡಿಕೊಡಬಹುದೋ ಎಂಬ ಅನೇಕ ಬಗೆಯ ಆತಂಕಗಳು ಆ ಸಂದರ್ಭದಲ್ಲಿ ತಲೆಯೆತ್ತಿ, ಅದರ ಎಲ್ಲ ವಿಚಾರಣೆ ಮತ್ತು ನಿರೀಕ್ಷಣೆಯಾಗಿ ನಿರ್ಣಯವಾಗುವಷ್ಟರಲ್ಲಿ ಬೇಡುವ ರಾಷ್ಟ್ರಕ್ಕೆ ಆ ಸಹಾಯ ಸರ್ವಥಾ ಬೇಡ, ಎನ್ನುವಂತಹ ಭೀಕರ ಸ್ಥಿತಿಯು ಪ್ರಾಪ್ತವಾಗಿರುತ್ತದೆ, ಅಂತೆಯೆ ರಾಜಕೀಯ ತೊಳಲಾಟದ ಮತ್ತು ಭಿನ್ನಾಭಿಪ್ರಾಯದ ಪರಿವೆಯನ್ನು ಮಾಡದೆ ಕೇವಲ ಆರ್ಥಿಕ ಅರ್ಹತೆ ಮತ್ತು ಸಾಮಾಜಿಕ ಪಾತ್ರತೆಯ ದೃಷ್ಟಿಯಿಂದ ಯಾವುದೊಂದು ನಿರ್ಧಾರವನ್ನು ಮಾಡಿಕೊಳ್ಳುವದು ಸಂಯುಕ್ತ ರಾಷ್ಟ್ರಸಂಘದಲ್ಲಿ ಅಸಾಧ್ಯವಾದ ವಿಷಯವಾಗಿದೆ. ಇಂತಹ ಯಾವ ವರ್ಚಸ್ಸಿಗೊಳಗಾಗದೆ ತಮ್ಮ ಸಂಬಂಧಕ್ಕೊಳಪಟ್ಟ ರಾಷ್ಟ್ರಗಳ ಯೋಜನೆಯೆ ಇದು, ಎಂಬ ದೃಷ್ಟಿಯಿಂದ ಆರ್ಥಿಕ ವಿಕಾಸದ ಸುಗಮತೆಯ ಧ್ಯೇಯವನ್ನೇ ಪ್ರಧಾನವಾಗಿರಿಸಿಕೊಂಡ ಯೋಜನೆಯೊಂದು ಮುಂದುವರಿಯುವುದೇ ಕೋಲಂಬೋ ಯೋಜನೆಯು.

ಅದರಂತೆಯೆ ಇನ್ನೊಂದು ರೀತಿಯಿಂದಲೂ ಕೋಲಂಬೋ ಯೋಜನೆಯು ಅದ್ವಿತೀಯವೆನಿಸಿದೆ. ಅದೆಂದರೆ ನಿಷ್ಪಕ್ಷ ದೃಷ್ಟಿಯಿಂದ ಸಹಾಯವನ್ನು ಪಡೆದು, ಸ್ವಯಂ ಪ್ರಯತ್ನದಿಂದ ತಮಗೆ ಸಾಧ್ಯವಿದ್ದ ಸಲಕರಣೆಗಳ ಉಪಯೋಗವನ್ನು ಮಾಡಿಕೊಂಡು, ಸ್ವಾವಲಂಬನದತ್ತ ನಡೆಯುವಂತೆ ಯೋಚಿಸಿದುದು ಈ ಯೋಜನೆಯ ಹಿರಿಯ ಕಾಣಿಕೆಯಾಗಿದೆ. ಆಗ್ನೇಯ ಏಶಿಯದ ಕೆಲವು ರಾಷ್ಟ್ರಗಳು, ರಾಷ್ಟ್ರಮಂಡಲದ ಹಲವು ಸದಸ್ಯ ರಾಷ್ಟ್ರಗಳು ಮತ್ತು ಇನ್ನು ಬೇರೆ ಸ್ವತಂತ್ರ ಆದಗೂ ಅಲ್ಪಶಕ್ತಿಯ ರಾಷ್ಟ್ರಗಳು ಒಂದು ಯೋಜನೆ ಸಿದ್ಧಗೊಳಿಸಿ, ಮಿತವಾದ ಉದ್ದೇಶಗಳನ್ನು ಇಟ್ಟುಕೊಂಡು, ಯಾವ ಪ್ರಭಾವಕ್ಕೂ ಒಳಪಡದೆ ಪ್ರಾಪ್ತವಾದ ಸಾಮಗ್ರಿಗಳ ಸಹಾಯದಿಂದ ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವ ಕಾರ್ಯಕ್ಕೆ ಧುಮುಕಿರುತ್ತವೆ. ಈ ಯೋಜನೆಯ ವೈಶಿಷ್ಟ್ಯವೆಂದರೆ ಸ್ವಪ್ರಯತ್ನದಿಂದ ಸ್ವಾವಲಂಬನ ಎಂಬುದಾಗಿದೆ. ಈ ಕಾರ್ಯಕ್ರಮದಲ್ಲಿ ವಿಶ್ವಾಸವಿದ್ದ ಬೇರೆ ಸಶಕ್ತ ರಾಷ್ಟ್ರಗಳು ತಮ್ಮ ಕಾಣಿಕೆಗಳನ್ನು ಅನಾಸಕ್ತಿಯಿಂದ ಸಲ್ಲಿಸಲಿಕ್ಕೆ ಮುಂದೆ ಬಂದರೆ ಸಾಭಾರ ದೃಷ್ಟಿಯಿಂದ ಸ್ವೀಕರಿಸುವ ಧೋರಣೆಯನ್ನು ಈ ರಾಷ್ಟ್ರಗಳು ಇಟ್ಟುಕೊಂಡಿವೆ; ಆದರೆ ಆ ಸಹಾಯದ ಮುಖಾಂತರ ತಮ್ಮ ಗುರಿಯನ್ನು ತಲುಪುವದು ಕೇವಲ ಸ್ವಾರ್ಥದ ದೃಷ್ಟಿಯಿಂದಾಗಿರದೆ ಅಷ್ಟೊಂದು ಸುದೈವಿಗಳಾಗಿರದ ಅನ್ಯ ರಾಷ್ಟ್ರಗಳಿಗೆ ಅಭಯ ಹಸ್ತವನ್ನು ನೀಡಿ ನೆರವಾಗುವ ಧ್ಯೇಯಕ್ಕಾಗಿದೆ. ತಮ್ಮ ಪ್ರದೇಶಗಳಲ್ಲಿಯೇ ವಿಪುಲವಾಗಿ ದೊರೆಯುತ್ತಿದ್ದ ಸಾಮಗ್ರಿಗಳನ್ನು ಪಡುವಣದ ಪ್ರಬುದ್ಧ ರಾಷ್ಟ್ರಗಳು ತಮ್ಮ ಬಂಡವಲು, ತಮ್ಮ ತಂತ್ರಜ್ಞರು ಮತ್ತು ತಮ್ಮ ಪ್ರತಿಷ್ಠೆಯ ಮೂಲಕ ಸಿದ್ಧವಸ್ತುಗಳನ್ನು ಮಾಡಿ ಪ್ರಪಂಚದ ಪೇಟೆಗಳನ್ನೆಲ್ಲ ಆಕ್ರಮಿಸಿಕೊಂಡ ಪರಿಸ್ಥಿತಿಯ ಬದಲಾಗಿ ಆ ಆ ರಾಷ್ಟ್ರಗಳೆ ನೆರೆಹೊರೆಯ ಚಿಕ್ಕ ಮತ್ತು ಮಧ್ಯಮ ಬಲದ ರಾಷ್ಟ್ರಗಳ ಸಹಕಾರದಿಂದ, ತಮ್ಮ ಆರ್ಥಿಕ ಪ್ರಗತಿಯನ್ನು ಸಾಧಿಸಿಕೊಳ್ಳಬೇಕೆಂಬುದು ಈ ಯೋಜನೆಯ ರಹಸ್ಯವಾಗಿದೆ. ಸಾಮ್ರಾಜ್ಯವಾದ ಮತ್ತು ಉಪನಿವೇಶವಾದಗಳನ್ನು ಖಂಡಿಸಿ ಅಂತಗೊಳಿಸಲಿಕ್ಕೆ ಮತ್ತು ಪ್ರಪಂಚದ ಎಲ್ಲ ರಾಷ್ಟ್ರಗಳು ಸಂಯುಕ್ತ ರಾಷ್ಟ್ರಸಂಘದ ಸೂತ್ರಗಳ ಮೇರೆಗೆ ಸಮಾನಾಧಿಕಾರವುಳ್ಳ ಘಟಕಗಳು ಎಂಬುದನ್ನು ಪ್ರಬಲ ರಾಷ್ಟ್ರಗಳ ಗಮನಕ್ಕೆ ತಂದುಕೊಡುವ

ಉದ್ದೇಶದಿಂದ ಏಶಿಯದ ಸಮ್ಮೇಳನವನ್ನು ಜರುಗಿಸಿದಂತೆ ಮತ್ತು ಮಿತ್ರ ರಾಷ್ಟ್ರಗಳಲ್ಲಿ ಶಾಂತಿಯ ಕ್ಷೇತ್ರವನ್ನು ವಿಸ್ತರಿಸಲಿಕ್ಕೆ ಪ್ರಯತ್ನವನ್ನು ಮಾಡಿದಂತೆ ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಪರಕೀಯರ ಶೋಷಣೆ ಹಾಗೂ ವರ್ಚಸ್ಸುಗಳನ್ನು ತಪ್ಪಿಸಿ, ತಮ್ಮ ತಮ್ಮ ವಿಕಾಸವನ್ನು ತಮಗೆ ಉಚಿತವೆಂದು ತೋಚಿದ ದಾರಿಯಲ್ಲಿ ಮಾಡಿಕೊಳ್ಳಲಿಕ್ಕೆ ಪ್ರತಿಯೊಂದು ರಾಷ್ಟ್ರವು ಬಾಧ್ಯವಾಗಿರುವದು, ಎಂಬುದನ್ನು ಸಾರುವದೇ ಈ ಯೋಜನೆಯಾಗಿದೆ.

ಈ ರೀತಿಯಾಗಿ ಸಂಯುಕ್ತ ರಾಷ್ಟ್ರಸಂಘದ ಉದ್ದೇಶ ಮತ್ತು ಆದರ್ಶಗಳನ್ನು ಭಾರತವು ತನ್ನದೇ ಆದ ರೀತಿಯಲ್ಲಿ ಸಾಧಿಸಲಿಕ್ಕೆ ಶಕ್ತಿ ಮೀರಿ ಪ್ರಯತ್ನಿಸುತ್ತಿದೆ. ಈ ವಿಷಯದಲ್ಲಿ ಭಾರತದ ವಿದೇಶನೀತಿಯ ಬಗ್ಗೆ ಅನೇಕ ಬಗೆಯ ಟೀಕೆ ದೂರುಗಳು ಅಲ್ಲಲ್ಲಿ ಕೇಳಬರುತ್ತಿವೆ. ಭಾರತದ ವಿದೇಶ ನೀತಿಯು ಮಕ್ಕಳ ಆಟವೆಂದು ಪ್ರಬಲ ರಾಷ್ಟ್ರಗಳ ಕೆಲ ಜನರು ನಗೆಯಾಡುತ್ತಲಿದ್ದಾರೆ. ಪ್ರಪಂಚದ ರಾಜಕೀಯ ಕ್ಷೇತ್ರದಲ್ಲಿ ಇದೇ ಈಗ ಪ್ರವೇಶ ಮಾಡಿದ ಭಾರತವು ತನ್ನ ಅಲಿಪ್ತನೀತಿ ಮತ್ತು ಶಾಂತಿಯ ಭೂಮಿಯನ್ನು ವಿಸ್ತರಿಸುವ ಧೋರಣೆಯೆ ಮೊದಲಾದ ವಿಚಾರಗಳಿಗಾಗಿ ಅನೇಕ ಮಿತ್ರ ರಾಷ್ಟ್ರಗಳ ಕೋಪ–ಟೀಕೆಗಳಿಗೆ ಕೂಡ ಗುರಿಯಾಗಿದೆ. ಪ್ರಪಂಚದ ಪ್ರಬಲ ರಾಷ್ಟ್ರಗಳ ಎರಡೂ ಪಕ್ಷಗಳನ್ನು ಬಿಟ್ಟು ತೃತೀಯ: ಪಂಥವನ್ನು ನಿರ್ಮಿಸಿಕೊಂಡರೆ ಅದು ಬಹುದಿನ ತಾಳಲಾರದಂತಹ ನೀತಿಯಾಗುವದು, ಎಂದು ಕೆಲವರು ವಾದಿಸುತ್ತಿದ್ದಾರೆ. ನಿರ್ಲಿಪ್ತತೆಯೆಂಬುದೇ ಈ ರಾಜಕೀಯ ರಂಗದಲ್ಲಿ ಅಸಾಧ್ಯವಾದ ವಿಚಾರ, ಇಂದಿಲ್ಲ ನಾಳೆ ಭಾರತವು ಒಂದಿಲ್ಲೊಂದು ಪಕ್ಷದಲ್ಲಿ ಧುಮುಕಬೇಕಾಗುವದು ಎಂಬ ಭವಿಷ್ಯವನ್ನು ಕೆಲವರು ನುಡಿಯುತ್ತಿದ್ದಾರೆ. ಆದರೆ ಭಾರತವು ಮಾರ್ಪಡಿಸಿಕೊಂಡುಬಂದ ಈ ವಿದೇಶ ನೀತಿಯು ಸ್ವದೇಶದ ಸ್ವಾತಂತ್ರ್ಯ ಮತ್ತು ವಿಕಾಸಗಳಿಗಾಗಿ ಅಣಿಮಾಡಿಕೊಂಡ ಕಾರ್ಯಕ್ರಮದ ವಿಸ್ತೃತ ರೂಪವೆ ಆಗಿದೆಯಲ್ಲದೆ ಸ್ವಾರ್ಥ ದೃಷ್ಟಿಯಿಂದಾಗಲಿ, ಕ್ಷಣಿಕ ಲಾಭಕ್ಕಾಗಲಿ ಅನುಸರಿಸಿದ ಮಾರ್ಗವಾಗಿಲ್ಲ. ಅಂತೆಯೆ ಇತ್ತೀಚಿಗೆ ವಿರುದ್ಧವಾದಗಳ ನಡುವೆ ಅದೃಶ್ಯವಾಗುತ್ತಿರುವ ಸಂಯುಕ್ತ ರಾಷ್ಟ್ರಸಂಘದ ಧ್ಯೇಯವನ್ನು ಭಾರತವು ತನ್ನ ದೃಷ್ಟಾಂತದಿಂದ ಆಚರಣೆಯಲ್ಲಿ ತಂದು ತೋರಿಸುತ್ತಿದ್ದುದರಿಂದ ಅದರ ನೀತಿಗೆ ಹೆಚ್ಚು

ಹೆಚ್ಚು ಗೌರವವು ಪ್ರಾಪ್ತವಾಗುತ್ತಿರುವದು ಕಾಣುತ್ತಿದೆ. ಅದರಂತೆ ಕೇಳ ಬರುವ ಇನ್ನೊಂದು ಬಗೆಯ ದೂರು ಎಂದರೆ ಭಾರತವು ಶಾಂತಿರಕ್ಷಣೆಯ ಮತ್ತು ಆತ್ಮವಿಕಾಸದ ಯೋಜನೆಗಳನ್ನು, ಸಂಯುಕ್ತ ರಾಷ್ಟ್ರಸಂಘದ ಸಭಾಂಗಣವನ್ನು ಬಿಟ್ಟು, ಹೊರಗೆ ಮಾಡುತ್ತಿರುವದು ತಪ್ಪು, ಮತ್ತು ಕೆಡುಕು ಎಂಬುದಾಗಿದೆ. ಇಂತಹ ಪ್ರಶ್ನೆಗೆ ವಿರುದ್ಧವಾಗಿ ಒಂದು ರೀತಿಯಿಂದ ವಾದಿಸಬಹದು, ಮತ್ತು ವಿಧಾಯಕವಾಗಿ ಇನ್ನೊಂದು ರೀತಿಯಿಂದ ಮನವೊಲಿಸಬಹುದಾಗಿದೆ. ಮೊದಲನೆಯ ವಿಧಾನವೇದರೆ ಪ್ರಬಲ ರಾಷ್ಟ್ರಗಳು ತಮ್ಮ ಪ್ರಭಾವದ ವಿಸ್ತಾರಕ್ಕಾಗಿ ಉತ್ತರ ಅಟ್ಲಾಂಟಿಕ್ ಸಂಧಾನ, ಮಧ್ಯಯುರೋಪಿಯನ್-ಸಂಧಾನ, ಆಗ್ನೇಯ ಏಶಿಯದ ಸಂಧಾನ ಮೊದಲಾದವುಗಳನ್ನು ರಚಿಸಿಕೊಂಡು ಪ್ರಪಂಚಶಕ್ತಿಯ, ಸಮತೋಲವನ್ನು ಪಾಲಿಸಿಕೊಳ್ಳುವ ಹಳೆಯ ನೀತಿಯನ್ನು ಅನುಸರಿಸಬಹುದಾದರೆ, ಭಾರತವು ಸಾಮ್ರಾಜ್ಯವಾದ-ಉಪನಿವೇಶನವಾದಗಳನ್ನು ನಿಷಿದ್ಧವೆಂದು ಸಾರಿ, ಪ್ರತಿಯೊಂದು ರಾಷ್ಟ್ರದ ರಾಜಕೀಯ ಸ್ವಾತಂತ್ರ್ಯ ಮತ್ತು ಸಮಾನತೆಯ ಮೂಲ ಅಧಿಕಾರವನ್ನು ಸಂಯುಕ್ತ ರಾಷ್ಟ್ರಸಂಘದ ಆದೇಶದಂತೆ ಆ ರಾಷ್ಟ್ರಗಳು ಪಡೆಯುವಂತೆ ಹೆಣಗಬಾರದು ಎಂದರೆ ಎಲ್ಲಿಯ ನ್ಯಾಯ ? ಇವುಗಳಲ್ಲಿ ಅಂತರರಾಷ್ಟ್ರೀಯ ಸಂಬಂಧವನ್ನು ಸುಗಮಗೊಳಿಸುವಂತೆ ನಿಜವಾಗಿಯೂ ಪ್ರಯತ್ನಿಸುತ್ತಿರುವರಾರು? ಎಂದು ಕೇಳಬೇಕಾಗುತ್ತದೆ. ಅದರಂತೆಯೆ ಯುದ್ಧದಿಂದ ಜರ್ಜರಿತವಾದ ಯುರೋಪಖಂಡವು ಪುನರುಜ್ಜೀವನಗೊಳ್ಳುವಂತೆ ಪಾಶ್ಚಾತ್ಯ ರಾಷ್ಟ್ರಗಳು ಮಾರ್ಶಲ್ ಯೋಜನೆಯನ್ನು ಮಾಡಿಕೊಳ್ಳಬಹುದು-ಅದರಲ್ಲಿ ಅವರವರ ಪ್ರತಿಷ್ಠೆಯನ್ನು ಬೆಳೆಯಿಸಿಕೊಳ್ಳಬೇಕೆಂಬ ಯಾವ ಉದ್ದೇಶವೆ ಅಡಕವಾಗಿರಲಿ—ಇತ್ತ ಭಾರತವೆ ಮೊದಲಾದ ನವಸ್ವತಂತ್ರ ರಾಷ್ಟ್ರಗಳು ಪರಸ್ಪರ ಸಹಕಾರದ ಮೂಲಕ ಸ್ವಾವಲಂಬನದ-ಸ್ವಾಭಿಮಾನದ ಕೋಲಂಬೋ ಯೋಜನೆಯನ್ನು ಮಾಡಿಕೊಳ್ಳಬಾರದು ಎಂದರೆ ಅದೆಂತಹ ವಾದ ಎಂದು ಮೂದಲಿಸಬಹುದಲ್ಲವೇ ?

ಇನ್ನು ವಿಧಾಯಕವಾದ ರೀತಿಯಿಂದ ವಿಚಾರಿಸಿದರೆ ಏಶಿಯದ ರಾಷ್ಟ್ರಗಳು ಮತ್ತು ಅಪ್ರಬುದ್ಧ ಹಾಗೂ ಅಲ್ಪವಿಕಸಿತ ಅನ್ಯ ರಾಷ್ಟ್ರಗಳು ತಮ್ಮ ಪ್ರದೇಶದಲ್ಲಿ ಶಾಂತಿಯು ನೆಲಸುವಂತೆ ಮತ್ತು ಸುಭಿಕ್ಷವು ತಲೆದೋರುವಂತೆ

ಮಾಡಿಕೊಂಡ ಯೋಜನೆಗಳು ವಿಶ್ವಸಂಸ್ಥೆಯ ಆದರ್ಶಕ್ಕೆ ಅಡ್ಡಿಯಾಗುವುದು ಹೇಗೆ ? ಆ ವಿಶ್ವಸಂಘಟನೆಯ ಮುಖಾಂತರ ಕಾರ್ಯವು ಸ್ಥಗಿತವಾದಾಗ, ವಿಚಾರ ನಡೆಯುವದು ಕೂಡ ಪಕ್ಷಪಕ್ಷಗಳಜಗಳದಲ್ಲಿ, ದುಸ್ತರವಾದಾಗ್ಗೆ ಆ ಆದರ್ಶಗಳಲ್ಲಿ ಅತ್ಯಂತ ಆತ್ಮೀಯತೆಯನ್ನು ಕಂಡ ರಾಷ್ಟ್ರಗಳು, ಅನ್ಯ ರಚನಾತ್ಮಕ ಮಾರ್ಗದಿಂದ ಅವನ್ನು ಸಾಧಿಸಿಕೊಳ್ಳುವದೇ ಉಚಿತವಾದ ನೀತಿಯಲ್ಲವೆ ? ಅಂತೆಯೆ ಸಂಯುಕ್ತ ರಾಷ್ಟ್ರಸಂಘದ ಸಭಾಂಗಣದ ಹೊರಗಿನಿಂದಾದರೂ ಆದರ ಗುರಿಯ ಸಾಧನೆಯೆ ನಡೆಯುತ್ತಿದೆಯೆಂಬುದು ವಿಶ್ವಸಂಸ್ಥೆಯ ಪ್ರೀತ್ಯಾಭಿಮಾನಗಳಿಗೆ ಪೋಷಕವಾಗಿಯೆ ಇದೆ ಎಂದು ತಿಳಿಯಬೇಕಲ್ಲವೇ ! ಅದು ವಿಶ್ವಸಂಸ್ಥೆಯ ಗೌರವವನ್ನು ಕಡಿಮೆಮಾಡುವ ಇಲ್ಲವೆ ಅದರೊಡನೆ ಸ್ಪರ್ಧೆಯನ್ನು ನಡೆಯಿಸುವ ಪ್ರಯತ್ನವೆಂದು ಯಾರೂ ಭಾವಿಸಕೂಡದು. ಪ್ರಚಲಿತವಾಗಿರುವ ಶಕ್ತಿಯ ಸಮತೋಲ ನೀತಿಯು ದೋಷಯುಕ್ತವಾಗಿರುವಂತೆಯೆ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿಯೂ ಅರ್ಹತೆ ಮತ್ತು ಲಾಭಗಾರಿಕೆ ತತ್ವಗಳು ನಿರರ್ಥಕವಾದುವು ಎಂಬುದನ್ನು ನಾವು ಸ್ಪಷ್ಟವಾಗಿ ತಿಳಿಯಬೇಕಾಗಿದೆ. ಈ ವಿಷಯವನ್ನು ಅಧಿಲೇಖನವಲ್ಲಿ ಸಂಯುಕ್ತ ರಾಷ್ಟ್ರಸಂಘವು ಅಮರಗೊಳಿಸಿದ್ದರೂ, ಪ್ರತ್ಯಕ್ಷ ಪ್ರಪಂಚದಲ್ಲಿ ಆಚರಣೆಯ ರೂಪವನ್ನು ತಳೆದಿರುವದಿಲ್ಲ. ತನ್ನ ಉನ್ನತವಾದ ಪರಂಪರೆ ಮತ್ತು ತನ್ನ ಉದಾತ್ತವಾದ ಚಾರಿತ್ರ್ಯದ ಮೂಲಕ ಭಾರತವು ವಿಶ್ವಸಂಸ್ಥೆಯ ಆಧಾರವೆಂದು ಸ್ವೀಕರಿಸಿದ ವಿಚಾರಗಳನ್ನು ತನ್ನ ಪರಿಪಾಠದಿಂದ ಪ್ರತ್ಯಕ್ಷಗೊಳಿಸಿ ತೋರಿಸಲಿಕ್ಕೆ ತವಕಗೊಂಡಿದೆ. ಇದು ಭಾರತವು ಸಂಯುಕ್ತ ರಾಷ್ಟ್ರಸಂಘಕ್ಕೆ ಸಲ್ಲಿಸಿದ ಕಾಣಿಕೆ.

ಅಂತೆಯೆ ಭಾರತದ ಈ ರೀತಿಯನ್ನು ಸೂಕ್ಷ್ಮವಾಗಿ ಅವಲೋಕಿಸುವಾಗ್ಗೆ ಸಂಯುಕ್ತ ರಾಷ್ಟ್ರಸಂಘವು ಆರಂಭವಾಗಿ ಹತ್ತು ವರ್ಷಗಳಾದ ಈ ಅವಧಿಯಲ್ಲಿ ಅದರ ಧ್ಯೇಯವು ಎಷ್ಟು ಮಟ್ಟಿಗೆ ಸಾಧಿಸಿದೆ ಎಂಬುದನ್ನು ಪರೀಕ್ಷಿಸುವದು ಅವಶ್ಯವಲ್ಲವೇ! ದಿವ್ಯವಾದ ಆತ್ಮವಿಕಾಸದ ಪ್ರಯೋಗದಲ್ಲಿ ಮನುಷ್ಯನು ಸಂಯುಕ್ತರಾಷ್ಟ್ರಸಂಘದಂತಹ ವಿಶ್ವದ ವಿವೇಕವನ್ನು ಪ್ರತಿಬಿಂಬಿಸುವ ಸಂಸ್ಥೆಯನ್ನು ಕಟ್ಟಿಕೊಂಡುದು ಅದ್ಭುತವಾದ ಕನಸು ಎಂಬುದರಲ್ಲಿ ಆಶ್ಚರ್ಯವಿಲ್ಲ. ಆ ಕನಸಿನ ಮಂದಿರವನ್ನು ಭದ್ರವಾದ

ತಳಹದಿಯ ಮೇಲೆ ಕಟ್ಟಿಕೊಳ್ಳಬೇಕು ಎಂಬ ಆಶಯದಿಂದ ಸಾಕಷ್ಟು ವ್ಯಾಪಕವಾದ ಮತ್ತು ಕಾರ್ಯನಿಷ್ಠವಾದ ಸಂವಿಧಾನವನ್ನು ನಿರ್ಮಿಸಿ ಕೊಂಡನು. ಅದರ ಮುಖಾಂತರವಾಗಿ ಈ ಇಡಿಯ ದಶಕದಲ್ಲಿ ಅಲ್ಲಲ್ಲಿ ಚಿಕ್ಕಪುಟ್ಟ ಕಲಹ-ಕೋಪಾಟೋಪಗಳು ಜರುಗಿದರೂ ವಿಶ್ವಶಾಂತಿಯು ಇನ್ನೂ ಭಂಗಗೊಳ್ಳಲಾರದೆ ಬಂಧುರವಾಗಿ ಉಳಿದುದು ನಮ್ಮೆಲ್ಲರ ಸುದೈವ. ರಾಜಕೀಯ ರಂಗದಲ್ಲಿ ಹಿರಿಯ ರಾಷ್ಟ್ರಗಳ ಬಲದಿಂದಾಗಲೀ, ಅನಾಸ್ಥೆಯಿಂದ ಎಂದೇ ತೋರಲಿ ಶಾಂತಿಭಂಗದ ಮಹಾವಿಪತ್ತು ಮಾತ್ರ ಇನ್ನು ಬಂದೊದ ಗಿಲ್ಲ. ಅದರಂತೆಯೆ ಅತ್ತ ಸಾಮಾಜಿಕ, ಆರ್ಥಿಕ, ಭೌಗೋಲಿಕ, ಆರೋಗ್ಯ ವಿಷಯಕ ಶೈಕ್ಷಣಿಕ ಮೊದಲಾದ ಕ್ಷೇತ್ರಗಳಲ್ಲಿ ಅದ್ಭುತವಾದ ಪ್ರಗತಿಯು ತಲೆದೋರುವಂತೆ ಸೇವೆಯು ನಡೆಯುತ್ತಲಿದೆ. ನ್ಯೂಯಾರ್ಕ ನಗರದಲ್ಲಿ ಉನ್ನತವೂ ಸುಂದರವೂ ಆದ ಪ್ರಮುಖ ಕಾರ್ಯಾಲಯವು ಸಿದ್ಧವಾಗಿ ಅಲ್ಲಿ ಇಡಿಯ ಪ್ರಪಂಚದ ಹಿತವನ್ನೆ ತಮ್ಮ ಸೇವಾದೀಕ್ಷೆಯೆಂದು ಭಾವಿಸಿದ ಕಾರ್ಯವಾಹಕರ ಪಡೆಯು ಹಗಲಿರುಳು ದುಡಿಯುತ್ತಲಿದೆ. ಈ ಸಂಸ್ಥೆಯ ಪರವಾಗಿ ಎರಡನೆಯ ಮಹಾಯುದ್ಧದ ನಿಷ್ಕ್ರಾಂತ ಮತ್ತು ಧೃತಿಗೆಟ್ಟ ಜನರ ಉಪಚಾರವು ಇಡಿಯ ಸೇವಾಪ್ರಪಂಚದಲ್ಲಿಯೆ ಅನುಕರಣೀಯವೆನಿಸಿದೆ. ದಿಕ್ಕಿಲ್ಲದ ಮಕ್ಕಳ ಆರೈಕೆ ಮತ್ತು ರಕ್ಷಣೆ, ಆಧಾರವಿಲ್ಲದ ಮಹಿಳೆಯರ ಮಾರ್ಗದರ್ಶನ ಮತ್ತು ಶಿಕ್ಷಣ, ಉದ್ಯೋಗವನ್ನು ಕಳೆದುಕೊಂಡು ಕಂಗೆಟ್ಟ ಜನರಲ್ಲಿ ಎಷ್ಟೋ ಜನರಿಗೆ ಪುನಃ ಉದ್ಯಮವನ್ನು ಆತ್ಮವಿಶ್ವಾಸವನ್ನು ಕಲ್ಪಿಸಿ ದುದು ಪ್ರಪಂಚ ಸಂಸ್ಥೆಯ ಅಂಗೋಪಾಂಗಗಳು ಗೈದ ಅವಿಸ್ಮರಣೀಯ ಕಾರ್ಯವಾಗಿದೆ.

ಅದರಂತೆಯೆ ವಿಶ್ವಸಂಸ್ಥೆಯ ಅಂಗಗಳಾದ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಘಟನೆಯ ಮೂಲಕ ಸಾಗಿರುವ ಅಭೂತಪೂರ್ವ ಅವಲೋಕನ, ಪ್ರಯೋಗ, ಪ್ರಕಾಶನ ಮತ್ತು ಸೇವೆಗಳು ಪ್ರಪಂಚದ ಇತಿಹಾಸದಲ್ಲಿಯೆ ಆಶ್ಚರ್ಯಕರವಾಗಿವೆ. ದೇಶದೇಶಗಳಲ್ಲಿ ನಡೆಯುತ್ತಿರುವ ಶೈಕ್ಷಣಿಕ ಕಾರ್ಯಕ್ರಮಗಳನ್ನು ಸುಗಮಗೊಳಿಸುವದು, ಸಂಗೀತ, ಲಲಿತ ಕಲೆ-ಸಾಹಿತ್ಯಗಳೇ ಮೊದಲಾದ ಕ್ಷೇತ್ರಗಳಲ್ಲಿ ಪ್ರಪಂಚದ ಒಂದು ಮೂಲೆ ಯಿಂದ ಇನ್ನೊಂದಕ್ಕೆ ವಿಚಾರವಿನಿಮಯ ಜರುಗುವದು, ವಿಜ್ಞಾನದ ಹೊಸ

ಹೊಸ ರೂಪರಂಗಗಳ ಲಾಭವು ಪ್ರಪಂಚದ ಪ್ರತಿಯೊಬ್ಬ ಪ್ರಜೆಗೆ ದೊರಿಯುವಂತೆ ಅಲ್ಲಲ್ಲಿ ವಿಶಾಲವಾದ ಪ್ರಯೋಗಮಂದಿರ, ಮತ್ತು ಪ್ರತ್ಯಕ್ಷ ಕಾರ್ಯಕ್ರಮಗಳನ್ನು ನಿಯೋಜಿಸುವದು, ಇಂತಹ ಸೇವೆಯಿಂದ ತಾನು ಇಟ್ಟುಕೊಂಡ ಉದಾತ್ತವಾದ ಧ್ಯೇಯವನ್ನು ಸಾಧಿಸುವದು, ಪ್ರಪಂಚ ಸಂಸ್ಥೆಯ ಸಾಧ್ಯವಾಗಿದೆ; ವ್ರತವೆನಿಸಿದೆ. ಜಗತ್ತಿನಲ್ಲಿ ರೂಢವಾಗಿರುವ ಆಚಾರ ವಿಚಾರಗಳು, ಭಾಷೆ ವೇಷಗಳು, ನೀತಿ ನಿಯಮಗಳೆ ಮೊದಲಾದ ವೈವಿಧ್ಯವನ್ನು ಲಕ್ಷ್ಯಕ್ಕೆ ತೆಗೆದುಕೊಂಡರೆ ವಿಶ್ವಸಂಸ್ಥೆಯ ಈ ಮಹಾತ್ಪ್ರಯೋಗವು ಹೇಗೆ ಒಂದು ಯಜ್ಞದ ಸ್ವರೂಪವನ್ನು ತಳೆದಿರಬಹುದು ಎಂಬ ಕಲ್ಪನೆಯು ಬಾರದಿರದು. ಈ ಯಾಗದ ಫಲವಾಗಿ ನಮಗೆ ವಿಶ್ವದಲ್ಲಿ ಶಾಂತಿಯು ನೆಲಿಸಬೇಕಾಗಿದೆ; ಸುಭಿಕ್ಷವು ಕಾಣಬೇಕಾಗಿದೆ; ಸಮಾನತೆ–ಸೌಹಾರ್ದಗಳು ಬೇರೂರಬೇಕಾಗಿವೆ.

ಆದರೆ ಸಂಕಲ್ಪಕ್ಕೆ ಉಚಿತವಾದ ಸಿದ್ಧಿಯು ಕಾರಣದಿರುವದು ಈ ಪ್ರಯೋಗದ ಜೇರಿ ಒಂದು ಚಿತ್ರವಾಗಿದೆ. ಮನುಷ್ಯನು ವಾಯುವೇಗದಿಂದ ಕನಸಿನ ಮಂದಿರವನ್ನೆನೊ ಕಟ್ಟುತ್ತಾನೆ. ಆ ಬಗೆಯ ಮನೋರಥಕ್ಕೆ ಯಾವ ನಿಯಮ ನಿಯಂತ್ರಣವೂ ಇರುವದಿಲ್ಲ. ಆದರೆ ಅದನ್ನು ಕಾರ್ಯಗತ ಮಾಡುವ ಸಿದ್ಧತೆಯು ಸಾಲದುದಾಗಿದೆ. ಆದರ್ಶ ಸಿದ್ಧಿಗಾಗಿ, ತಕ್ಕ ಮಗೋಭೂಮಿಕೆಯೂ ಸಿದ್ಧವಾಗಬೇಕಾಗುತ್ತದೆ. ಅಂತೆಯೆ ಪ್ರಪಂಚ ಸಂಸ್ಥೆಯ ಆದರ್ಶದಲ್ಲಿ ಆಸ್ಥೆಯುಳ್ಳ ಪ್ರತಿಯೊಬ್ಬನಿಗೆ ಚಿಂತೆಯಾಗಿದೆ. ಯಾವ ಸಮಾಜ ನಿಯಮದಿಂದ ಮಾನವನಿಗೆ ತನ್ನ ಕಲ್ಯಾಣವನ್ನು ಸಾಧಿಸಿಕೊಳ್ಳಲಿಕ್ಕೆ ಸಹಾಯವಾಗುವದೆಂದು ತಿಳಿದುಕೊಂಡು ನಿರ್ಮಿಸಿಕೊಂಡನೊ ಅದೇ ಸಮಾಜವು ಇಂದು ಅಕಲ್ಪಿತ ಆತಂಕಗಳಿಗೆ ಈಡಾಗಿ ಮುಂದೆ ಸಾಗದಂತಹ ಪರಿಸ್ಥಿಯನ್ನು ಎದುರಿಸಿದೆ. ವಿಶ್ವಸಂಸ್ಥೆಯಂತಹ ಸಂಘಟನೆಯು ತನ್ನ ಧ್ಯೇಯವನ್ನು ಸುಗಮವಾಗಿ ಸಾಗಿಸಬೇಕು, ಎಂಬ ದೃಷ್ಟಿಯಿಂದ ಕೆಲವು ನಿಯಮ ನಿಬಂಧನೆಗಳನ್ನೊಳಗೊಂಡ ಒಂದು ಸಂವಿಧಾನವನ್ನು ಕಲ್ಪಿಸಿಕೊಂಡಿತು. ಆದರೆ ಅದೇ ಸಂವಿಧಾನವು ಕಾರ್ಯಕ್ಕೆ ಕಾಲ್ತೊಡಕಾಗಿ ಪರಿಣಮಿಸಿತು. ಅದರಂತೆಯೆ ಎಲ್ಲರ ಹಿತಕ್ಕಾಗಿ ಕೆಲವು ನೀತಿಯ ಮಾರ್ಗಗಳನ್ನು ಸಂಯುಕ್ತ ರಾಷ್ಟ್ರಸಂಘವು ಸಾರಿ ತೋರಿಸಿದರೂ, ವಿಶ್ವ

ಸಂಸ್ಥೆಯ ಅಧಿಷ್ಠಾನಕ್ಕೆ ಒಳಪಟ್ಟ ಮತ್ತು ಆದರ್ಶವನ್ನು ಒಪ್ಪಿದ ರಾಷ್ಟ್ರಗಳೇ ಆ ನೀತಿಯನ್ನು ಉಲ್ಲಂಘಿಸಿದವು. ದಂಡೋಪಾಯದ ಔಚಿತ್ಯವನ್ನು ಒಪ್ಪದ ಇಲ್ಲವೆ ಪಡೆಯದ ವಿಶ್ವ ಸಂಸ್ಥೆಯು ಅಪರೋಕ್ಷವಾಗಿ ಗೈದ ಈ ಅವಮಾನವನ್ನು ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾಯಿತು. ಇಂತಹ ವಿಚಿತ್ರ ಪರಿಸ್ಥಿತಿಯು ಇಂದು ನಿರ್ಮಾಣವಾಗಿದೆ. ಆದರೆ ಇಂತಹ ತೊಡಕುಗಳನ್ನು ತಪ್ಪಿಸುವ ದಾರಿಯೂ ಮಾನವನಿಗೆ ತಿಳಿದೇ ಇದೆಯೆಂಬುದು ಅವನ ವೈಶಿಷ್ಟ್ಯವಾಗಿದೆ.

ಈ ಶತಮಾನದಲ್ಲಿ ಮಾನವನ ಚರಿತ್ರೆಯಲ್ಲಿ ಅಹಿಂಸಾತ್ಮಕ ಪ್ರಯತ್ನದಿಂದ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿ ಭಾರತದ ದೃಷ್ಟಾಂತವೊಂದು ಹೊಸ ಅಧ್ಯಾಯವನ್ನೆ ಆರಂಭಿಸಿದಂತಾಗಿದೆ. ಆದರೆ ಭಾರತದ ಈ ಆಂದೋಲನವು ಕೇವಲ ರಾಜಕೀಯಕ್ಕಷ್ಟೆ ಸಂಬಂಧಿಸಿದುದಾಗಿಲ್ಲ; ಮತ್ತು ಅದು ತಾತ್ಪೂರ್ತಿಕವಾಗಿ ಆದರ್ಶವಾಗಿ ರಾಜಕೀಯ ವಿಮೋಚನೆಯನ್ನು ಪಡೆಯುವ ಕಾರಣಕ್ಕಾಗಿ ಮಾಡಿಕೊಂಡ ಶಸ್ತ್ರವಾಗಿಲ್ಲ. ಆ ಒಂದು ಕಾರ್ಯಕ್ರಮದಲ್ಲಿ ಭಾರತೀಯ ಜೀವನದ ಇಡಿಯ ದರ್ಶನವೆ ಕಾಣುತ್ತಿದ್ದರೆ ಅಚ್ಚರಿಯೇನೂ ಇಲ್ಲ. ಅಂತೆಯೆ ಕೇವಲ ರಾಜನೀತಿಯಲ್ಲಿ ಭಾರತವು ಈ ಅಪೂರ್ವವಾದ ಚಳವಳಿಯನ್ನು ಹೂಡಿ ಹೆಸರನ್ನು ಗಳಿಸಿಕೊಳ್ಳದೆ, ಸಾಮಾಜಿಕ ವಿಕಾಸ ಮತ್ತು ಆರ್ಥಿಕ ಅಭಿವೃದ್ಧಿಯ ವಿಷಯವಾಗಿಯೂ ತನ್ನದೇ ಆದ ತತ್ವಗಳನ್ನು ಇಟ್ಟುಕೊಂಡಿದೆ. ಅಹಿಂಸೆ ಮತ್ತು ಸತ್ಯಗಳಂತಹ ಶಸ್ತ್ರದಿಂದ ಹೇಗೆ ಭಾರತವು ಪ್ರಪಂಚದ ರಾಜಕೀಯರಂಗದಲ್ಲಿ ಹೊಸ ಹೆಜ್ಜೆಯನ್ನು ಹಾಕಿ ತೋರಿಸಿರುವದೋ ಹಾಗೆಯೆ ಆತ್ಮನಿರ್ಣಯ ಮತ್ತು ಸ್ವಾವಲಂಬನದಂತಹ ತತ್ವಗಳನ್ನು ಅನ್ಯ ಕ್ಷೇತ್ರಗಳಲ್ಲಿ ಆಚರಣೆಗೆ ತಂದು ತೋರಿಸುತ್ತಲಿದೆ. ಆರ್ಥಿಕ ಸಹಾಯವು ನೈತಿಕ ಅಧಃಪತನಕ್ಕೆ ಕಾರಣವಾಗಬಾರದು, ಸಾಮಾಜಿಕ ಪ್ರೋತ್ಸಾಹನವು ವೈಯಕ್ತಿಕ ವೈಶಿಷ್ಟ್ಯವನ್ನು ಕಳೆದುಕೊಳ್ಳುವಂತೆ ಮುಳುವಾಗಬಾರದು, ರಾಜಕೀಯ ಬೆಂಬಲವು ದಾಸ್ಯವನ್ನು ತಂದೊಡ್ಡಲಿಕ್ಕೆ ಸಾಧನವಾಗಬಾರದು ಎಂಬುದು ಈ ಸ್ವಾಭಿಮಾನದ, ಸ್ವಾವಲಂಬನದ ಮತ್ತು ಸ್ವಾತಂತ್ರ್ಯದ ಗುಟ್ಟಾಗಿದೆ.

ಇದೇ ರಹಸ್ಯವನ್ನು ಅಂತರ್ರಾಷ್ಟ್ರೀಯ ಸಂಬಂಧದಲ್ಲಿಯೂ ಕಾರ್ಯರೂಪಕ್ಕಿಳಿಸಿದ ಶ್ರೇಯಸ್ಸು ಭಾರತದ್ದಾಗಿದೆ. ಆದರೆ ಅದನ್ನು ತನ್ನ ನೇಮಿಕ

ಮತ್ತು ಸಂಕುಚಿತ ಸುಖ-ಸೌಕರ್ಯಗಳನ್ನು ಸಾಧಿಸಿಕೊಳ್ಳಲಿಕ್ಕೆ ಅಣಿ ಮಾಡಿಕೊಳ್ಳದೆ, ವಿಶ್ವಸಂಸ್ಥೆಯ ಧ್ಯೇಯಸಾಧನೆಗಾಗಿ ವಿನಿಯೋಗಿಸುತ್ತಿರುವದು ಇನ್ನೂ ಹೆಚ್ಚು ಕೌತುಕಪ್ರದವಾದ ವಿಷಯ. ಅಂತಹ ತನ್ನ ನೀತಿಯನ್ನು ಸ್ವಂತದ ಅವಮಾನ ಅನನುಕೂಲಗಳನ್ನು ಕೂಡ ಲೆಕ್ಕಿಸದೆ ಬಹುಜನರ ಹಿತದ ದೃಷ್ಟಿಯಿಂದ ಪ್ರಯೋಗಕ್ಕೆ ತಂದಿರುತ್ತದೆ-ಭಾರತ! ವರ್ಣದ್ವೇಷವು ನಿಷಿದ್ಧ ಎಂದು ಸಾರುವಾಗ್ಗೆ ತನ್ನ ಪ್ರಜೆಗಳ ರಕ್ಷಣೆಯೇ ಭಾರತದ ಉದ್ದೇಶವಾಗಿದ್ದರೂ, ವಿಶ್ವಸಂಸ್ಥೆಯು ಶಾಂತಿಯನ್ನು ಕಾಪಾಡಿಕೊಳ್ಳುವ ಹಿರಿಯ ಗುರಿಯನ್ನು ಕಳೆದುಕೊಳ್ಳಬಾರದು ಎಂಬ ಉನ್ನತ ದೃಷ್ಟಿಯಿಂದ ಭಾರತವು ಆಫ್ರಿಕೆಯು ಮಾಡುತ್ತಿರುವ ಅನ್ಯಾಯವನ್ನು ಸಹಿಸಿಕೊಳ್ಳುತ್ತಲಿದೆ. ಅದರಂತೆಯೆ ಅಲ್ಲಿಯ ಜನರು ಸ್ವಂತ ಪ್ರಯತ್ನದಿಂದ ಜಗತ್ತಿನ ಅಭಿಮತವನ್ನು ರೂಪುಗೊಳಿಸಿ ತನ್ಮೂಲಕ ತಮ್ಮ ಉದ್ಧಾರವನ್ನು ಕಂಡುಕೊಳ್ಳಲಿ ಎಂಬ ಇನ್ನೊಂದು ವಿಚಾರಕ್ಕೆ ಭಾರತವು ಎಡೆಯನ್ನುಂಟುಮಾಡಿಕೊಟ್ಟಿದೆ.

ಇಂದು ಸಂಯುಕ್ತ ರಾಷ್ಟ್ರಸಂಘವು ಹತ್ತನೆಯ ವರ್ಷದಲ್ಲಿ ಕಾಲಿರಿಸಿದೆ. ಈಗಾಗಲೇ ಅದರ ಸಂವಿಧಾನವನ್ನು ತಿದ್ದುವ ಮತ್ತು ಅದರ ಗೊತ್ತುಗುರಿಗಳನ್ನು ಪುನರ್ವಿಮರ್ಶಿಸುವ ಮಾತುಗಳು ಅಲ್ಲಲ್ಲಿ ಕೇಳಬರುತ್ತಲಿವೆ. ಅದಕ್ಕೆ ಕಾರಣ ವಿಶ್ವಸಂಸ್ಥೆಯ ಸಭೆಗಳಲ್ಲಿ ಮಾತುಮಾತಿಗೆ ಉಂಟಾಗುತ್ತಿರುವ ಬಿಕ್ಕಟ್ಟು, ಮತ್ತು ತನ್ಮೂಲಕ ಶಾಂತಿಭಂಗದ ಭೀತಿಗಳು ಎಂಬುದು ಸ್ಪಷ್ಟವಾಗಿದೆ. ಆದರೆ ಈ ಬಗೆಯ ಬಿಕ್ಕಟ್ಟನ್ನು ಬಗೆಹರಿಸಲಿಕ್ಕೆ ಮತ್ತು ಭೀತಿಯನ್ನು ನಿವಾರಿಸಲಿಕ್ಕೆ ಅಣಿಯಾಗುವ ಮೊದಲು, ಅವುಗಳ ಮೂಲವನ್ನು ಹುಡುಕಿ ತೆಗೆಯುವದು ಅವಶ್ಯ. ಪ್ರಪಂಚದ ಪ್ರಮುಖ ರಾಷ್ಟ್ರಗಳು ವೈಯಕ್ತಿಕವಾಗಿ ಇಟ್ಟುಕೊಂಡ ಧ್ಯೇಯವೊಂದು ಬೇರೆ, ಸಂಯುಕ್ತವಾಗಿ ಒಪ್ಪಿದ ಆದರ್ಶವೊಂದು ಬೇರೆಯಾಗಿರುವದೇ ಇದರ ಮೂಲ. ಹೀಗೆ ವಿಚಾರ ಮತ್ತು ಆಚಾರಗಳಲ್ಲಿ ಉಂಟಾಗಿರುವ ಭೇದ ಭಾವ, ಸಾರ್ವಜನಿಕವಾಗಿ ಸಮ್ಮತವಾದ ವಿಷಯ ಮತ್ತು ಆತ್ಮಗತವಾಗಿ ಆಚರಿಸತಕ್ಕ ರೀತಿಗಳಲ್ಲಿರುವ ಅಂತರ, ತನಗಾಗಿ ಒಂದು ನಿಯಮ, ಮತ್ತು ಪರರಿಗಾಗಿ ಇನ್ನೊಂದು ಎಂಬ ತಾರತಮ್ಯಗಳೇ ಮೊದಲಾದ ಹಿಂದಿನಕಾಲದ ಸ್ಮರಣೆಯನ್ನು ತಂದುಕೊಡುವ ನೀತಿಯನ್ನು ಇಂದು ತೊರೆಯಬೇಕಾಗಿದೆ. ಧ್ಯೇಯವೆಂದು ಒಪ್ಪಿದ ವಿಚಾರ

ಗಳನ್ನು ಕಾರ್ಯರೂಪಕ್ಕಿಳಿಸುವ ಧೈರ್ಯವನ್ನು ನಾವು ಪಡೆಯಬೇಕಾಗಿದೆ. ಸಕಲರಿಗೆ ಸಾರ್ವತ್ರಿಕವಾಗಿ ತಗಲಬಹುದಾದಂತಹ ನಿಯಮ ನಿಬಂಧ ಗಳಿಗೆ ನಾವೂ ತಲೆಯೊಡ್ಡುವ ಪ್ರಾಮಾಣಿಕತೆಯನ್ನು ನಾವು ಗಳಿಸಿಕೊಳ್ಳ ಬೇಕಾಗಿದೆ. ಈ ಬಗೆಯ ನೈತಿಕ ಬಲವನ್ನು ಪಡೆದುಕೊಳ್ಳಬೇಕೆಂಬುದೇ ಮಹಾತ್ಮಾ ಗಾಂಧಿಯವರಂತಹ ಭಾರತೀಯ ಧುರೀಣರು ಹೇಳಿದ ಮತ್ತು ಮಾಡಿತೋರಿಸಿದ ಮಾತಾಗಿದೆ. ಇಂದು ಅಂತರ್ರಾಷ್ಟ್ರೀಯ ಸಂಬಂಧದಲ್ಲಿ ಆ ಬಗೆಯ ನವೀನ ನೀತಿಯು ತಲೆದೋರುವಂತೆ ಹೆಣಗುವದು ಭಾರತದ ಕಾರ್ಯಭಾರವಾಗಿದೆ.

ಪ್ರಪಂಚ ಸಂಸ್ಥೆಯ ಸದಸ್ಯ ರಾಷ್ಟ್ರಗಳು ಸಂಕಲ್ಪ ಮಾಡಿಕೊಂಡ ವಿಷಯಗಳನ್ನು ಪ್ರಾಮಾಣಿಕವಾಗಿ ಕಾರ್ಯರೂಪದಲ್ಲಿ ಕಾಣುವಂತೆ ಪ್ರಯತ್ನವನ್ನು ಕೈಕೊಳ್ಳುವದು ಹಿರಿಯ ಮಾತಾಗಿದೆ. ಯುದ್ಧಗಳಿಂದ ಭಿನ್ನಾಭಿಪ್ರಾಯಗಳನ್ನು ನಿರ್ಣಯಿಸಿಕೊಳ್ಳುತ್ತಿದ್ದ ಕಾಲವು ಹೋಗಿ, ಸಂಧಾನ ಮತ್ತು ವಿಚಾರವಿನಿಮಯಗಳಿಂದ ಪರಸ್ಪರರ ಪರಿಚಯವನ್ನು ಮಾಡಿಕೊಳ್ಳುವ ಪರಿಸ್ಥಿತಿಯು ಪ್ರಾಪ್ತವಾದಂತೆಯೆ ರಣರಂಗದ ಬದಲಾಗಿ ಸಭಾಂಗಣವು ಇಂದಿನ ಸಮಸ್ಯೆಗಳನ್ನು ಪರಿಹರಿಸುವ ಸ್ಥಾನವಾಗಿದೆ. ಅಂತೆಯೇ ಹೊಸ ಪರಿಸ್ಥಿತಿ ಮತ್ತು ಸಾಧನಗಳಿಗೆ ತಕ್ಕಂತೆ ನಾವು ನಮ್ಮ ಕಾರ್ಯಕ್ರಮವನ್ನು ಸರಿಪಡಿಸಿಕೊಳ್ಳಬೇಕಲ್ಲವೆ? ಆದರ್ಶದ ಮಾರ್ಗದಲ್ಲಿ ಬರಬಹುದಾದ ಯಾವ ಆತಂಕವನ್ನಾದರೂ ನಾವು ಲೆಕ್ಕಿಸದಂತಹ ಪ್ರಯತ್ನಗಳನ್ನು ಕೈಕೊಳ್ಳುವ ನವೀನ ನೀತಿಯನ್ನಿಂದು ಅನುಸರಿಸಬೇಕಾಗಿದೆ.


KARNATAK GRANTHALAYA
No. ೭೬೬೧೭
DHARWAR

# ಪರಿಶಿಷ್ಟ

## ಸಂಯುಕ್ತ ರಾಷ್ಟ್ರಸಂಘದ ಸದೆಸ್ಯ ರಾಷ್ಟ್ರಗಳು

೧) ಅಫಘಾನಿಸ್ತಾನ
೨) ಅರ್ಜೆಂಟಿನಾ
೩) ಆಸ್ಟ್ರೇಲಿಯಾ
೪) ಬೆಲ್ಜಿಯಮ್
೫) ಬೋಲಿವ್ಹಿಯಾ
೬) ಬ್ರಾಝಿಲ
೭) ಬ್ರಹ್ಮದೇಶ
೮) ಬೆಲೋರಶಿಯನ್(ಎಸ್.ಎಸ್.ಆರ್)
೯) ಕ್ಯಾನಡಾ
೧೦) ಚಿಲಿ
೧೧) ಚೀನ
೧೨) ಕೊಲಂಬಿಯಾ
೧೩) ಕೊಸ್ಟಾರಿಕಾ
೧೪) ಕ್ಯೂಬಾ
೧೫) ಝೆಕೊಸ್ಲೋವಾಕಿಯಾ
೧೬) ಡೆನ್ಮಾರ್ಕ
೧೭) ಡೊಮಿನಿಕನ್ ರಿಪಬ್ಲಿಕ್
೧೮) ಇಕ್ವೇಡೋರ
೧೯) ಇಜಿಪ್ತ
೨೦) ಎಲ್, ಸಲ್ವಡೋರ
೨೧) ಇಥಿಯೋಪಿಯಾ
೨೨) ಫ್ರಾನ್ಸ
೨೩) ಗ್ರೀಸ
೨೪) ಗೌಟಿಮಾಲಾ
೨೫) ಹಯುತಿ
೨೬) ಹೊರಡುರಾಸ
೨೭) ಐಸಲಂಡ
೨೮) ಭಾರತ
೨೯) ಇಂಡೋನೇಶಿಯಾ
೩೦) ಇರಾಣ
೩೧) ಇರಾಕ
೩೨) ಇಸ್ರಾಯಿಲ
೩೩) ಲೆಬೆನಾನ್
೩೪) ಲೈಬೇರಿಯಾ
೩೫) ಲಕ್ಸೆಂಬರ್ಗ
೩೬) ಮೆಸೆಕೋ
೩೭) ನೆದರ್ಲಂಡ್ಸ
೩೮) ನ್ಯೂಝಿಲಂಡ
೩೯) ನಿಕಾಗ್ವ
೪೦) ನಾರ್ವೆ
೪೧) ಪಾಕಿಸ್ತಾನ
೪೨) ಪಾನಾಮಾ
೪೩) ಪರಾಗ್ವೆ
೪೪) ಪೇರು
೪೫) ಫಿಲಿಫಾಯಿನ್ಸ
೪೬) ಪೋಲಂಡ
೪೭) ಸೌದಿಅರೇಬಿಯಾ
೪೮) ಸ್ವೀಡನ್
೪೯) ಸಿರಿಯಾ
೫೦) ಥೈಲಂಡ
೫೧) ತುರ್ಕಸ್ಥಾನ
೫೨) ಯುಕ್ರೇನಿಯನ್ (ಎಸ್. ಎಸ್. ಆರ್.)
೫೩) ಯುನಿಯನ್ಆಫ ಸೌಥಆಫ್ರಿಕಾ
೫೪) ರಶಿಯಾ
೫೫) ಗ್ರೇಟಬ್ರಿಟನ್
೫೬) ಯುನೈಟೆಡ್ ಸ್ಟೇಟ್ಸ
೫೭) ಉರುಗ್ವೆ
೫೮) ವ್ಹೆನಿಝುಯೆಲಾ
೫೯) ಎಮೆನ್
೬೦) ಯುಗೋಸ್ಲೋವಿಯಾ

ಅಹಿಂಸಾ ಜೇನತುಪ್ಪ

ಶುದ್ಧವಾದ ಜೇನತುಪ್ಪವು

ಶಕ್ತಿಯನ್ನೂ ಉತ್ಸಾಹವನ್ನೂ ಕೊಡುತ್ತದೆ.
ಅನೇಕ ವ್ಯಾಧಿಗಳಿಗೆ ಅಮೃತ ಸಮಾನವು.

ಅಶುದ್ಧವಾದದ್ದು ವಿಷಸಮಾನವು.

ಅಹಿಂಸಾ ಜೇನತುಪ್ಪವನ್ನೇ
ಉಪಯೋಗಿಸಿರಿ.

ನಿಮ್ಮೂರಿನ ಖಾದಿಭಾಂಡಾರ ಮತ್ತು
ಔಷಧದ ಅಂಗಡಿಗಳಲ್ಲಿ ವಿಚಾರಿಸಿರಿ.

ವಿವರಗಳಿಗಾಗಿ
ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮುಂಬೈ ಗ್ರಾಮೋದ್ಯೋಗ ಮಂಡಳ

ಕರ್ನಾಟಕ ಶಾಖೆ, ಧಾರವಾಡ